# ವಿಜ್ಞಾನ

ಎಂ. ಎನ್. ವಿಶ್ವನಾಥಯ್ಯ, ಎಂ.ಎಸ್‌ಸಿ.

ಮತ್ತು

ಬಿ.ವಿ. ಗೋವಿಂದರಾಜುಲು, ಎಂ.ಎಸ್‌ಸಿ.

(ಭೂ ವಿಜ್ಞಾನ ಶಾಖೆ, ಮೈಸೂರು ವಿಶ್ವವಿದ್ಯಾನಿಲಯ)

ಸಮಾಜ ಪುಸ್ತಕಾಲಯ



೧೯೫೬

ಶ್ರೀ ಗೌರಿಶಂಕರ ಬುಕ್ ಡಿಪೋ

ದೇವರಾಜ ಮಾರ್ಕೆಟ್ ಮೈಸೂರು

# ಅರಿಕೆ

ಇದು ವಿಜ್ಞಾನಯುಗ. ನಮ್ಮ ದೈನಂದಿನ ಜೀವನ ಬಹುಮಟ್ಟಿಗೆ ವಿಜ್ಞಾನವನ್ನೇ ಅನುಸರಿಸಿದೆಯೆಂದು ಹೇಳುವ ಮಾತು ಉತ್ಪ್ರೇಕ್ಷೆಯಾಗಲಾರದು. ರಾಷ್ಟ್ರದ ಬೆಳವಣಿಗೆಯಲ್ಲಿ ವಿಜ್ಞಾನದ ಪಾತ್ರ ಬಹು ಮುಖ್ಯವಾದುದು. ಕಾರಣಾಂತರಗಳಿಂದ ನಮ್ಮ ದೇಶದಲ್ಲಿ ವಿಜ್ಞಾನದ ಬೆಳವಣಿಗೆಗೆ ಸಾಕಷ್ಟು ಪ್ರೋತ್ಸಾಹ ದೊರೆಯಲಿಲ್ಲ. ವರಾಹ ಮಿಹಿರ, ಭಾಸ್ಕರಾಚಾರ್ಯ, ಮಿಹಿರಗುಲ ಹೀಗೆ ಆಗೊಂದು ಈಗ್ಗೊಂದು ವಿಜ್ಞಾನ ಮಹರ್ಷಿಯ ಹೆಸರು ನಮ್ಮ ದೇಶದ ಇತಿಹಾಸದಲ್ಲಿ ಕಂಡುಬರುತ್ತದೆ. ಈ ಮಹಾನುಭಾವರ ವಿಷಯ ಜನ ಸಾಮಾನ್ಯರ ದೃಷ್ಟಿಗೇ ಬರದಂತಾಗಿದೆ ನಮ್ಮ ಈಗಿನ ಸ್ಥಿತಿ.

ಕೆಲವು ಶತಮಾನಗಳ ದಾಸ್ಯದ ಫಲವಾಗಿಯೂ ಸಹ, ಈಚಿನ ವರ್ಷಗಳಲ್ಲೂ ನಮ್ಮ ದೇಶದ ವೈಜ್ಞಾನಿಕ ಪ್ರಗತಿ ಮುಂದುವರಿದಿರುವ ಪಾಶ್ಚಿಮಾತ್ಯ ರಾಷ್ಟ್ರಗಳೊಡನೆ ಹೋಲಿಸುವಷ್ಟು ಮುಂದುವರಿದಿಲ್ಲವೆಂದೇ ಹೇಳಬೇಕು. ನಾಡು ಸ್ವತಂತ್ರವಾದ ಮೇಲೆ ನಮ್ಮ ಜನನಾಯಕರು ದೇಶದ ಜನರಲ್ಲಿ ವೈಜ್ಞಾನಿಕ ದೃಷ್ಟಿಯನ್ನು ಬೆಳೆಸಲು ಎಲ್ಲಪ್ರಯತ್ನಗಳನ್ನೂ ಮಾಡುತ್ತಿರುವುದು ಬಹಳ ಪ್ರೋತ್ಸಾಹಕರ ರಾಜಕೀಯ ಆಂದೋಳನದಂತೆ ವಿಜ್ಞಾನದ ಆಂದೋಳನವಾಗಬೇಕು. ಅಂದಿಗೆ ರಾಷ್ಟ್ರ ಕಲ್ಯಾಣವಾದಂತೆಯೆ.

ಈ ತೆರನಾದ ಒಂದು ರಾಷ್ಟ್ರೀಯ ಕ್ರಾಂತಿಗೆ ಇದು—ಈ ಕಿರುಹೊತ್ತಗೆ ನಮ್ಮ ಅಲ್ಪಕಾಣಿಕೆ. ವಿಜ್ಞಾನ ಶ್ರೀಗೆ ಇದು ನಮ್ಮ ಅಳಲುಸೇವೆ ಮಳಲಭಕ್ತಿ.

ಇಲ್ಲಿ ವಿಜ್ಞಾನದ ಬೆಳವಣಿಗೆಗೆ ಪ್ರಸಿದ್ಧ ವಿಜ್ಞಾನಿಗಳ ಆಧಾರಸ್ತಂಭದಂತಿರುವ ಪ್ರಸಿದ್ಧ ವಿಜ್ಞಾನಿಗಳ ಜೀವನವನ್ನು ಪರಿಚಯಮಾಡಿಕೊಡಲು ಪ್ರಯತ್ನಿಸಿದ್ದೇವೆ. ಬಹು ಭಕ್ತಿಯಿಂದ ಶ್ರದ್ಧೆಯಿಂದ ಕೈಗೊಂಡ ಈ ಪ್ರಯತ್ನದಲ್ಲಿ ನ್ಯೂನತೆಗಳೇನಾದರೂ ಕಂಡುಬಂದಲ್ಲಿ ಬಲ್ಲವರು ಮನ್ನಿಸಬೇಕಾಗಿ ಪ್ರಾರ್ಥನೆ.

ಅತ್ಯಲ್ಪಕಾಲದಲ್ಲಿಯೇ ಪುಸ್ತಕವನ್ನು ಬಹು ಅಂದವಾಗಿ ಅಚ್ಚು ಮಾಡಿಕೊಟ್ಟ ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸಿನ ಒಡೆಯರಾದ ಶ್ರೀ ಜಿ. ಎಚ್. ರಾಮರಾಯರಿಗೂ, ಪ್ರಕಾಶನದಲ್ಲಿ ನೆರವಾದ ಶ್ರೀ ಗೌರಿಶಂಕರ ಬುಕ್ ಡಿಪೋವಿನ ಒಡೆಯರಾದ ಶ್ರೀ ಬಿ. ಎಸ್. ಗುರು ಬಸಪ್ಪನವರಿಗೂ ನಮ್ಮ ಅನಂತ ವಂದನೆಗಳು. ಕನ್ನಡ ಜನ ಇದನ್ನು ಆದರದಿಂದ ಬರಮಾಡಿಕೊಂಡು ನಮ್ಮ ಈ ಮೊದಲ ಪ್ರಯತ್ನವನ್ನು ಪ್ರೋತ್ಸಾಹಿಸುವರೆಂದು ನಂಬಿದ್ದೇವೆ.

ಲೇಖಕರು

# ವಿಷಯ ಸೂಚಿಕೆ

# ಐಸಾಕ್ ನ್ಯೂಟನ್

ಕ್ರಿಸ್ತಶಕ ೧೬೪೨ನೆ ಇಸವಿ ಆದರಲ್ಲೂ ಡಿಸೆಂಬರ್ ತಿಂಗಳಿನ ಕ್ರಿಸ್ ಮಸ್ ದಿನ ವಿಜ್ಞಾನದ ಇತಿಹಾಸದಲ್ಲಿ ಸ್ವರ್ಣ ದಿನ. ವಿಜ್ಞಾನದ ಮಹಾ ಆಚಾರ್ಯನಾದ ಐಸಾಕ್‌ನ್ಯೂಟನ್ ಜನಿಸಿದುದು ಆ ಪವಿತ್ರ ದಿನದಲ್ಲಿ. ಇಂಗ್ಲೆಂಡಿನ ಲಿಂಕನ್‌ಷೈರ್ ಜಿಲ್ಲೆಯ ವೂಲ್ಸ್‌ಥಾರ್ಪ್ ನ್ಯೂಟನ್ ಹುಟ್ಟಿದ ಊರು. ಇಂಗ್ಲೆಂಡಿನ ಜನತೆ ಇಂದಿಗೂ ಅವನು ಹುಟ್ಟಿದ ಮನೆಯನ್ನು ರಾಷ್ಟ್ರೀಯ ಸ್ಮಾರಕವಾಗಿ ಉಳಿಸಿಕೊಂಡು ಬಂದಿದೆ. ವಿಜ್ಞಾನದ ವಿದ್ಯಾರ್ಥಿ ಗಳಿಗೆ ಅದೊಂದು ಪವಿತ್ರ ಕಾಶಿ. ಅವನು ಹುಟ್ಟಿದ ಮನೆಯ ಕೊಟಡಿ ಪವಿತ್ರ ದೇಗುಲವಿದ್ದಂತೆ. ವರ್ಷದುದ್ದಕ್ಕೂ ನೂರಾರು ಜನ ಈ ಪುಣ್ಯ ಕ್ಷೇತ್ರವನ್ನು ಸಂದರ್ಶಿಸಿ ಮಹಾನುಭಾವ, ವಿಜ್ಞಾನಮಹರ್ಷಿ ನ್ಯೂಟನ್ನನಿಗೆ ತಮ್ಮ ಭಕ್ತಿಗೌರವಗಳನ್ನು ಸಲ್ಲಿಸುತ್ತಾರೆ.

ಇವನು ಹುಟ್ಟಿದ ವರ್ಷ ಇಂಗ್ಲೆಂಡ್ ದೇಶದಲ್ಲಿ ರಾಜಕೀಯ ಗಲಭೆ ಗಳು ನಡೆಯುತ್ತಿದ್ದವು. ದೇಶದ ಜನರು ಯುದ್ಧಕ್ಕಾಗಿ ಸನ್ನದ್ಧರಾಗು ತ್ತಿದ್ದರು. ವೂಲ್ಸ್‌ಥಾರ್ಪ್‌ನಂತಹ ಸಣ್ಣ ಊರಿನ ಜನರೂ ಇದರಿಂದ ದೂರ ವಾಗಿದ್ದರೆಂದು ಹೇಳಲು ಸಾಧ್ಯವಿಲ್ಲ. ಯುದ್ಧವಾರ್ತೆ ಅವರ ಮನೆಮಾತಾ ಗಿತ್ತು. ಹೀಗಾಗಿ ತಮ್ಮ ಊರಿನ ಯಾವುದೋ ಬೀದಿಯಲ್ಲಿದ್ದ ಸಣ್ಣ ಮನೆಯೊಂದರಲ್ಲಿ ಜನಿಸಿದ ನ್ಯೂಟನ್ ಅವರಿಗೆ ಹೇಗೆ ನೆನಪಿಗೆ ಬಂದಾನು? ಎಲ್ಲೋ ಕೆಲವರು 'ಶ್ರೀಮತಿ ಹನ್ನಾ ನ್ಯೂಟನ್ನಳಿಗೆ ಗಂಡುಮಗುವಾಯಿ ತಂತೆ' ಎಂದುಕೊಂಡಿರಬಹುದು. ಆದರೂ ಆಕೆ ವಿಜ್ಞಾನಪ್ರಪಂಚಕ್ಕಿತ್ತ ಕಾಣಿಕೆ ಅನರ್ಘ್ಯವಾದುದು.

ನ್ಯೂಟನ್ ಹುಟ್ಟುವ ವೇಳೆಗಾಗಲೇ ತಂದೆಯನ್ನು ಕಳೆದುಕೊಂಡಿದ್ದನು. ತಾಯಿ ಹನ್ನಾಳಿಗೆ ಈ ಮಗುವೇ ಸರ್ವಸ್ವ, ತನ್ನ ಜೀವನದ ನಂದಾದೀವಿಗೆ. ಎಳೆಯಮಗು ಯಾವುದಾದರೂ ಒಂದು ಸಣ್ಣ ಪುಟ್ಟ ಕಾಯಿಲೆಯಿಂದ ನರಳುತ್ತಲೇ ಇತ್ತು. ಒಂದೆರಡು ಸಲ ಮುದ್ದು ಮಗನ ಆಸೆಯನ್ನೇ ತೊರೆಯಬೇಕಾಯಿತು. ತನ್ನ ಮಗುವನ್ನು ಉಳಿಸಿಕೊಡುವಂತೆ ದೇವರಲ್ಲಿ

ಮೊರೆಯಿಡುತ್ತಿದ್ದಳು. ಅವಳ ಪ್ರಾರ್ಥನೆಯೂ ನೆರವೇರಿತು. ನ್ಯೂಟನ್ ಸುಮಾರು ಎಂಬತ್ತೈದು ವರ್ಷಕಾಲ ಬಾಳಿ ಮಾನವ ವರ್ಗಕ್ಕೆ, ವಿಜ್ಞಾನದ ಬೆಳವಣಿಗೆಗೆ ಅಮೂಲ್ಯ ಕಾಣಿಕೆಯನ್ನೂ ಇತ್ತು ಕೀರ್ತಿಗಳಿಸಿದನು.

ಮಗನಿಗೆ ಮೂರು ವರ್ಷ ವಯಸ್ಸಾಗಿದ್ದಾಗ ಹನ್ನಾಳು ಬಾರ್ನಬಾಸ್ ಸ್ಮಿತ್ ಎಂಬ ಪಾದ್ರಿಯನ್ನು ಮದುವೆಯಾದಳು. ಇವನೂ ಸಹ ಅದೇ ಲಿಂಕನ್‌ಷೈರ್ ಜಿಲ್ಲೆಯ ನಾರ್ತ್‌ವಿಥಾಮ್ ಎಂಬ ಊರಿನ ಕ್ರಿಸ್ತದೇವಾಲಯದ ಅರ್ಚಕ. ಇದರಿಂದ ಎಳೆಯ ಮಗು ನ್ಯೂಟನ್ನನಿಗೆ ಯಾವ ತೊಂದರೆಯೂ ಆದ ಹಾಗೆ ಕಾಣೆ. ಅವನು ತನ್ನ ಆಸ್ತಿಯಲ್ಲಿ ಕೊಂಚ ಭಾಗ ಜಮೀನನ್ನು ಮಗುವಿನ ಹೆಸರಿಗೆ ಬರೆದು, ಅದರ ಪೋಷಣೆಯ ಭಾರವನ್ನು ವೂಲ್ಸ್‌ಥಾರ್ಪ್‌ನಲ್ಲಿದ್ದ ಅವನ ಅಜ್ಜಿ ಅಯಸ್ಕಾಫ್‌ಳಿಗೆ ವಹಿಸಿದನು. ಈ ಮುದುಕಿ ಮೊಮ್ಮಗನ ಮೇಲೆ ಸದಾ ರೇಗಾಡುತ್ತಿದ್ದಳು. ಮಗು ಕೂತರೆ ತಪ್ಪು, ನಿಂತರೆ ತಪ್ಪು. ಬಾಲ್ಯ ಸಹಜವಾದ ಸಣ್ಣ ಪುಟ್ಟ ತಪ್ಪುಗಳಿಗೆಲ್ಲಾ ಹೆಚ್ಚು ನಿಂದಿಸುತ್ತಿದ್ದಳು. ಬೆಳೆಯುತ್ತಿದ್ದ ಮಗುವಿಗೆ ಪ್ರೀತಿಯೆಂಬುದೇ ಅಪರೂಪವಾಯಿತು. ಆಟ ಪಾಟಗಳಲ್ಲಿ ಅಷ್ಟು ಆಸಕ್ತಿಯೂ ಇರುತ್ತಿರಲಿಲ್ಲ. ಮನೆಗೆ ಬಂದರೆ ಅಜ್ಜಿಯ ಭಯ. ಹೀಗೆ ನ್ಯೂಟನ್ನನಿಗೆ ಸ್ಕಿಲ್ಲಿಂಗ್ ಟನ್ ಎಂಬ ಊರಿನ ಪ್ರಾಥಮಿಕ ಶಾಲೆಯಲ್ಲಿ ವಿದ್ಯಾಭ್ಯಾಸ ನಡೆಯಿತು. ಅವನಿಗೆ ಹನ್ನೆರಡು ವರ್ಷ ವಯಸ್ಸಾದಾಗ ಅವನ ಅಜ್ಜಿ ಗ್ರಾಂಥಾಂ ಪಟ್ಟಣದಲ್ಲಿದ್ದ ಗ್ರಾಮರ್ ಸ್ಕೂಲ್ ಎಂಬ ಪಾಠಶಾಲೆಗೆ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಸೇರಿಸಿದಳು. ಇಲ್ಲಿ ಅವನ ಪ್ರೌಢ ವ್ಯಾಸಂಗ ಮುಂದುವರಿಯಿತು. ಹೊಸ ಹೊಸ ಪುಸ್ತಕಗಳನ್ನು ಓದುವುದರಲ್ಲಿ ಕೊಂಚ ಆಸಕ್ತಿಯೂ ಉಂಟಾಯಿತು. ಆದರೆ ಅವನಿಗೆ ಶಾಲೆಯ ಪಠ್ಯ ಪುಸ್ತಕಗಳೆಂದರೆ ಅಷ್ಟಕ್ಕಷ್ಟೆ. ತರಗತಿಯಲ್ಲಿದ್ದ ಹುಡುಗರಲ್ಲೆಲ್ಲಾ ನ್ಯೂಟನ್ನನೇ ನರಪೇತಲ. ಬಹು ಕುಚೇಷ್ಟೆ ಬೇರೆ. ಹೀಗಾಗಿ ಉಪಾಧ್ಯಾಯರು ಇವನನ್ನು "ಕೆಲಸಕ್ಕೆ ಬಾರದ ನಿಷ್ಪ್ರಯೋಜಕ, ಮಡ್ಡಿ" ಎನ್ನುತ್ತಿದ್ದರು.

ಆದರೆ ಇದ್ದಕ್ಕಿದ್ದಂತೆ ಒಂದು ದಿನ ಶಾಲೆಯಲ್ಲಿ ಘಟನೆಯೊಂದು ನಡೆಯಿತು. ಅದು ನ್ಯೂಟನ್ನನ ಜೀವಮಾನದಲ್ಲೇ ದೊಡ್ಡ ಮಾರ್ಪಾಟನ್ನು ಮಾಡುವಷ್ಟು ಪ್ರಾಮುಖ್ಯತೆಯನ್ನು ಪಡೆಯಿತು. ಅವನ ಸಹಪಾಠಿಯಾಗಿದ್ದ

ಬಲಿಷ್ಠ ಹುಡುಗನೊಬ್ಬನು ನ್ಯೂಟನ್‍ನನ್ನು ಕೆಣಕಿ ಕೀಟಲೆಮಾಡಿದನು. ಪಾಠಪ್ರವಚನಗಳಲ್ಲಿ ಅಷ್ಟು ಮುಂದಾಗಿರದೆ, ಉಪಾಧ್ಯಾಯರಿಂದ ಸದಾ ಬೈಗುಳನ್ನು ತಿನ್ನುತ್ತಿದ್ದ ನ್ಯೂಟನ್‍ನನ್ನು ಕಂಡರೆ ಕೊಂಚ ಬಲಿಷ್ಠರಾದ, ಬುದ್ಧಿವಂತರೆನಿಸಿದ ಹುಡುಗರಿಗೆ ಕುಚೋದ್ಯ ಮಾಡಬೇಕೆನಿಸುತ್ತಿತ್ತು. ಆದರೆ, ಆದಿನ ನ್ಯೂಟನ್ನನಿಗೆ ಎಂದೂ ಇಲ್ಲದ ಆವೇಶ ಬಂದು ಎದುರಾಳಿ ಯನ್ನು ಹೊಡೆದಪ್ಪಳಿಸಿದನು. ತನಗಿಂತಲೂ ಬಲಿಷ್ಠನಾದ ಅವನನ್ನು ಹೆಡೆ ಮುರಿ ಕಟ್ಟಿಹಾಕಿದನು. ನ್ಯೂಟನ್ನನೇ ಕಾಳಗದಲ್ಲಿ ಗೆದ್ದು ಜಯಶೀಲನಾದನು. ಎದುರಾಳಿಯ ಮುಖಭಂಗವೂ ಆಯಿತು. ನ್ಯೂಟನ್ನನನ್ನು ಹಾಸ್ಯಮಾಡು ತ್ತಿದ್ದವರೆಲ್ಲಾ ಸುಮ್ಮನಾದರು. ಉಪಾಧ್ಯಾಯರು ಸಹ ಇದನ್ನು ಕೇಳಿ ಆಶ್ಚರ್ಯಪಟ್ಟರಂತೆ. ಈ ಘಟನೆಯಿಂದ ನ್ಯೂಟನ್ನನಿಗೆ ವಿಶೇಷವಾದ ಮನೋಧಾರ್ಡ್ಯ, ಸ್ವಾಭಿಮಾನ, ಸ್ವಶಕ್ತಿಯಲ್ಲಿ ಅಚ್ಚಳಿಯದ ನಂಬಿಕೆ ಬರು ವಂತಾಯಿತು. ಮಾನಸಿಕವಾಗಿಯೂ ಬಹು ಹೆಚ್ಚಿನ ಪರಿಣಾಮವಾಯಿತೆನ್ನ ಬೇಕು. ಅವನಲ್ಲಿ ಅದುವರೆಗೆ ಸನ್ನಿವೇಶವಶಾತ್ ಮನೆಮಾಡಿದ್ದ ಕೀಳು ಭಾವನೆ, ಮನೋದೌರ್ಬಲ್ಯ, ಮಡ್ಡಿತನ ಕ್ರಮೇಣ ಮಾಯವಾದುವು. ಆ ವರ್ಷದ ಪರೀಕ್ಷೆಯಲ್ಲಿ ನ್ಯೂಟನ್ ಇಡೀ ತರಗತಿಗೇ ಮೊದಲನೆಯವ ನಾಗಿ ಉತ್ತೀರ್ಣನಾದನು.

ಇದಾದ ಕೊಂಚ ದಿನಗಳಲ್ಲೇ ಇವನ ಮಲತಂದೆ, ಬಾರ್ನಬಾಸ್ ಸ್ಮಿತ್ ಸತ್ತು ಹೋದನು. ಹೆಚ್ಚು ಜನಸಹಾಯವಿಲ್ಲದ ಇವನ ತಾಯಿಗೆ ತನ್ನ ಗಂಡನಿಗೆ ಸೇರಿದ್ದ ಹೊಲಗದ್ದೆಗಳನ್ನು ನೋಡಿಕೊಳ್ಳುವುದೇ ಬಹು ಕಷ್ಟವಾಯಿತು. ಗ್ರಾಮರ್ ಸ್ಕೂಲಿನಲ್ಲಿ ಓದುತ್ತಿದ್ದ ಮಗನನ್ನು ಶಾಲೆ ಯಿಂದ ಬಿಡಿಸಿ ಮನೆಗೆ ಕರೆಸಿಕೊಂಡಳು. ಆಗ ನ್ಯೂಟನ್ನನಿಗೆ ಕೇವಲ ಹದಿನಾಲ್ಕು ವರ್ಷ ವಯಸ್ಸು.

ಇದರಿಂದ ಅವಳಿಗೆ ಅಷ್ಟು ಉಪಯೋಗವಾಗಲಿಲ್ಲ. ಆಕೆಯ ಮಗನು ಹೊಲ ಉಳುವುದನ್ನು ಮರೆತು, ದನಕರುಗಳ ರೊಪ್ಪವನ್ನು ಮರೆತು ಸದಾ ಏನನ್ನೋ ಆಲೋಚಿಸುತ್ತಿದ್ದನು. ಈ ವೇಳೆಗೆ ನ್ಯೂಟನ್ನನಿಗೆ ಪಾಠಗಳಲ್ಲಿ ಹೊಸ ವಿಷಯಗಳನ್ನು ಗ್ರಹಿಸುವುದರಲ್ಲಿ ವಿಶೇಷ ಆಸಕ್ತಿ ತಲೆದೋರಿತ್ತು. ವಿರಾಮ ದೊರೆತ ವೇಳೆಯಲ್ಲಿ ಹಲವಾರು ಸಣ್ಣಪುಟ್ಟ ಯಂತ್ರಗಳ ಮಾದರಿ

ಯನ್ನು ನಿರ್ಮಿಸಿ ಕಾಲ ಕಳೆಯುತ್ತಿದ್ದನು. ಗಾಳಿಯಿಂದ ನಿರಾತಂಕವಾಗಿ ಚಲಿಸುವ ಸಾಧನವೊಂದನ್ನು ಮಾಡಿದನು. ನೀರಿನ ಚಲನೆಯಿಂದಲೆ ನಡೆಯುವ ಗಡಿಯಾರವೊಂದನ್ನು ತಯಾರಿಸಿದನು. ಚಿತ್ರವಿಚಿತ್ರವಾದ ಲೆಕ್ಕಗಳನ್ನು ಗುಣಿಸುತ್ತಿದ್ದನು. ಮಗನ ಈ ನಡವಳಿಕೆ ತಾಯಿಗೆ ಅಷ್ಟು ಹಿಡಿಸಲಿಲ್ಲ. ಅವಳಿಂದ ಅವನ ಮುಂದಿನ ವಿದ್ಯಾಭ್ಯಾಸಕ್ಕೆ ಯಾವ ಉತ್ತೇಜನವೂ ಕಾಣಲಿಲ್ಲ. ಆದರೆ ಅದೃಷ್ಟವಶಾತ್ ಸೋದರಮಾವನ ದೃಷ್ಟಿ ಇವನಮೇಲೆ ಬಿತ್ತು. ಈತನು ಅದೇ ಲಿಂಕನ್‌ಷೈರ್ ಜಿಲ್ಲೆಯ ಬರ್ಟನ್ ಕಾಗಲ್ಸ್ ಶಾಲೆಯ ಮುಖ್ಯಸ್ಥನಾಗಿದ್ದನು. ಸಾಲದುದಕ್ಕೆ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದ ಟ್ರಿನಿಟಿ ಕಾಲೇಜಿನ ಸದಸ್ಯನೂ ಹೌದು. ಸೋದರಳಿಯನ ವಿದ್ಯಾ ಪ್ರತಿಭೆಯನ್ನು ಕಂಡ ಈತ ಮತ್ತೆ ನ್ಯೂಟನ್‌ನನ್ನು ಶಾಲೆಗೆ ಕಳುಹಿಸುವಂತೆ ತನ್ನ ತಂಗಿಯನ್ನು ಬಹು ಒತ್ತಾಯ ಪಡಿಸಿದನು. ಹೀಗಾಗಿ ೧೬೬೧ನೆ ಜೂನ್ ೫ ನೆ ತಾರೀಕು ನ್ಯೂಟನ್ ಕೇಂಬ್ರಿಡ್ಜ್‌ನ ಟ್ರಿನಿಟಿ ಕಾಲೇಜನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಸೇರಿದನು. ಅದೇ ವರ್ಷದ ಜೂಲೈ ೮ ನೆ ತಾರೀಕು ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲೂ ಉತ್ತೀರ್ಣನಾಗಿ ಬಿ.ಎ. ತರಗತಿಯನ್ನೂ ಸೇರಿದನು. ನ್ಯೂಟನ್ನನಿಗೆ ಗಣಿತವೆಂದರೆ ಅಪಾರ ಆಸಕ್ತಿ. ಕಳಿತ ಸಿಗುರಿನ ರಸವತ್ತಾದ ಕಬ್ಬನ್ನು ತಿಂದಂತೆ. ಅಂಕಗಣಿತ, ರೇಖಾಗಣಿತಗಳನ್ನೂ, ಇವುಗಳ ಜತೆಗೆ ಖಗೋಳಶಾಸ್ತ್ರವನ್ನೂ ಅರಿಸಿಕೊಂಡು ೧೬೬೫ ನೆ ಜನವರಿಯಲ್ಲಿ 'ಬ್ಯಾಚೆಲರ್ ಆಫ್ ಆರ್ಟ್ಸ್' ಪದವಿಯನ್ನೂ ಸಂಪಾದಿಸಿದನು. ಆಗ ಅವನಿಗೆ ಸುಮಾರು ಇಪ್ಪತ್ತೆರಡು ವರ್ಷ. ಆ ಸಣ್ಣ ವಯಸ್ಸಿನಲ್ಲೇ ಇವನಲ್ಲಿ ಕಂಡುಬಂದ ಗಣಿತ ವಿಜ್ಞಾನದ ಪ್ರತಿಭೆ ಅಸಾಧಾರಣವಾದುದು. ಗಣಿತ ವಿಜ್ಞಾನದಲ್ಲಿ ಅತ್ಯಂತ ಪ್ರಾಮುಖ್ಯವಾದ 'ಬೈನಾಮಿಯಲ್ ಥಿಯರಂ'ಅನ್ನು ಕಂಡುಹಿಡಿದನು. ಇದಾದ ಕೊಂಚ ದಿನಗಳಲ್ಲೇ 'ಇಂಟೆಗ್ರಲ್ ಕ್ಯಾಲುಕ್ಯುಲಸ್' ಎಂಬ ವಿಭಾಗದ ಮೂಲತತ್ತ್ವಗಳನ್ನೂ, ವಕ್ರರೇಖೆಗಳ ಮತ್ತು ಘನವಸ್ತುಗಳ ವಿಸ್ತೀರ್ಣವನ್ನೂ ನಿರ್ಧರಿಸುವ ವಿಧಾನಗಳನ್ನೂ ವಿವರಿಸಿ ಪ್ರಕಟಿಸಿದನು. ಅನೇಕ ದೊಡ್ಡ ದೊಡ್ಡ ವಿದ್ವಾಂಸರು ಇವನ ವಿದ್ವತ್ತನ್ನು ಬಹುವಾಗಿ ಮೆಚ್ಚಿದರು.

ಆ ಕಾಲದಲ್ಲೇ ಇಂಗ್ಲೆಂಡ್‌ನಲ್ಲಿ ಭಯಂಕರವಾದ ಪ್ಲೇಗ್‌ರೋಗ

ತಲೆದೋರಿತು. ಇವನು ಓದುತ್ತಿದ್ದ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯವನ್ನೂ ಮುಚ್ಚಿದರು. ನ್ಯೂಟನ್ ತನ್ನ ಊರಾದ ವೂಲ್ಸ್ ಥಾರ್ಪಿಗೆ ಹಿಂದಿರುಗಿದನು. ಓದಿನ ಹವ್ಯಾಸವಿಲ್ಲದುದರಿಂದ ಅಲ್ಲಿ ಇಲ್ಲಿ ಸುತ್ತಾಡುತ್ತಾ ಸಂತೋಷವಾಗಿ ಕಾಲ ಕಳೆಯುತ್ತಿದ್ದನು. ಎಷ್ಟೋ ಒಂದೊಂದು ಬಾರಿ ವಿಪರೀತ ಯೋಚನಾಮಗ್ನನಾಗುತ್ತಿದ್ದನು.

ಹೀಗೆ ಒಂದು ದಿನ ತನ್ನ ಊರಿನ ಬಳಿಯಲ್ಲಿದ್ದ ಸೇಬಿನ ತೋಟದಲ್ಲಿ ಅಡ್ಡಾಡುತ್ತಿದ್ದನಂತೆ. ಆಗ ಮಾಗಿದ ಸೇಬಿನ ಹಣ್ಣೊಂದು ಇವನು ನೋಡುತ್ತಿದ್ದಂತೆಯೇ ಮರದಿಂದ ಕೆಳಕ್ಕೆ ಬಿದ್ದಿತು. ಈ ಅದ್ಭುತ ಘಟನೆ ಅವನ ಮನಸ್ಸಿನಲ್ಲಿ ದೊಡ್ಡದಾದ ಆಲೋಚನಾ ತರಂಗಗಳನ್ನೇ ಎಬ್ಬಿಸಿತು. ಎಷ್ಟು ಅಲ್ಪವಾಗಿತ್ತೋ ಅಷ್ಟೇ ಮಹತ್ವವೂ ಆಯಿತು. ಸೇಬಿನ ಹಣ್ಣು ನೆಲದ ಮೇಲೆ ಏಕೆ ಬಿದ್ದಿತು? ಕೆಳಕ್ಕೆ ಬಿದ್ದಿತೇ ಹೊರತು ಮೇಲಕ್ಕೆ ಏಕೆ ಹೋಗಲಿಲ್ಲ? ಬೀಳುವಾಗಲೂ ಬಾಗಿ ಬೀಳದೆ ನೇರವಾಗಿಯೇ ಏತಕ್ಕೆ ಬಿತ್ತು? ಈ ಎಲ್ಲ ಪ್ರಶ್ನೆಗಳೂ ಒಂದಾದ ಮೇಲೊಂದು ಅವನಲ್ಲಿ ಮೂಡಿ ನ್ಯೂಟನ್ ಯೋಚನೆಯಲ್ಲೇ ತಲ್ಲೀನನಾದ. ಉತ್ತರವೂ ದೊರೆಯಿತು. ಭೂಮಿಯ ಯಾವುದೋ ಒಂದು ಶಕ್ತಿ ತನ್ನ ಮೇಲಿರುವ ಪ್ರತಿಯೊಂದು ವಸ್ತುವನ್ನೂ ತನ್ನ ಬಳಿಗೇ ಆಕರ್ಷಿಸುತ್ತದೆ. ಇದೇ ಗುರುತ್ವಾಕರ್ಷಣಶಕ್ತಿ. ಇದರಿಂದ ವಸ್ತುಗಳೆಲ್ಲಾ ನೆಮ್ಮದಿಯಿಂದಿರಲು ಸಾಧ್ಯ. ಇಲ್ಲದಿದ್ದರೆ ಭೂಮಿಯ ಮೇಲಿನ ವಸ್ತುಗಳೆಲ್ಲಾ ಸಿಕ್ಕಾಪಟ್ಟೆ ಹಾರಾಡುತ್ತಾ ಒಂದು ದೊಡ್ಡ ಪ್ರಳಯವೇ ಆಗುತ್ತಿತ್ತೊ ಏನೋ? ಆಕಾಶದಲ್ಲಿ ಕಂಡುಬರುವ ಎಲ್ಲಾ ಗ್ರಹಗಳೂ, ನಕ್ಷತ್ರಗಳೂ ಇದೇ ತೆರನಾದ ಪರಸ್ಪರಾಕರ್ಷಣ ಶಕ್ತಿಗೆ ಒಳಗಾಗಿವೆಯೆಂದೂ ತಿಳಿಯಪಡಿಸಿದನು. ಇಷ್ಟೇ ಅಲ್ಲದೆ ಇವನ್ನೆಲ್ಲಾ ಗಣಿತಶಾಸ್ತ್ರದ ಸಹಾಯದಿಂದ ವಿಶದೀಕರಿಸಿದನು. ಇವನ್ನೇ 'ಗುರುತ್ವಾಕರ್ಷಣ ಮೂಲ ನಿಯಮಗಳು' ಎನ್ನುತ್ತಾರೆ. ವಿಜ್ಞಾನಕ್ಕೊಂದು ಇದು ಅನುಪಮವಾದ ಕಾಣಿಕೆ.

ಪ್ಲೇಗ್ ಜಾಡ್ಯವೂ ಕಡಮೆಯಾಯಿತು. ೧೬೬೭ರಲ್ಲಿ ಮತ್ತೆ ನ್ಯೂಟನ್ ತನ್ನ ವಿದ್ಯಾರ್ಜನೆಗಾಗಿ ಕೇಂಬ್ರಿಡ್ಜ್‌ಗೆ ವಾಪಸು ಬಂದನು. ಅದೇ ವರ್ಷ ಅವನನ್ನು ಟ್ರಿನಿಟಿಕಾಲೇಜಿನ ವಿದ್ವನ್ಮಂಡಲಿಯ ಸದಸ್ಯನನ್ನಾ

ಗಿಯೂ ಚುನಾಯಿಸಿದರು. ಎಂ. ಎ. ಪದವಿಯೂ ದೊರೆಯಿತು. ಗಣಿತ ಮತ್ತು ಖಗೋಳ ಶಾಸ್ತ್ರಗಳ ಸಂಶೋಧನೆಗಳನ್ನು ಪ್ರಾರಂಭಿಸಿದನು. ಹಲ ವಾರು ವರ್ಷ ಬೆಳಕಿನ ವಿಷಯವಾಗಿ ಅಭ್ಯಾಸಮಾಡಿದನು. ದೂರದರ್ಶಕ ಯಂತ್ರಗಳನ್ನು ರಚಿಸಲು ಪ್ರಯತ್ನವನ್ನೂ ಮಾಡಿದನು. ೧೬೬೮ ರಲ್ಲಿ ಸುಮಾರು ಆರು ಅಂಗುಲ ಉದ್ದವಿದ್ದ ದೂರದರ್ಶಿಯು ನಿರ್ಮಾಣವೂ ಆಯಿತು. ಇದರ ಸಹಾಯದಿಂದ ಗುರು ಗ್ರಹ (Jupiter)ದ ಉಪಗ್ರಹ ಗಳನ್ನೂ ನೋಡಿ ನಲಿದನು. ಇವನ ಪ್ರತಿಭೆಯನ್ನು ಗಮನಿಸಿದ ಅದೇ ಕಾಲೇಜಿನ ಗಣಿತವಿಜ್ಞಾನದ ಪ್ರೊಫೆಸರ್ ಡಾ|| ಬ್ಯಾರೋ ಅವರು ಇವನನ್ನು ವಿಶೇಷವಾಗಿ ಗೌರವಿಸಿದರು. ಅವನ ಸಂಶೋಧನೆಗಳಿಗೆ ಹೆಚ್ಚು ಉತ್ತೇ ಜನವನ್ನೂ ಕೊಟ್ಟು ಪ್ರೋತ್ಸಾಹಿಸಿದರು. ಇದಾದ ಮರುವರ್ಷ ಡಾ|| ಬ್ಯಾರೋ ಅವರು ನಿವೃತ್ತರಾದರು. ಮುಂದೆ ಗಣಿತ ವಿಭಾಗದ ಪ್ರೊಫೆಸ ರಾಗಿ ತಮ್ಮ ಸ್ಥಾನವನ್ನಲಂಕರಿಸಲು ನ್ಯೂಟನ್ನನೇ ಎಲ್ಲಾ ವಿಧದಲ್ಲೂ ಅರ್ಹನೆಂದೂ ತಿಳಿಸಿದರು. ಇವರ ಅಭಿಪ್ರಾಯಕ್ಕೆ ಮನ್ನಣೆಯನ್ನಿತ್ತು ಅಧಿಕಾರವರ್ಗದವರು ಯುವಕ ನ್ಯೂಟನ್ನನ್ನು ಗಣಿತದ ಪ್ರೊಫೆಸರಾಗಿಯೂ ನೇಮಿಸಿದರು. ಈ ಗೌರವ ಸಂದಾಗ ನ್ಯೂಟನ್ನನಿಗೆ ಕೇವಲ ಇಪ್ಪತ್ತಾರು ವರ್ಷ ವಯಸ್ಸಾಗಿತ್ತು.

ಈ ಹೊಸ ಕರ್ತವ್ಯದಲ್ಲಿ ನ್ಯೂಟನ್ ಅಷ್ಟು ಜಯಶಾಲಿಯಾಗಲಿಲ್ಲ. ಸಾಮಾನ್ಯ ಪಾಠಪ್ರವಚನಗಳಲ್ಲಿ ಅವನಿಗೆ ಅಷ್ಟು ಆಸಕ್ತಿಯಿರಲಿಲ್ಲ. ಸದಾ ಸಂಶೋಧನೆಗಳಲ್ಲಿ ಮನಸ್ಸು ಮಗ್ನವಾಗಿತ್ತು. ಹೀಗಾಗಿ ಇವನ ಉಪನ್ಯಾಸ ಗಳು ವಿದ್ಯಾರ್ಥಿಗಳಿಗೆ ಬಹು ನೀರಸವಾಗಿ ತೋರಿಬರುತ್ತಿದ್ದವು. ತರಗತಿ ಯಲ್ಲಿ ಅನೇಕಬಾರಿ ಕೇವಲ ಐದಾರು ವಿದ್ಯಾರ್ಥಿಗಳು ಮಾತ್ರ ಕುಳಿತು ಇವನ ಉಪನ್ಯಾಸಗಳನ್ನು ಕೇಳುತ್ತಿದ್ದರಂತೆ.

೧೬೭೨ರಲ್ಲಿ ಪ್ರೊ|| ನ್ಯೂಟನ್‌ನನ್ನು ದೇಶದ ಉನ್ನತ ವಿಜ್ಞಾನ ಮಂಡಲಿಯಾದ ರಾಯಲ್ ಸೊಸೈಟಿಯ ಸದಸ್ಯನನ್ನಾಗಿ ಆರಿಸಿ ಗೌರವಿಸಿ ದರು. ವಿಜ್ಞಾನಿಗಳಿಗೆ ಸಲ್ಲುವ ಗೌರವಗಳಲ್ಲೆಲ್ಲಾ ಇದು ಬಹು ಉನ್ನತ ವಾದುದು. ಆ ಮಂಡಲಿಯ ಸದಸ್ಯರು ಇವನ 'ದೂರದರ್ಶಿ'ಗಳನ್ನು ಬಹು ವಾಗಿ ಮೆಚ್ಚಿಕೊಂಡಿದ್ದರು. ೧೬೬೬ರಲ್ಲಿ 'ಸ್ಟೌರ್ ಬ್ರಿಡ್ಜ್ ಎಂಬ ಊರಿಗೆ

ಒಂದು ಉತ್ಸವಕ್ಕೆ ಹೋಗಿದ್ದಾಗ ನ್ಯೂಟನ್ ಗಾಜಿನ ಅಶ್ರಗವೊಂದನ್ನು (Prism) ಕೊಂಡುಕೊಂಡಿದ್ದನು. ಇದನ್ನುಪಯೋಗಿಸಿಕೊಂಡು ಬೆಳಕಿನ ವಿಷಯವಾಗಿ ಅನೇಕ ಪ್ರಯೋಗಗಳನ್ನು ನಡೆಸಿದನು. ಸ್ವಚ್ಛವಾದ ಬಿಳಿಯ ಬೆಳಕನ್ನು ಅಶ್ರಗದ ಮೂಲಕ ಹಾಯಿಸಿ ನೋಡಿದಾಗ ಅದರಲ್ಲಿ ಏಳು ಬಣ್ಣಗಳಿರುವುದು ಕಂಡುಬಂತು. ಅಂದರೆ ಬಿಳಿಯ ಬೆಳಕು ಕೆಂಪು, ಕಿತ್ತಳೆ, ಹಳದಿ, ಹಸುರು, ನೀಲಿ, ಶ್ಯಾಮಲಾ ಮತ್ತು ಊದಾ ಎಂಬ ಏಳು ಬಣ್ಣಗಳಿಂದ ಉಂಟಾಗಿದೆ. ಈ ಅಂಶಗಳನ್ನೆಲ್ಲಾ ಸಂಗ್ರಹಿಸಿ ಪ್ರಬಂಧವೊಂದನ್ನು ಬರೆದು ಮೊದಲ ಬಾರಿಗೆ ರಾಯಲ್ ಸೊಸೈಟಿಗೆ ಕಳುಹಿಸಿದನು. ಇದನ್ನು ಆ ಮಂಡಲಿಯ ಸಭೆಯಲ್ಲಿ ಓದಿದಾಗ ಅಲ್ಲಿ ನೆರೆದಿದ್ದ ವಿಜ್ಞಾನಿಗಳೆಲ್ಲರ ಕುತೂಹಲವೂ ಕೆರಳಿತು. ಕೆಲವರಿಗೆ ನ್ಯೂಟನ್ ವಾದ ಸರಿಯಾಗಿ ಕಂಡು ಬಂದರೆ, ಕೆಲವರಿಗೆ ತಪ್ಪಾಗಿ ತೋರಿತು. ಇಷ್ಟೇ ಅಲ್ಲದೆ ಇಡೀ ಯೂರೋಪ್ ಖಂಡದ ವಿಜ್ಞಾನ ವಲಯುಗಳಲ್ಲೆಲ್ಲಾ ಇದೊಂದು ದೊಡ್ಡ ಕ್ರಾಂತಿಯನ್ನೇ ಉಂಟುಮಾಡಿತೆನ್ನಬಹುದು. ೧೬೭೧ರಲ್ಲಿ ಪ್ರಾರಂಭವಾದ ಈ ಚರ್ಚೆ ೧೬೭೪ ರವರೆಗೂ ಮುಂದುವರಿಯಿತಂತೆ. ಇದನ್ನು ಕೇಳಿ ನ್ಯೂಟನ್ನನಿಗೆ ತಲೆ ಚಿಟ್ಟೆನಿಸಿರಬೇಕು. ಕೊನೆಗೆ ನ್ಯೂಟನ್ ಅಸಾಧಾರಣವಾದ ವಿಜ್ಞಾನಿಯೆಂದು ಎಲ್ಲರೂ ಒಪ್ಪಿಕೊಳ್ಳಬೇಕಾಯಿತು.

ಪ್ರತಿಭೆ ಹೀಗೆ ಹರಡುತ್ತಿದ್ದರೂ ನ್ಯೂಟನ್‌ನ ಹಣಕಾಸಿನ ಸ್ಥಿತಿ ಅಷ್ಟು ಉತ್ತಮವಾಗಿರಲಿಲ್ಲ. ಇವನು ಸದಸ್ಯನಾಗಿದ್ದ ರಾಯಲ್ ಸೊಸೈಟಿಗೆ ವಾರಕ್ಕೊಂದು ಷಿಲಿಂಗ್ ಚಂದಾ ಕೊಡಬೇಕಾಗಿತ್ತಂತೆ. ಇದರಿಂದ ತನಗೆ ವಿನಾಯಿತಿ ಕೊಡಬೇಕೆಂದು ಮಂಡಲಿಯನ್ನು ಪ್ರಾರ್ಥಿಸಿದನಂತೆ.

ನ್ಯೂಟನ್ ಗುರುತ್ವಾಕರ್ಷಣ ಶಕ್ತಿಯ ವಿಚಾರವಾಗಿ ಅನೇಕ ಪ್ರಯೋಗಗಳನ್ನೂ ಮಾಡುತ್ತಿದ್ದನು. ತನಗೆ ಈ ಪ್ರಯೋಗಗಳಲ್ಲಿ ಕಂಡು ಬಂದ ಫಲಿತಾಂಶಗಳನ್ನೆಲ್ಲಾ ಅಲ್ಲೊಂದು ಇಲ್ಲೊಂದರಂತೆ ಬರೆದಿಟ್ಟುಕೊಳ್ಳುತ್ತಿದ್ದನು. ಅದನ್ನು ಪ್ರಕಟಿಸುವ ಗೋಜಿಗೇ ಹೋಗಿರಲಿಲ್ಲ. ೧೬೮೪ರಲ್ಲಿ ಇವನ ಮಿತ್ರ ಹ್ಯಾಲಿ ಎಂಬಾತನು ಒಂದು ಸಲ ಇದನ್ನು ನೋಡಿ ಅವನ್ನೆಲ್ಲಾ ಜೋಪಾನವಾಗಿ ಪರಿಷ್ಕರಿಸಿ, ಒಂದುಗೂಡಿಸಿ ಪ್ರಕಟಿಸಿದನು. ಹೀಗಾಗದೆ ಇದ್ದರೆ ನಮಗೆ ನ್ಯೂಟನ್‌ನ ಪ್ರಸಿದ್ಧ ತತ್ವಗಳ ಪರಿಚಯವಾಗುತ್ತಿತ್ತೋ

ಇಲ್ಲವೋತಿಳಿಯದು. ೧೬೮೭ರಲ್ಲಿ "ಮ್ಯಾಥಮ್ಯಾಟಿಕಲ್ ಪ್ರಿನ್ಸಿಪಲ್ಸ್ ಆಫ್ ನ್ಯಾಚುರಲ್ ಫಿಲಾಸಫಿ" ಎಂಬ ಹೆಸರಿನಿಂದ ಈಗ ಒಂದು ಗ್ರಂಥ ಪ್ರಕಟವಾಯಿತು. ಇದಾದ ಮೇಲೆ ಹ್ಯಾಲಿ ಇತರ ಸಂಶೋಧನೆಗಳನ್ನೂ ಪ್ರಕಟಿಸಬೇಕೆಂದು ನ್ಯೂಟನ್ನನಿಗೆ ಬಹು ಒತ್ತಾಯ ಮಾಡುತ್ತಿದ್ದನು. ಮಿತ್ರನ ಈ ದಾಕ್ಷಿಣ್ಯಕ್ಕೆ ಒಳಗಾಗಿ ನ್ಯೂಟನ್ ಕೇವಲ ಎರಡು ವರ್ಷಗಳ ಅವಧಿಯಲ್ಲೇ ತನ್ನ ಸಂಶೋಧನೆಗಳನ್ನೆಲ್ಲಾ ಒಪ್ಪವಾದ ರೀತಿಯಲ್ಲಿ ಪರಿಷ್ಕರಿಸಿ "ಪ್ರಿನ್ಸಿಪಿಯ" ಎಂಬ ಹೆಸರಿನಿಂದ ಪುಸ್ತಕ ರೂಪವಾಗಿ ಪ್ರಕಟಿಸಿದನು. ಈ ಮಹಾ ಗ್ರಂಥದ ಪ್ರಕಟನೆಗೆ ಹ್ಯಾಲಿ ಹಗಲಿರುಳೆನ್ನದೆ ದುಡಿದು ವಿಜ್ಞಾನದ ಬೆಳವಣಿಗೆಗೆ ಬಹುಮಟ್ಟಿನ ಸಹಾಯ ಮಾಡಿದನೆನ್ನಬೇಕು. ಕೊನೆಗೆ ಗ್ರಂಥದ ಪ್ರಕಟಣೆಗೆ ತಗುಲಿದ ವೆಚ್ಚವನ್ನೆಲ್ಲಾ ತಾನೇ ವಹಿಸಿದನಂತೆ!

ಈ ವೇಳೆಯಲ್ಲಿ ನಡೆದ ಒಂದು ಘಟನೆ ವಿಜ್ಞಾನಿ ನ್ಯೂಟನ್‌ನನ್ನು ರಾಜಕೀಯರಂಗಕ್ಕೆ ಎಳೆಯಲು ಕಾರಣವಾಯಿತು. ದೇಶದ ದೊರೆಯಾದ ಎರಡನೆಯ ಜೇಮ್ಸ್ ವಿಶ್ವವಿದ್ಯಾನಿಲಯದ ನಿಯಮಗಳನ್ನು ಉಲ್ಲಂಘಿಸಿ ಆಲ್ಬರ್ಟ್ ಫ್ರಾನ್ಸಿಸ್ ಎಂಬ ಕ್ರೈಸ್ತಪಾದ್ರಿಗೆ ಎಂ. ಎ. ಪದವಿಯನ್ನು ನೀಡುವಂತೆ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯಕ್ಕೆ ಸೂಚನೆಯನ್ನಿತ್ತನು. ವಿಶ್ವವಿದ್ಯಾನಿಲಯದ ಅಧಿಕಾರಿಗಳು ದೊರೆಯ ಆಜ್ಞೆಯನ್ನು ಖಂಡಿಸಿದರು. ಅಧಿಕಾರ ವರ್ಗದಲ್ಲಿದ್ದು ಈ ಹೋರಾಟದಲ್ಲಿ ನ್ಯೂಟನ್ ಬಹು ಪ್ರಮುಖವಾದ ಪಾತ್ರವನ್ನೂ ವಹಿಸಿದನು. ವಿಶ್ವವಿದ್ಯಾನಿಲಯದಲ್ಲೆಲ್ಲಾ ನ್ಯೂಟನ್‌ನ ಕೀರ್ತಿ ಹಬ್ಬಿತು. ಅಲ್ಲದೆ ೧೬೮೯ರಲ್ಲಿ ಪಾರ್ಲಿಮೆಂಟಿಗೆ ವಿಶ್ವವಿದ್ಯಾನಿಲಯದ ಪ್ರತಿನಿಧಿಯಾಗಿಯೂ ಚುನಾಯಿತನಾದನು. ೧೬೯೦ರಲ್ಲಿ ಪಾರ್ಲಿಮೆಂಟ್ ವಿಸರ್ಜಿತವಾಯಿತು. ನ್ಯೂಟನ್‌ನ ಸದಸ್ಯತ್ವವೂ ಹೋಯಿತು.

ಆಗ ಇಂಗ್ಲೆಂಡಿನ ರಾಜಕೀಯದಲ್ಲಿ ಟೋರಿ ಮತ್ತು ವ್ಹಿಗ್ ಎಂಬ ಎರಡು ಪಕ್ಷಗಳಿದ್ದವು. ನ್ಯೂಟನ್ ವ್ಹಿಗ್ ಪಕ್ಷದ ಸದಸ್ಯನಾಗಿದ್ದನು. ಅರಮನೆಯ ಸರ್ವಾಧಿಕಾರವನ್ನು ಮೊಟಕು ಮಾಡಬೇಕು, ದುಂದುವೆಚ್ಚವನ್ನು ಆದಷ್ಟು ತಗ್ಗಿಸಬೇಕು, ಅದೇ ರೀತಿ ಜನಸಾಮಾನ್ಯರಿಗೆ ಹೆಚ್ಚು ಅನುಕೂಲಗಳನ್ನು ಒದಗಿಸಬೇಕು—ಇವೇ ಈ ರಾಜಕೀಯ ಪಕ್ಷದ ಧ್ಯೇಯಗಳಾಗಿದ್ದವು. ನ್ಯೂಟನ್ ಅಷ್ಟು ಮಾತುಗಾರನಲ್ಲ. ರಾಜಕೀಯ ಸಭೆಗಳಲ್ಲಿ

ನಿಂತು ಭಾಷಣಮಾಡುವುದೆಂದರೇನೇ ಆಗದು. ಹೀಗಾಗಿ ಪಾರ್ಲಿಮೆಂಟಿನಲ್ಲೂ ಮೂಕಸದಸ್ಯನಂತೆ ಕುಳಿತುಕೊಳ್ಳುತ್ತಿದ್ದನಂತೆ. ಎಂದೋ ಒಂದು ಬಾರಿ ಮಾತ್ರ ಜವಾನನೊಬ್ಬನನ್ನು ಕುರಿತು ಕಿಟಕಿಯ ಬಾಗಿಲು ಮುಚ್ಚುವಂತೆ ಹೇಳಿದನಂತೆ, ಅದೂ ಯಾರಿಗೂ ಕಾಣದ ಹಾಗೆ, ಕೇಳಿಸದ ಹಾಗೆ. ಇಷ್ಟಾದರೂ ಇವನ ಪಕ್ಷದ ನಾಯಕನಿಗೆ ಇವನನ್ನು ಕಂಡರೆ ಅಪಾರ ಗೌರವ. ಆಗಾಗ್ಯೆ ಈತನ ಸಲಹೆಗಳನ್ನೂ ಪಡೆಯುತ್ತಿದ್ದನಂತೆ.

ಇವನು ಒಮ್ಮೆ ಪಾರ್ಲಿಮೆಂಟ್ ಅಧಿವೇಶನದಲ್ಲಿ ಭಾಗವಹಿಸುತ್ತಾ ಲಂಡನ್ನಿನಲ್ಲಿದ್ದಾಗ ಅವನ ತಾಯಿಗೆ ತುಂಬಾ ಕಾಯಿಲೆಯೆಂಬ ಸುದ್ದಿ ತಲುಪಿತು. ಬಹು ವೇದನೆಯಾಯಿತು. ಹಣಕಾಸಿನ ಮುಗ್ಗಟ್ಟು ಉತ್ತಮಗೊಂಡಿರದೆ ಕಷ್ಟಕ್ಕೆ ಸಿಲುಕಿದ್ದ ಸಮಯ. ಆರೋಗ್ಯ ಬೇರೆ ಅಷ್ಟು ಚೆನ್ನಾಗಿರಲಿಲ್ಲ. ಅಲ್ಲದೆ ಅದೇ ಸಮಯದಲ್ಲಿ ತೆರವಾಗಿದ್ದ ಕೇಂಬ್ರಿಡ್ಜ್‌ನ ಟ್ರಿನಿಟಿ ಕಾಲೇಜಿನ ಮುಖ್ಯಾಧಿಕಾರಿ ಹುದ್ದೆಗೆ ಹಾಕಿದ್ದ ಅರ್ಜಿಯೂ ವ್ಯರ್ಥವಾಗಿತ್ತು. ಹೀಗೆ ಕಷ್ಟದ ಮೇಲೆ ಕಷ್ಟ ಒದಗಿತು. ಸುದ್ದಿ ಬಂದ ಕೂಡಲೇ ರುಗ್ಣಶಯ್ಯೆಯಲ್ಲಿದ್ದ ತಾಯಿಯನ್ನು ನೋಡಲು ವೂಲ್ಸ್‌ಥಾರ್ಪಿಗೆ ಹೊರಟನು. ಆ ವೇಳೆಗಾಗಲೇ ಅವಳ ಕಾಯಿಲೆ ಉಲ್ಬಣಿಸಿತ್ತು. ಹಗಲಿರುಳೆನ್ನದೆ ಆಕೆಯ ಪಕ್ಕದಲ್ಲಿ ಕುಳಿತು ಉಪಚಾರಮಾಡಿದನು. ಬಗೆಬಗೆಯ ಔಷಧೋಪಚಾರಗಳಾದರೂ ಕಾಯಿಲೆ ಗುಣವಾಗದೆ ಅವನ ಮುದ್ದಿನ ತಾಯಿ ತೀರಿಹೋದಳು. ನ್ಯೂಟನ್‌ನಿಗೆ ಈ ಅಗಲಿಕೆಯಿಂದ ದುಸ್ಸಹವಾದ ದುಃಖವಾಯಿತು. ಜೀವನವೇ ಒಂದು ದೊಡ್ಡ ಹೊರೆಯಾಗಿ ಪರಿಣಮಿಸಿ, ಬಾಳೇ ಸಾಕೆನ್ನುವಂತಾಯಿತು. ಬೈಬಲ್ ಮೊದಲಾದ ಪವಿತ್ರ ಗ್ರಂಥಗಳನ್ನು ಓದುತ್ತಾ ಮನಸ್ಸಿಗೆ ಶಾಂತಿಯನ್ನು ತಂದುಕೊಂಡನು. ಹೀಗೆ ಓದುವಾಗ ಬೈಬಲಿನಲ್ಲಿ ಕಂಡು ಬಂದ ನ್ಯೂನತೆಗಳನ್ನು ಕುರಿತು ತನ್ನ ಮಿತ್ರನೊಬ್ಬನಿಗೆ ಕಾಗದಗಳನ್ನೂ ಬರೆಯುತ್ತಿದ್ದನು. ಅಲ್ಲದೆ ತಾನು ಊಳಿಗಕ್ಕಿದ್ದ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದ ಚರ್ಚ್ ಸಂಸ್ಥೆಯವರೂ ಬೈಬಲನ್ನು ಸರಿಯಾದ ರೀತಿಯಲ್ಲಿ ವ್ಯಾಖ್ಯಾನಮಾಡುತ್ತಿಲ್ಲವೆಂದೂ ತನ್ನ ಅಧಿಕಾರವರ್ಗವನ್ನೇ ಖಂಡಿಸಿದನು. ತಾನು ಅವರ ಆಶ್ರಯದಲ್ಲಿದ್ದರೂ ಹೀಗೆ ಮಾಡಲು ಹಿಂಜರಿಯಲಿಲ್ಲ. ನ್ಯೂಟನ್ ವಿಜ್ಞಾನಿಯೇ ಅಲ್ಲದೆ ಸತ್ಯದ ಆರಾಧಕನೂ ಆಗಿದ್ದನೆಂಬು

ದಕ್ಕೆ ಇದಕ್ಕಿಂತ ಉತ್ತಮ ನಿದರ್ಶನ ಬೇಕಿಲ್ಲ. ನ್ಯೂಟನ್ ಆಗ ಬರೆದ ಧಾರ್ಮಿಕ ಲೇಖನಗಳು ಇಂದಿಗೂ ಅತ್ಯುತ್ತಮವಾದುವೆಂದು ಪರಿಗಣಿತ ವಾಗಿವೆ. ಸುಮಾರು ಆರು ವರ್ಷಕಾಲ, ೧೬೯೦ ರಿಂದ ೧೬೯೬ ರ ವರೆಗೆ ಧಾರ್ಮಿಕ ಗ್ರಂಥಗಳ ಆಳವಾದ ಅಭ್ಯಾಸವನ್ನು ಮಾಡಿದನು. ಅದೇ ಕಾಲೇಜಿನಲ್ಲಿದ್ದ ತತ್ತ್ವಶಾಸ್ತ್ರದ ಅಧ್ಯಾಪಕ ಬೆಂಟ್ಲಿಯೊಡನೆ ಈ ಧಾರ್ಮಿಕ ವಿಷಯಗಳನ್ನೂ ಚರ್ಚಿಸುತ್ತಿದ್ದನು. ವಿಜ್ಞಾನ ಶಾಖೆಯ ಪ್ರಾಧ್ಯಾಪಕನ ಈ ಧಾರ್ಮಿಕ ಶ್ರದ್ಧೆಯನ್ನು ಆ ತತ್ತ್ವಶಾಸ್ತ್ರಜ್ಞ ಬಹು ವಿಶೇಷವಾಗಿ ಮೆಚ್ಚಿ ಕೊಂಡನು. ಹೀಗೆ ನ್ಯೂಟನ್ ಯಾವ ಒಂದು ಭಾಗವನ್ನು ಹಿಡಿದರೂ ಆಳವಾದ ಅಭ್ಯಾಸವನ್ನು ಮಾಡುತ್ತಿದ್ದನು. ಅವನ ವಿಷಯಗ್ರಹಣಶಕ್ತಿ ಅಸಾಧಾರಣವಾದುದು.

ತಾಯಿ ನಿಧನಳಾದ ಮೇಲೆ ಲಂಡನ್ ನಗರಕ್ಕೆ ಹಿಂತಿರುಗಿದನು. ಅವನು ಸದಸ್ಯನಾಗಿದ್ದ ಪಾರ್ಲಿಮೆಂಟಿನ ಅವಧಿಯೂ ಮುಗಿದು ಹೊಸ ಚುನಾವಣೆಗಳು ನಡೆದವು. ಈ ಬಾರಿಯೂ ಮಿತ್ರರ ಒತ್ತಾಯಕ್ಕೊಳಗಾಗಿ ನ್ಯೂಟನ್ ಪಾರ್ಲಿಮೆಂಟಿನ ಸದಸ್ಯಸ್ಥಾನಕ್ಕೆ ಉಮೇದುವಾರನಾಗಿ ನಿಂತನು. ಚುನಾವಣೆಯಲ್ಲಿ ಸೋಲೂ ಆಯಿತು. ಇವನ ರಾಜಕೀಯ ಪಕ್ಷವಾದ ವ್ಹಿಗ್ ಪಕ್ಷ ಬಹು ಸಂಖ್ಯೆಯಲ್ಲಿ ಆರಿಸಿಬರಲಿಲ್ಲ. ಟೋರಿ ಪಕ್ಷದವರೇ ದೇಶದ ಅಧಿಕಾರ ಸೂತ್ರಗಳನ್ನು ವಹಿಸುವಂತಾಯಿತು. ನ್ಯೂಟನ್‌ನ ಉತ್ಸಾಹ ವೆಲ್ಲಾ ಕುಗ್ಗಿ ವಿಶೇಷ ಚಿಂತೆಗೆ ಒಳಗಾದನು. ಲಂಡನ್ ನಗರವನ್ನು ಬಿಟ್ಟು ಹತಾಶನಾಗಿ ಕೇಂಬ್ರಿಡ್ಜ್‌ಗೆ ಹಿಂದಿರುಗಿದನು. ಅಲ್ಲಿಯ ಅಧ್ಯಾಪಕ ವೃತ್ತಿ ಅಷ್ಟಾಗಿ ಮನಸ್ಸಿಗೆ ಹಿಡಿಸಲಿಲ್ಲ. ಮನವೆಲ್ಲಾ ಲಂಡನ್ ಪಟ್ಟಣದಲ್ಲಿ ಮನೆ ಮಾಡಿತ್ತು. ಮನಸ್ಸಿನಲ್ಲೆಲ್ಲಾ ವಿಜ್ಞಾನ ಮರೆಯಾಗಿ ಅದರ ಸ್ಥಾನವನ್ನು ರಾಜಕೀಯ ಆಕ್ರಮಿಸಿತ್ತು. ವಿಶ್ವವಿದ್ಯಾನಿಲಯದ ಕೆಲಸವನ್ನು ಮುಂದು ವರಿಸುವ ಯೋಚನೆಯನ್ನೂ ಬಿಟ್ಟುಬಿಟ್ಟನು.

ಇವೆಲ್ಲದರ ಪರಿಣಾಮವಾಗಿ ನ್ಯೂಟನ್‌ನ ಆರೋಗ್ಯ ಕೆಡುತ್ತಾ ಬಂದಿತು. ತನ್ನ ಉದ್ಗ್ರಂಥವಾದ 'ಪ್ರಿನ್ಸಿಪಿಯಾ'ವನ್ನು ಬರೆದ ಶ್ರಮ ಬೇರೆ. ಹೀಗಾಗಿ ಕ್ರಮೇಣ ಶಕ್ತಿ ಕುಗ್ಗುತ್ತಾ ಹೋಗಿ ನರಗಳ ದೌರ್ಬಲ್ಯ ಮತ್ತು ಇನ್‌ಸೋಮ್ನಿಯಾ ಎಂಬ ನಿದ್ರಾರಹಿತವಾದ ಭಯಂಕರ ಕಾಯಿಲೆ

ಗಳಿಗೆ ತುತ್ತಾದನು. ಇದರಿಂದ ಅವನ ವರ್ತನೆ ವಿಚಿತ್ರವಾಯಿತು. ಕಾರಣ ವಿಲ್ಲದೆ ರೇಗಾಡುವುದು, ಕಿರಿಚಾಡುವುದು ದಿನಚರಿಯಾಯಿತು. ಆಪ್ತಮಿತ್ರರು ಬಂದು ತನ್ನೊಡನೆ ಮಾತನಾಡುವಾಗಲೂ ಅಕಾರಣವಾಗಿ ಅವರೊಡನೆ ನಿಷ್ಠುರದಿಂದ ವರ್ತಿಸಿ ಜಗಳವಾಡುತ್ತಿದ್ದನು. ಅವನ ಆಪ್ತಮಿತ್ರರಿಗೆ ಬಹಳ ಯೋಚನೆಗಿಟ್ಟುಕೊಂಡಿತು. ಮನೆಯಲ್ಲಿ ಆರೈಕೆಮಾಡುವವರು ಯಾರೂ ಇರಲಿಲ್ಲ. ನ್ಯೂಟನ್‌ನ ಮದುವೆಯೇ ಆಗಿರಲಿಲ್ಲ. ಹೀಗಾಗಿ ರೋಗ ಉಲ್ಬಣಿಸಿತು. ಅವನಿಗಾಗದವರು ನ್ಯೂಟನ್‌ನಿಗೆ ಹುಚ್ಚು ಹಿಡಿದಿದೆಯೆಂದೂ, ಹುಚ್ಚರಾಸ್ಪತ್ರೆಯಲ್ಲಿದ್ದಾನೆಂದೂ ಇದೇ ಸಮಯದಲ್ಲಿ ಅಪಪ್ರಚಾರ ಮಾಡತೊಡಗಿದರು. ಕೊನೆಗೆ ಡಾ|| ಮೀಡ್ ಎಂಬ ಪ್ರಸಿದ್ಧ ವೈದ್ಯನ ಉತ್ತಮ ರೀತಿಯ ಔಷಧೋಪಚಾರಗಳಿಂದ ಕಾಯಿಲೆ ಸುಧಾರಿಸಿತು. ಆರೋಗ್ಯ ಕ್ರಮೇಣ ಉತ್ತಮಗೊಂಡಿತು.

ನ್ಯೂಟನ್ನನ ಕಷ್ಟಗಳೂ ಮಾಯವಾಗುತ್ತಾ ಬಂದವು. ಎಲ್ಲಕ್ಕೂ ಮುಖ್ಯವಾಗಿ ಇವನ ಅಭಿಮಾನಿ ಚಾರ್ಲೆಸ್ ಮಾಂಟೆಗ್ಯೂ ಆಗಿನ ಇಂಗ್ಲೆಂಡಿನ ರಾಜಕೀಯದಲ್ಲಿ ಪ್ರಧಾನ ವ್ಯಕ್ತಿಯಾಗಿದ್ದನು. ಕೆಲವು ದಿನಗಳಲ್ಲೇ ಈ ರಾಜಕಾರಣಿ ಇಂಗ್ಲೆಂಡಿನ ಹಣಕಾಸಿನ ಶಾಖೆಯ 'ಛಾನ್ಸೆಲರ್' ಎಂದರೆ ಮುಖ್ಯಸ್ಥನಾಗಿ ನೇಮಕವಾದನು. ಆತನಿಗೆ ಹೇಗಾದರೂ ಮಾಡಿ ಪ್ರತಿಭಾವಂತ ವಿಜ್ಞಾನಿ ನ್ಯೂಟನಿಗೆ ಯಾವುದಾದರೂ ಅನುಕೂಲ ಮಾಡಿಕೊಡಬೇಕೆಂಬ ಹಿರಿಯಾಸೆಯಿತ್ತು. ಅನೇಕ ಮಿತ್ರರೂ ನ್ಯೂಟನ್‌ನ ವಿಷಯವಾಗಿ ಆಸಕ್ತಿಯನ್ನು ವಹಿಸಿದರು. ಇವೆಲ್ಲದರ ಪರಿಣಾಮವಾಗಿ ನ್ಯೂಟನ್ ಟಂಕಸಾಲೆಯ ಅಧಿಕಾರಿಯಾಗಿ ೧೬೯೬ ರಲ್ಲಿ ನೇಮಕವಾದನು. ಇದರಿಂದ ನ್ಯೂಟನ್‌ನ ಮನಸ್ಸಿಗೂ ಹಿತವಾಯಿತು. ಅವನ ಆಪ್ತಮಿತ್ರರಿಗೂ ಅಷ್ಟೇ ಸಂತೋಷವೂ ಆಯಿತು. ೫೦೦-೬೦೦ ಪೌಂಡುಗಳಷ್ಟು ವಾರ್ಷಿಕ ವೇತನವೂ ಗೊತ್ತಾಯಿತು. ಆರ್ಥಿಕ ತೊಂದರೆಯಿಂದ ಕಷ್ಟಕ್ಕೀಡಾಗಿದ್ದ ನ್ಯೂಟನ್‌ನಿಗೆ ಇದು ಬಹಳ ತೃಪ್ತಿಕರವಾಗಿತ್ತು. ಆಗ ಆತನಿಗೆ ಸುಮಾರು ಐವತ್ತಮೂರು ವರ್ಷ ವಯಸ್ಸು.

ನ್ಯೂಟನ್ ಈ ನೂತನ ಹುದ್ದೆಯನ್ನು ವಹಿಸಿಕೊಳ್ಳುವ ವೇಳೆಗೆ ದೇಶದ ನಾಣ್ಯ ಚಲಾವಣಾ ಪದ್ಧತಿ ಹದಗೆಟ್ಟು ಹೋಗಿತ್ತು. ರಾಷ್ಟ್ರದ

ಟಂಕಸಾಲೆಯ ಕೆಲಸ ಕಾರ್ಯಗಳಂತೂ ಸಮರ್ಪಕವಾಗಿ ನಡೆಯುತ್ತಿರಲಿಲ್ಲ. ನಿಸ್ಪೃಹನಾದ, ದಕ್ಷನಾದ, ಯೋಗ್ಯನಾದ ಅಧಿಕಾರಿಯೊಬ್ಬನ ನೇಮಕ ಟಂಕಸಾಲೆಯನ್ನು ಸುಧಾರಿಸಲು ಅತ್ಯಗತ್ಯವಾಗಿ ಬೇಕಾಗಿತ್ತು. ಅಂತಹ ವೇಳೆಯಲ್ಲಿ ನ್ಯೂಟನ್‌ನ ನೇಮಕವಾದುದನ್ನು ನಾಡಿನಾದ್ಯಂತ ಎಲ್ಲರೂ ಸ್ವಾಗತಿಸಿದರು. ದೇಶದಲ್ಲಿ ಚಲಾವಣೆಯಲ್ಲಿದ್ದ ಸುಮಾರು ಅರವತ್ತು ಲಕ್ಷ ಪೌಂಡು ಬೆಲೆ ಬಾಳುವಷ್ಟು ಬೆಳ್ಳಿಯನಾಣ್ಯಗಳನ್ನೆಲ್ಲಾ ಸಂಗ್ರಹಿಸಿ ಕರಗಿಸ ಬೇಕಾಗಿತ್ತು. ಹೊಸ ನಾಣ್ಯಗಳನ್ನು ಚಲಾವಣೆಗೆ ತರಬೇಕಾಗಿತ್ತು. ಆ ವೇಳೆಗಾಗಲೇ ಅಸಂಖ್ಯಾತ ಕೋಟಾ ನಾಣ್ಯಗಳೂ ಚಲಾವಣೆಯಲ್ಲಿದ್ದು ಸರ ಕಾರಕ್ಕೆ ಹೆಚ್ಚಿನ ನಷ್ಟವಾಗುತ್ತಿತ್ತು. ಇದೆಲ್ಲವನ್ನೂ ತಡೆಗಟ್ಟಲು ಹೊಸ ಮಾದರಿಯಲ್ಲಿ ನಾಣ್ಯಗಳನ್ನು ಟಂಕಸಾಲೆಯಲ್ಲಿ ಛಾಪಿಸಬೇಕು. ಅಲ್ಲದೆ ಟಂಕಸಾಲೆಯ ನೌಕರ ವರ್ಗ ಇತರ ಲೋಹಗಳನ್ನು ಬೆಳ್ಳಿಯೊಡನೆ ಬೆರಸಿ ಸರಕಾರ ಒದಗಿಸುತ್ತಿದ್ದ ಬೆಳ್ಳಿಯಲ್ಲಿ ಬಹುಭಾಗವನ್ನು ಕದಿಯುತ್ತಿದ್ದರು. ಇದೆಲ್ಲವನ್ನೂ ಕೂಲಂಕಷವಾಗಿ ನ್ಯೂಟನ್ ಪರಿಶೀಲಿಸಿದನು. ತಾನು ಅಧಿಕಾರವನ್ನು ವಹಿಸಿಕೊಂಡ ಎರಡು ಮೂರು ವರ್ಷಗಳಲ್ಲೇ ಚಲಾವಣೆ ಯಲ್ಲಿದ್ದ ಹಳೆಯ ನಾಣ್ಯಗಳನ್ನೆಲ್ಲಾ ಕ್ರಮೇಣ ಸಂಗ್ರಹಿಸಿ ಕರಗಿಸಿದನು. ಆಮೇಲೆ ನಾಣ್ಯಗಳ ಲೋಹವನ್ನು ಒಪ್ಪಮಾಡಿ ಕೋಟಾ ನಾಣ್ಯಗಳ ತಯಾರಿಕೆಗೆ ಅನುಕೂಲವಾಗದಂತಹ ರೀತಿಯಲ್ಲಿ ಹೊಸ ನಾಣ್ಯಗಳನ್ನು ಅಚ್ಚು ಹಾಕಿಸಿದನು. ಟಂಕಸಾಲೆಯ ಕೆಲಸವನ್ನು ಈ ರೀತಿ ಒಪ್ಪ ಮಾಡಿ ಸರಿಯಾದ ರೀತಿಯಲ್ಲಿ ನಡೆಯುವ ವ್ಯವಸ್ಥೆಯನ್ನು ಮಾಡಿದನು. ಸರಕಾರ, ಪಾರ್ಲಿಮೆಂಟಿನ ಸದಸ್ಯರು ಮತ್ತು ಜನರು ನ್ಯೂಟನ್‌ನ ಈ ಸುಧಾರಣೆ ಯನ್ನು ಹೊಗಳಿದರು. ಇವನ ಕಾಲದಲ್ಲಿ ವಾರಕ್ಕೆ ಸುಮಾರು ೧೧೫ ಸಹಸ್ರ ಪೌಂಡು ಬೆಲೆಬಾಳುವ ನಾಣ್ಯಗಳು ಟಂಕಸಾಲೆಯಿಂದ ಹೊರಬರುತ್ತಿದ್ದವು. ಇವುಗಳಲ್ಲಿ ಸುಮಾರು ೬೦ ಸಾವಿರ ಪೌಂಡುಗಳಷ್ಟು ಬೆಲೆಬಾಳುವ ಬೆಳ್ಳಿಯ ನಾಣ್ಯಗಳು. ಇವನು ಈ ಅಧಿಕಾರವನ್ನು ವಹಿಸುವ ಮೊದಲು ವಾರಕ್ಕೆ ಕೇವಲ ೧೫ ಸಾವಿರ ಪೌಂಡು ಬೆಲೆಬಾಳುವ ನಾಣ್ಯಗಳನ್ನು ತಯಾರಿಸು ತ್ತಿದ್ದರು.

ಇಷ್ಟು ನಿಷ್ಠೆಯಿಂದ, ದಕ್ಷತೆಯಿಂದ ಕೆಲಸ ಮಾಡುತ್ತಿದ್ದರೂ ಸಹ

ಕೆಲವರು ಇಲ್ಲಸಲ್ಲದ ಅಪಪ್ರಚಾರ ಮಾಡಿದರು. ಈ ಗುಂಪಿನವರಲ್ಲೊಬ್ಬ ನ್ಯೂಟನ್ನನಿಗೇ ಸುಮಾರು ೬ ಸಾವಿರ ಪೌಂಡು ಲಂಚ ನೀಡಲು ಹೋಗಿದ್ದನಂತೆ. ನ್ಯೂಟನ್ ಇದನ್ನೆಲ್ಲಾ ಬಹಿರಂಗವಾಗಿ ಖಂಡಿಸಿದನು. ಟಂಕಸಾಲೆಯ ಇತರ ನೌಕರರು ಪಡೆಯುತ್ತಿದ್ದ ಲಂಚ ಖುಷವತ್ತುಗಳನ್ನೂ ಪತ್ತೆಹಚ್ಚಿ ಅವನ್ನೆಲ್ಲಾ ನಿಲ್ಲಿಸಿದನು. ಅಧಿಕಾರದಲ್ಲಿ ಮತ್ತೆ ಬಿಗಿ ಬಂತು. ಟಂಕಸಾಲೆಯ ಆಡಳಿತ ಸುಸೂತ್ರವಾಯಿತು. ಅಲ್ಲದೆ ಇಂಗ್ಲೆಂಡಿನ ಬೆಳ್ಳಿಯ ನಾಣ್ಯಗಳ ಗುಣ ಉತ್ತಮವಾದುದರಿಂದ ಹೊರ ದೇಶಗಳಲ್ಲಿ ಅದಕ್ಕೆ ಬೆಲೆ ಹೆಚ್ಚಿತು. ದೇಶದ ವ್ಯಾಪಾರ ಉತ್ತಮವಾಯಿತು. ಸರಕಾರದ ಬೊಕ್ಕಸಕ್ಕೆ ತೆರಿಗೆಗಳ ಮೂಲಕ ಹೆಚ್ಚು ಆದಾಯ ಸಂದು ಹಣಕಾಸಿನ ಸ್ಥಿತಿಯೂ ಉತ್ತಮಗೊಂಡಿತು. ಇದನ್ನೆಲ್ಲಾ ಸರಕಾರದವರು ಮೆಚ್ಚಿ ನ್ಯೂಟನ್‌ನನ್ನು ಟಂಕಸಾಲೆಯ ಪ್ರಧಾನ ಅಧಿಕಾರಿಯನ್ನಾಗಿ ನೇಮಿಸಿದರು. ಜವಾಬ್ದಾರಿಯೂ ಹೆಚ್ಚಾಯಿತು. ಅಂತೆಯೇ ಪ್ರತಿವರ್ಷ ೧೫೦೦ ಪೌಂಡು ವೇತನವೂ ನಿಗದಿಯಾಯಿತು.

ನ್ಯೂಟನ್ ಬಹು ಉದಾರಿ. ಕಷ್ಟದಲ್ಲಿ ಸಿಲುಕಿದ್ದ ಜನರಿಗೆ ತುಂಬು ಕೈಯಿಂದ ಹಣ ಸಹಾಯ ಮಾಡುತ್ತಿದ್ದನು. ವೇತನ ಇಷ್ಟು ಹೆಚ್ಚಾದರೂ ಹಣ ಮಾತ್ರ ಕೈಯಲ್ಲಿ ಉಳಿಯುತ್ತಿರಲಿಲ್ಲ. ಆದರೂ ಇದಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳುವ ಗೋಜಿಗೇ ಹೋಗಲಿಲ್ಲ. ಟಂಕಸಾಲೆಯ ಕೆಲಸ ಕಾರ್ಯಗಳು ಇಷ್ಟು ಹೆಚ್ಚಾಗಿದ್ದರೂ ವಿಜ್ಞಾನದಲ್ಲಿ ನ್ಯೂಟನ್‌ನ ಆಸಕ್ತಿ ಕಡಮೆಯಾಗಲಿಲ್ಲ. ಫ್ರಾನ್ಸಿನ ವಿಜ್ಞಾನದ ಅಕೆಡಮಿಯ ಗೌರವ ಸದಸ್ಯನಾಗಿ ಚುನಾಯಿಸಲ್ಪಟ್ಟನು. ಹೊರದೇಶದ ಎಂಟು ಜನ ಪ್ರಸಿದ್ಧ ವಿದ್ವಾಂಸರನ್ನು ಮಾತ್ರ ಈ ರೀತಿಯ ಸದಸ್ಯರಾಗಿ ಚುನಾಯಿಸಿ ಸನ್ಮಾನಿಸುತ್ತಿದ್ದರು. ಅಲ್ಲದೆ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದಲ್ಲಿ ತನ್ನ ಕೆಲಸ ಕಾರ್ಯಗಳನ್ನು ನೋಡಿಕೊಳ್ಳುವ ಸಲುವಾಗಿ ಪ್ರತಿನಿಧಿಯೊಬ್ಬನನ್ನು ನಿಯಮಿಸಿದ್ದನು. ಅನೇಕ ಕಿರಿಯ ವಿಜ್ಞಾನಿಗಳು ಸಲಹೆಗಳಿಗಾಗಿ ಇವನನ್ನೇ ಆಶ್ರಯಿಸುತ್ತಿದ್ದರು. ಪತ್ರಗಳ ಮೂಲಕವೂ ಈತನ ಸಲಹೆಯನ್ನು ಪಡೆಯುತ್ತಿದ್ದರು. ಸುಮಾರು ೧೬೯೮ರ ಹೊತ್ತಿಗೆ ತನಗೆ ಇಷ್ಟು ಕೆಲಸಗಳಿದ್ದರೂ ಪುನಃ ಚಂದ್ರಮಂಡಲಕ್ಕೆ ಸಂಬಂಧಿಸಿದ ಸಂಶೋಧನೆಗಳನ್ನು

ಮುಂದುವರಿಸಿದನು. ಉತ್ತಮ ರೀತಿಯಲ್ಲಿ ಪ್ರಯೋಗಗಳೂ ನಡೆದವು. ೧೭೦೫ರಲ್ಲಿ ಫ್ರಾನ್ಸಿನ ಚಕ್ರವರ್ತಿ ನ್ಯೂಟನ್‌ನ ವಿಜ್ಞಾನ ಪ್ರತಿಭೆಯನ್ನು ಮೆಚ್ಚಿ, ಅವನಿಗೆ ನಿಧಿಯೊಂದನ್ನಿತ್ತು ಸನ್ಮಾನಿಸಿದನು. ಆದರೆ ತನ್ನ ರಾಜಕೀಯ ಪಕ್ಷದ ನಿಯಮಕ್ಕನುಗುಣವಾಗಿ ನ್ಯೂಟನ್ ಹಣವನ್ನು ಸ್ವೀಕರಿಸಲಿಲ್ಲ. ಇದನ್ನು ನಾಡಿನ ರಾಜಕಾರಣಿಗಳು ಬಹುವಾಗಿ ಶ್ಲಾಘಿಸಿದರು. ಮತ್ತೆ ೧೭೦೧ ರಲ್ಲಿ ವಿಶ್ವವಿದ್ಯಾನಿಲಯ ಕ್ಷೇತ್ರದಿಂದ ಪಾರ್ಲಿಮೆಂಟಿಗೆ ಆರಿಸಿ ಬಂದನು. ಪಾರ್ಲಿಮೆಂಟಿನ ಕೆಲಸ, ಟಂಕಸಾಲೆಯ ಕೆಲಸ ಇವುಗಳೇ ಹೆಚ್ಚಾಗಿ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದ ಪ್ರೊಫೆಸರ್ ಕೆಲಸದಿಂದ ನಿವೃತ್ತನಾಗಲು ಬಯಸಿ ತನ್ನ ಆ ಹುದ್ದೆಗೆ ರಾಜೀನಾಮೆಯನ್ನಿತ್ತನು. ಕಾಲೇಜಿನ ಸದಸ್ಯಸ್ಥಾನದಿಂದಲೂ ನಿವೃತ್ತನಾದನು.

ಇಂಗ್ಲೆಂಡಿನ ರಾಜಕೀಯದಲ್ಲಿ ಪುನಃ ಅಶಾಂತಿ ತಲೆಹಾಕಿತು. ವಿಲಿಯಂ ದೊರೆಯ ಮರಣದಿಂದ ಪಾರ್ಲಿಮೆಂಟ್ ರದ್ದಾಯಿತು. ನ್ಯೂಟನ್‌ನ ಸದಸ್ಯತ್ವವೂ ಹೋಯಿತು. ಅಂದರೆ ಈ ಬಾರಿಯೂ ಸುಮಾರು ಒಂದು ವರ್ಷ ಮಾತ್ರ ಪಾರ್ಲಿಮೆಂಟ್ ಸದಸ್ಯನಾಗಿದ್ದನು. ಆ್ಯನಿ ರಾಣಿ ಸಿಂಹಾಸನವನ್ನೇರಿದಳು. ಪುನಃ ಪಾರ್ಲಿಮೆಂಟ್ ಆರಂಭವಾಯಿತು. ನ್ಯೂಟನ್ ಮಾತ್ರ ಚುನಾವಣೆಯ ಗೊಂದಲಕ್ಕೆ ಹೋಗಲಿಲ್ಲ. ಇದೇ ಸಮಯದಲ್ಲಿ ತನ್ನ ವಿಜ್ಞಾನ ಸಂಶೋಧನೆಗಳನ್ನೂ ಮುಂದುವರಿಸಿ "ಸೆಕ್ಸ್‌ಟ್ಯಾಂಟ್" ಎಂಬ ನೂತನ ಸಲಕರಣೆಯೊಂದನ್ನು ನಿರ್ಮಿಸಿದನು. ಸಮುದ್ರಯಾನದಲ್ಲಿ ದೂರ ಪ್ರದೇಶಗಳನ್ನು ಅಳತೆಮಾಡಲು ಇದು ಬಹು ಉಪಯುಕ್ತವಾದ ಯಂತ್ರ. ಅಲ್ಲದೆ ಶಾಖದ ವಿಷಯವಾಗಿಯೂ ಅನೇಕ ಪ್ರಯೋಗಗಳನ್ನು ನಡೆಸಿ ಒಂದು ವಸ್ತುವಿನ ಶಾಖದ ಏರಿಳಿತಗಳು ಉಂಟಾಗುವ ರೀತಿಯನ್ನು ವಿವರಿಸಿದನು. ಚಂದ್ರಮಂಡಲಕ್ಕೆ ಸಂಬಂಧಿಸಿದ ಪ್ರಯೋಗಗಳೂ ಮುಂದುವರೆದುವು. ಉನ್ನತ ವಿಜ್ಞಾನಿಯೆಂದು ನಾಡಿನಲ್ಲೆಲ್ಲಾ ಗೌರವಿಸಲ್ಪಟ್ಟನು. ದೇಶದ ನಾನಾ ಕಡೆ ಸತ್ಕಾರ ಸಮಾರಂಭಗಳಾದುವು. ಇಷ್ಟಾದರೂ ಟಂಕಸಾಲೆಯ ಅಧಿಕಾರವನ್ನೂ ಬಿಟ್ಟುಕೊಡದೆ ಎಂದಿಗಿಂತಲೂ ಹೆಚ್ಚು ದಕ್ಷತೆಯಿಂದ ಆಡಳಿತ ನಡೆಸುತ್ತಿದ್ದನು. ಒಂದು ಕಡೆ ವಿಜ್ಞಾನ ಮತ್ತೊಂದುಕಡೆ ಅಧಿಕಾರ. ಎರಡೂ ತೃಪ್ತಿಕರವಾಗಿ ನಡೆಯುತ್ತಿದ್ದುವು.

ಇದೇ ವೇಳೆಯಲ್ಲಿ, ಅಂದರೆ ೧೭೦೩ ರಲ್ಲಿ ದೇಶದ ಉನ್ನತ ವಿಜ್ಞಾನ ಸಂಸ್ಥೆಯಾದ ರಾಯಲ್ ಸೊಸೈಟಿಯ ಅಧ್ಯಕ್ಷನಾಗಿ ಚುನಾಯಿತನಾಗಿ ವಿಶೇಷವಾದ ರೀತಿಯಲ್ಲಿ ಗೌರವಿಸಲ್ಪಟ್ಟನು. ಇದಾದಮೇಲೆ ಸುಮಾರು ಇಪ್ಪತ್ತೈದು ವರ್ಷಗಳ ಪರಿಯಂತ ಈ ಹುದ್ದೆಯನ್ನಲಂಕರಿಸಿದ್ದನು. ಪ್ರತಿವಾರ್ಷಿಕ ಸಭೆಯಲ್ಲೂ ಸದಸ್ಯರು ಇವನನ್ನೇ ಮತ್ತೆ ಮತ್ತೆ ಚುನಾಯಿಸಿ ಗೌರವಿಸುತ್ತಿದ್ದರು. ಇದೇ ರೀತಿಯಲ್ಲಿ ತನ್ನ ಕೊನೆಯ ಗಳಿಗೆಯವರೆಗೂ ಟಂಕಸಾಲೆಯ ಮುಖ್ಯಾಧಿಕಾರಿಯಾಗಿಯೂ ಇದ್ದನು. ಹೀಗೆ ಇಡೀ ದೇಶವೇ ನ್ಯೂಟನ್‌ನನ್ನು ಗೌರವಿಸಿತು. 'ಸುಪ್ರಸಿದ್ಧ ವಿಜ್ಞಾನಿ. ರಾಷ್ಟ್ರದ ಗೌರವಾನ್ವಿತ ಪ್ರಜೆ' ಎಂದು ಎಲ್ಲರೂ ಹೊಗಳುತ್ತಿದ್ದರು.

ರಾಣಿಯೂ, ಆಕೆಯ ಪತಿ ಡೆನ್ಮಾರ್ಕಿನ ರಾಜಕುಮಾರ ಜಾರ್ಜ್ ಇವನ ವಿದ್ವತ್ತನ್ನು ಕೇಳಿ ಸಂತೋಷಪಟ್ಟರು. ಈ ವಿಜ್ಞಾನಿಯ ಪರಿಚಯ ವನ್ನೂ ಮಾಡಿಕೊಂಡರು. ಅಲ್ಲದೆ ವಿದ್ಯಾಪಕ್ಷಪಾತಿಯಾದ ಜಾರ್ಜ್ ರಾಷ್ಟ್ರದ ವಿಜ್ಞಾನ ಸಂಸ್ಥೆಯಾದ ರಾಯಲ್ ಸೊಸೈಟಿಯ ಪೋಷಕನೂ ಆದನು ನ್ಯೂಟನ್ ಮತ್ತು ಇತರ ವಿಜ್ಞಾನಿಗಳಿಗೆ ಅಪಾರವಾದ ಸಂತೋಷ ವಾಯಿತು. ನ್ಯೂಟನ್ನನಿಗೆ ತನ್ನ ನಾಡಿನ ರಾಣಿ ಮತ್ತು ಆಕೆಯ ಪತಿಯನ್ನು ಕಂಡರೆ ಹೆಚ್ಚಿನ ರಾಜಭಕ್ತಿಯಿತ್ತು. ಅವನ ರಾಜನಿಷ್ಠೆ ಇತರರಿಗೆ ಮಾರ್ಗ ದರ್ಶಿಯಾಗುವಂಥದು. ಜಾರ್ಜ್ ರಾಯಲ್ ಸೊಸೈಟಿಯ ಚಟುವಟಿಕೆ ಗಳಲ್ಲಿ ವಿಶೇಷ ಆಸಕ್ತಿಯನ್ನು ತೋರಿಸಿದನು. ಇದೇ ಸಮಯದಲ್ಲಿ ನ್ಯೂಟನ್‌ನ ಸಲಹೆಗನುಸಾರವಾಗಿ ಫ್ಲೆಮ್‌ಸ್ಟೀಡ್ ಎಂಬ ವಿಖ್ಯಾತ ವಿಜ್ಞಾನಿ ಗ್ರೀನ್‌ವಿಚ್ ಆವೇಕ್ಷಣಾಕೇಂದ್ರದಲ್ಲಿ ನಡೆಸಿದ್ದ ಎಲ್ಲಾ ಸಂಶೋಧನೆ ಗಳನ್ನೂ ಪುಸ್ತಕ ರೂಪದಲ್ಲಿ ಪ್ರಕಟಿಸಲು ಧನಸಹಾಯಮಾಡಲು ಒಪ್ಪಿ ದನು. ಸ್ವತಃ ನ್ಯೂಟನ್‌ನೇ ಈ ಕೆಲಸವನ್ನು ವಹಿಸಿಕೊಂಡು ಅತ್ಯಂತ ಸಮರ್ಪಕವಾದ ರೀತಿಯಲ್ಲಿ ನಡೆಸಿದನು. 'ಗ್ರೀನ್‌ವಿಚ್ ಆಬ್ಸರ್‌ವೇಷನ್ಸ್' ಎಂಬ ಗ್ರಂಥವೂ ಪ್ರಕಟವಾಯಿತು. ೧೭೦೫ ರಲ್ಲಿ ಬ್ರಿಟನ್ನಿನ ಆ್ಯನಿ ರಾಣಿ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯವನ್ನು ಸಂದರ್ಶಿಸಿದಳು. ಟ್ರಿನಿಟಿ ಕಾಲೇಜಿನ ಮುಖ್ಯಾಧಿಕಾರಿಯ ಅತಿಥಿಯಾಗಿಯೂ ಉಳಿದು ಎಲ್ಲರನ್ನೂ ಸಂತೋಷ ಗೊಳಿಸಿದಳು. ಈ ಸುಸಮಯದಲ್ಲೇ ಆಕೆ ಅದೇ ಕಾಲೇಜಿನಲ್ಲಿ ಬಹಳ ಕಾಲ

ಪ್ರೊಫೆಸರಾಗಿದ್ದು ವಿಜ್ಞಾನಕ್ಕೆ ಅನುಪಮ ಸೇವೆಸಲ್ಲಿಸಿ ನಾಡಿಗೆ ಕೀರ್ತಿಯನ್ನು ತಂದ ಐಸಾಕ್ ನ್ಯೂಟನ್‌ನಿಗೆ "ನೈಟ್‌ಹುಡ್" ಎಂಬ ಉನ್ನತ ಪ್ರಶಸ್ತಿ ಯನ್ನಿತ್ತು ಗೌರವಿಸಿದಳು. ನ್ಯೂಟನ್ 'ಸರ್ ಐಸಾಕ್ ನ್ಯೂಟನ್' ಆದನು. ಇದರಿಂದ ಅವನಿಗೆ ಅಪಾರ ಸಂತೋಷವಾಯಿತು.

ನ್ಯೂಟನ್ ಪ್ರಕಟಿಸಿದ್ದ ಅನೇಕ ಗ್ರಂಥಗಳನ್ನು ವಿಜ್ಞಾನಿಗಳು ಬಹುವಾಗಿ ಮೆಚ್ಚಿಕೊಂಡರು. ಆಗಿನ ಕಾಲದಲ್ಲೇ ಇವನ ಹಲವಾರು ಗ್ರಂಥಗಳು ಮತ್ತೆ ಮತ್ತೆ ಮುದ್ರಿತವಾದುವೆಂದರೆ ಅವುಗಳ ಜನಪ್ರಿಯತೆಗೆ ಸಾಕ್ಷಿಯಲ್ಲವೆ? ಹೀಗೆ ಪ್ರಕಟವಾದ ಗಣಿತಶಾಸ್ತ್ರದ ಲೇಖನವೊಂದರ ವಿಚಾರವಾಗಿ ಇವನಿಗೂ ಜರ್ಮನಿಯ ಪ್ರಸಿದ್ಧ ವಿಜ್ಞಾನಿ ಲೀಬ್ನಿಸ್‌ನಿಗೂ ವಾದ ಪ್ರತಿವಾದಗಳಾದುವು. ಆ ಲೇಖನ ಗಣಿತ ವಿಜ್ಞಾನದ ಚಲನಕಲನ (differential calculus) ತತ್ತ್ವವನ್ನು ವಿವರಿಸಿತ್ತು. ಲೀಬ್ನಿಸ್ ನ್ಯೂಟನ್ನನಿಗಿಂತಲೂ ಹಿಂದೆಯೇ ತಾನು ಇದನ್ನು ಕಂಡುಹಿಡಿದಿದ್ದುದಾಗಿಯೂ, ತನ್ನದನ್ನೇ ನ್ಯೂಟನ್ ಬಳಸಿಕೊಂಡು ಬೇರೆ ರೀತಿಯಲ್ಲಿ ಬರೆದು ಪ್ರಕಟಿಸಿದ್ದಾನೆಂದೂ, ಆಕಾರಣ ಆ ಗೌರವ ತನಗೇ ಸಲ್ಲಬೇಕೆಂದೂ ಪತ್ರಿಕೆಯಲ್ಲಿ ಬರೆದು ಪ್ರಕಟಿಸಿದನು. ಬಹುಕಾಲ ಇಬ್ಬರಿಗೂ ವಾದ ವಿವಾದಗಳಾದುವು. ನಿರ್ಧಾರಕ್ಕೆ ಬರಲೇ ಇಲ್ಲ. ಇದೇ ರೀತಿ ಫ್ಲೆಮ್‌ಸ್ಟೆಡ್‌ನ ನೇತೃತ್ವದಲ್ಲಿದ್ದ ಆವೇಕ್ಷಣಾ ಕೇಂದ್ರ(observatory)ದ ವಿಚಾರವಾಗಿ ಅನೇಕ ದೂರುಗಳು ರಾಣಿಯ ಕಿವಿಯನ್ನು ಮುಟ್ಟಿದುವು. ಆಕೆ ನ್ಯೂಟನ್‌ನ ಅಧ್ಯಕ್ಷತೆಯಲ್ಲಿ ನಿಪುಣರ ಸಮಿತಿಯನ್ನು ನೇಮಿಸಿದಳು. ಆ ಆಲಯದ ಕೆಲಸ ಕಾರ್ಯಗಳನ್ನು ಪರಿಶೀಲಿಸಿ ಸೂಕ್ತವಾದ ರೀತಿಯಲ್ಲಿ ಸರಿಪಡಿಸಬೇಕೆಂದೂ ತಿಳಿಸಿದಳು. ಫ್ಲೆಮ್‌ಸ್ಟೆಡ್‌ನಿಗೂ ನ್ಯೂಟನ್‌ನಿಗೂ ಬದ್ಧದ್ವೇಷ. ಹೀಗಾಗಿ ಇಬ್ಬರೂ ಒರಟೊರಟಾಗಿ ನಡೆದುಕೊಂಡರು. ಇದರಿಂದ ವಿಜ್ಞಾನದ ಬೆಳವಣಿಗೆಗೆ ಅಪಾರ ನಷ್ಟವಾಯಿತೆನ್ನಬಹುದು.

ಅಷ್ಟರಲ್ಲಿ ಇವನ 'ಪ್ರಿನ್ಸಿಪಿಯ' ಗ್ರಂಥವನ್ನು ತಿದ್ದಿ ಮುದ್ರಿಸುವ ಭಾರವನ್ನು ಬೆಂಟ್ಲೆ ಪ್ರಕಟನ ಸಂಸ್ಥೆಯವರು ವಹಿಸಿಕೊಂಡರು. ಇದರ ಮುದ್ರಣ ಕಾರ್ಯದಲ್ಲಿ ರೋಜರ್ ಕೋಟ್ಸ್ ಎಂಬ ತರುಣ ವಿಜ್ಞಾನಿ ನ್ಯೂಟನ್‌ನ ಸಹಾಯಕ್ಕೆ ದೊರೆತನು. ಬಹು ಸಮರ್ಪಕವಾದ ರೀತಿಯಲ್ಲಿ

ಗ್ರಂಥ ಪ್ರಕಟವಾಯಿತು. ನ್ಯೂಟನ್ ತರುಣ ವಿಜ್ಞಾನಿಯ ಈ ಕೆಲಸ ವನ್ನು ಬಹುವಾಗಿ ಮೆಚ್ಚಿಕೊಂಡನು. ಈ ಮುದ್ರಣಕ್ಕೆ ಸುಮಾರು ನಾಲ್ಕು ವರ್ಷಗಳಾದುವಂತೆ ಸುಮಾರು ೧೭೧೩ರಲ್ಲಿ ಇದು ಪ್ರಕಟವಾಯಿತು. ಆಗ ನ್ಯೂಟನ್‌ನಿಗೆ ೭೦ವರ್ಷ ವಯಸ್ಸು. ಸದಾ ಯೋಚನಾಮಗ್ನನಾಗಿ ಶಾಂತಚಿತ್ತನಾಗಿ ಕಾಲವನ್ನು ತಳ್ಳುತ್ತಿದ್ದನು. ಆರೋಗ್ಯವೂ ಚೆನ್ನಾಗಿತ್ತು. ಹೀಗಿರುವಾಗ ಇವನ ಪರಮ ಮಿತ್ರನಾದ ಮತ್ತು ರಾಜಕೀಯ ಮುಖಂಡ ನಾದ ಮಾಂಟೆಗ್ಯೂ ಕಾಲವಾದನು. ಅಲ್ಲದೆ " ಪ್ರಿನ್ಸಿಪಿಯ " ಗ್ರಂಥದ ದ್ವಿತೀಯ ಮುದ್ರಣಕ್ಕೆ ಬಹು ನೆರವಾಗಿದ್ದ ರೋಜರ್‌ಕೋಟ್ಸ್ ಅಕಾಲ ಮರಣಕ್ಕೆ ತುತ್ತಾದನು. ಈ ಎರಡು ಘಟನೆಗಳು ನ್ಯೂಟನ್‌ನನ್ನು ದುಃಖ ದಲ್ಲಿ ಮುಳುಗಿಸಿದವು. ಇಬ್ಬರೂ ತನಗೆ ಅತ್ಯಂತ ಆಪ್ತರಾಗಿದ್ದವರು. ಇದಾದ ಕೆಲವು ವರ್ಷಗಳಲ್ಲಿ ಬಹು ಮುದ್ದಿನಿಂದ ತಾನು ಸಾಕಿ ಬೆಳಸಿದ್ದ ಅವನ ತಂಗಿಯ ಮಗಳು ಕ್ಯಾಥರೀನ್‌ಳ ಮದುವೆಯೂ ನಡೆಯಿತು. ಇದ ರಿಂದ ಮುದುಕ ನ್ಯೂಟನ್‌ನಿಗೆ ಬಹಳ ಹರ್ಷವಾಯಿತು. ಅಲ್ಲದೆ ಅವನ ಮತ್ತೊಬ್ಬ ಆಪ್ತಮಿತ್ರ ಹ್ಯಾಲಿ ರಾಯಲ್ ಆವೇಕ್ಷಣಾ ಕೇಂದ್ರದ ಅಧಿಕಾರಿ ಯಾಗಿ ನೇಮಿತನಾದನು. ಇದು ಸಹ ನ್ಯೂಟನ್ನನಿಗೆ ಹೆಚ್ಚಿನ ಸಂತೋಷ ವನ್ನು ತಂದಿತು ತನಗೆ ಎಂಭತ್ತುವರ್ಷವಾಗಿದ್ದರೂ ಎಂದಿನಂತೆ ತನ್ನ ಎಲ್ಲಾ ಕೆಲಸಕಾರ್ಯಗಳನ್ನೂ ಬಹು ಚೆನ್ನಾಗಿ ನಡೆಸುತ್ತಿದ್ದನು. ಟಂಕ ಸಾಲೆ ಮತ್ತು ರಾಯಲ್ ಸೊಸೈಟಿಯ ಕೆಲಸಗಳೆಲ್ಲಾ ಬಹು ಸಮರ್ಪಕ ವಾಗಿ ನಡೆಯುತ್ತಿದ್ದವು.

ಇದೇ ವೇಳೆಗೆ " ಪ್ರಿನ್ಸಿಪಿಯ "ಗ್ರಂಥದ ಮೂರನೆಯ ಮುದ್ರಣವನ್ನೂ ಮಾಡಿಸುವ ಯೋಚನೆ ಮಾಡಿದನು. ಈ ಬಾರಿಯೂ ಪೆಂಬರ್ಟನ್ ಎಂಬ ಯುವಕ ವಿಜ್ಞಾನಿ ನೆರವಾಗಿ ಬಹಳ ಉತ್ತಮ ರೀತಿಯಲ್ಲಿ ಮುದ್ರಣವನ್ನು ಮಾಡಿಸಿದನು. ನ್ಯೂಟನ್ ಇದನ್ನು ನೋಡಿ ಬಹಳ ಸಂತೋಷಪಟ್ಟು ಅವನಿಗೆ ಕೊಂಚ ಹಣವನ್ನು ಕೊಟ್ಟು ಪ್ರೋತ್ಸಾಹಿಸಿದನು. ಸುಮಾರು ೧೭೨೪ರ ವೇಳೆಗೆ ಆರೋಗ್ಯ ಕೆಡುತ್ತಾ ಬಂತು. ಮೂತ್ರಕೋಶ ಮತ್ತು ಶ್ವಾಸಕೋಶಗಳ ಬೇನೆ ಹೆಚ್ಚಾಯಿತು. ಹೀಗಿದ್ದರೂ ರಾಯಲ್ ಸೊಸೈ ಟಿಯ ಸಭೆಗಳಲ್ಲಿ ಭಾಗವಹಿಸುತ್ತಿದ್ದನು. ತನ್ನಲ್ಲಿಗೆ ಬರುತ್ತಿದ್ದ ಅನೇಕ

ತರುಣ ವಿಜ್ಞಾನಿಗಳಿಗೆ ಕೈಲಾದಷ್ಟು ಪ್ರೋತ್ಸಾಹಿಸುತ್ತಿದ್ದನು. ಕೊನೆಯ ದಿನಗಳಲ್ಲೂ ಸಹ ಪ್ರಾಚೀನ ರಾಜಮನೆತನದ ವಂಶಾವಳಿಗಳನ್ನು ಅಭ್ಯಾಸ ಮಾಡುತ್ತಿದ್ದನು. ಇವನ್ನೆಲ್ಲಾ ಸಂಶೋಧಿಸಿ ಒಂದು ಗ್ರಂಥವನ್ನು ಪ್ರಕಟಿಸುವ ಆಸೆಯನ್ನೂ ಹೊಂದಿದ್ದನಂತೆ. ಆರೋಗ್ಯ ಬಹುವಾಗಿ ಕೆಟ್ಟಿದ್ದರೂ ೧೭೨೭ನೆ ಮಾರ್ಚಿ ೨ನೇ ತಾರೀಕು ನಡೆದ ರಾಯಲ್ ಸೊಸೈಟಿಯ ಸಭೆಗೆ ಹೋಗಿ ಅಧ್ಯಕ್ಷನಾಗಿ ಕಾರ್ಯಕಲಾಪಗಳನ್ನೂ ನಡೆಸಿದನು. ದೇಹಕ್ಕೆ ಬಹಳ ಆಯಾಸವಾಯಿತು. ಮನೆಗೆ ಬಂದವನೇ ಹಾಸಿಗೆ ಹಿಡಿದನು. ಕ್ರಮೇಣ ಮೂತ್ರಕೋಶದ ವ್ಯಾಧಿ ಉಲ್ಬಣಿಸಿ ಮಾರ್ಚಿ ೨೦ನೆಯ ತಾರೀಕು ಮಧ್ಯರಾತ್ರಿಯಲ್ಲಿ ನಿಧನನಾದನು. ಈ ಪವಿತ್ರಾತ್ಮ ಭಗವಂತನಲ್ಲಿ ಐಕ್ಯವಾಯಿತು.

ದೇಶದ ರಾಜಕಾರಣಿಗಳು, ವಿದ್ವಾಂಸರು, ವಿಜ್ಞಾನಿಗಳು, ವಿದ್ಯಾರ್ಥಿಗಳು, ಜನಸಾಮಾನ್ಯರು ತಂಡೋಪತಂಡವಾಗಿ ಬಂದು ತಮ್ಮ ನಾಡಿನ ಈ ಮಹಾಮೇಧಾವಿಗೆ ತಮ್ಮ ಅಂತ್ಯಗೌರವವನ್ನು ಸಲ್ಲಿಸಿದರು. ಮಾರ್ಚಿ ೨೮ನೆಯ ತಾರೀಕು ವೆಸ್ಟ್‌ಮಿನಿಸ್ಟರ್ ಆಬೆಯಲ್ಲಿ ಶವಸಂಸ್ಕಾರವೂ ನಡೆಯಿತು. ಇಂಗ್ಲೆಂಡಿನ ಜನ ಈ ಮಹಾಪುರುಷನ ನೆನಪಿಗಾಗಿ ಭವ್ಯಸ್ಮಾರಕವೊಂದನ್ನು ಅಲ್ಲೇ ನಿರ್ಮಿಸಿದರು. ಅದೇ ವರ್ಷ ಬ್ರಿಟನ್ನಿನ ಟಂಕಸಾಲೆ ಈತನ ಸ್ಮಾರಕವಾಗಿ ನಾಣ್ಯವೊಂದನ್ನು ಹೊರಡಿಸಿ ಗೌರವಿಸಿತು. ಅವನು ಹುಟ್ಟಿದ ಮನೆಯನ್ನು ರಾಷ್ಟ್ರೀಯ ಸ್ಮಾರಕವೆಂದು ಇಂದಿಗೂ ಗೌರವಿಸುತ್ತಿದ್ದಾರೆ. ಆ ಮನೆಯಲ್ಲಿ ನ್ಯೂಟನ್ ಹುಟ್ಟಿದ ಕೊಠಡಿಯಲ್ಲಿ ಪ್ರಸಿದ್ಧಕವಿ ಪೋಪ್‌ನ ಈ ಸಾಲುಗಳನ್ನು ಕೆತ್ತಿದ್ದಾರೆ.

'ಪ್ರಕೃತಿ ಮತ್ತು ಪ್ರಕೃತಿಯ ನಿಯಮಗಳು ಕತ್ತಲಲ್ಲಿ ಹುದುಗಿದ್ದವು
ದೇವರು ಕೃಪೆದೋರಿದ : ' ನ್ಯೂಟನ್ನನೇ ಅವತರಿಸು ' ಆಗ ಎಲ್ಲೆಲ್ಲೂ ಬೆಳಕಾಯಿತು '

ಎಂದು ಕವಿ ವಿಜ್ಞಾನಮಹರ್ಷಿಯನ್ನು ಹಾಡಿ ಹೊಗಳಿ ಗೌರವಿಸಿದ್ದಾನೆ. ಆ ಕವಿವಾಣಿಯ ಜತೆಗೆ ನಮ್ಮ ದನಿಯನ್ನೂ ಸೇರಿಸೋಣ.

# ಜೇಮ್ಸ್ ಹಟ್ಟನ್

ಆಗ ಭೂವಿಜ್ಞಾನದ ಇತಿಹಾಸದಲ್ಲಿ ಪರ್ವಕಾಲ. ಯೂರೋಪ್ ಖಂಡದ ನಾನಾ ಕಡೆಗಳಲ್ಲಿ ಮುಖ್ಯವಾಗಿ ವಿಜ್ಞಾನ ಕೇಂದ್ರಗಳಲ್ಲಿ ವರ್ನರ್ ಮತ್ತು ಆತನ ಪಂಥದವರು ಜಯಭೇರಿಯನ್ನು ಬಾರಿಸಿ ಇತರ ಭೂವಿಜ್ಞಾನಿಗಳ ತತ್ತ್ವಗಳೇ ಸರಿ ಇದ್ದರೂ ಜನರ ಕಿವಿಗೆ ಬೀಳದಂತೆ ಮಾಡಿದ್ದರು. ವರ್ನರ್ ಜರ್ಮನಿಯ ದೊಡ್ಡ ವಿದ್ವಾಂಸ. ಪ್ರತಿಭಾವಂತ ವಿಜ್ಞಾನಿ. ಉತ್ತಮವಾಗ್ಮಿ ಮತ್ತು ನೂತನ ತತ್ವಪ್ರತಿಪಾದಕ. ಈತನ ವಿದ್ವತ್ತಿಗೆ, ಭಾಷಣ ವೈಖರಿಗೆ ಮಾರುಹೋದ ಶಿಷ್ಯ ಕೋಟಿ ಯೂರೋಪು ಖಂಡದ ದಿಕ್ಕು ದಿಕ್ಕಿನಲ್ಲಿ ತಮ್ಮ ಆಚಾರ್ಯನ ತತ್ವಗಳನ್ನೇ ಪ್ರಸಾರ ಮಾಡತೊಡಗಿತು. ಇವರ ಅಭಿಪ್ರಾಯದಂತೆ, ಭೂಮಿಯ ಶಿಲೆಗಳೆಲ್ಲವೂ ಸಾಗರಗಳ ತಳದಲ್ಲಿ ಉಂಟಾದವು; ಎಲ್ಲವೂ ವರುಣ ಶಿಲೆಗಳೇ ! ಇದು ನಿಜಕ್ಕೂ ಬುಡವಿಲ್ಲದ ವಾದ. ಆದರೆ ವರ್ನರನ ಪ್ರಭಾವದಿಂದ ಭೂವಿಜ್ಞಾನ ವಲಯಗಳಲ್ಲಿ ಅಂದು ಈ ವಾದಕ್ಕೆ ಬಹು ಮನ್ನಣೆ. ಇತರ ತತ್ವಗಳ ಸತ್ಯಾಸತ್ಯತೆಯನ್ನು ತಿಳಿಯುವ ತಾಳ್ಮೆಯೂ ಇರಲಿಲ್ಲ.

ಇಂತಹ ಪರ್ವಕಾಲದಲ್ಲಿ ಭೂವಿಜ್ಞಾನಿಗಳನ್ನು ಸರಿಯಾದ ಮಾರ್ಗದಲ್ಲಿ ಕೊಂಡೊಯ್ದ ಕೀರ್ತಿ ಸ್ಕಾಟ್‌ಲೆಂಡಿನ ಜೇಮ್ಸ್ ಹಟ್ಟನ್‌ನಿಗೆ ಸಂಪೂರ್ಣವಾಗಿ ಸಲ್ಲಬೇಕು. ಭೂವಿಜ್ಞಾನ ಶಾಸ್ತ್ರದ ಬೆಳವಣಿಗೆಗೆ ಸರಿಯಾದ ಅಡಿಪಾಯವನ್ನು ಹಾಕಿದ ಯಶಸ್ಸು ಈತನದು. ತಪ್ಪುದಾರಿಯನ್ನು ಹಿಡಿದ ವಿಜ್ಞಾನಿಗಳನ್ನು ತಿದ್ದಿದ ಮಹಾನುಭಾವ ಈತ.

ಜೇಮ್ಸ್ ಹಟ್ಟನ್ ೧೭೨೬ನೆಯ ವರ್ಷದ ಜೂನ್ ಮೂರನೆಯ ತಾರೀಕು ಎಡಿಂಬರೋನಗರದಲ್ಲಿ ಹುಟ್ಟಿದನು. ಈತನ ವಿದ್ಯಾಭ್ಯಾಸ ನಡೆದುದು ಅಲ್ಲಿಯ ಪ್ರೌಢಶಾಲೆ ಮತ್ತು ವಿಶ್ವವಿದ್ಯಾನಿಲಯದಲ್ಲಿ. ಹಟ್ಟನ್‌ನ ತಂದೆ ನಗರದ ಗಣ್ಯವ್ಯಕ್ತಿಯಾಗಿದ್ದು ನಗರ ಸಭೆಯ ಕೋಶಾಧ್ಯಕ್ಷನಾಗಿದ್ದನು. ಹಟ್ಟನ್ ಇನ್ನೂ ಸಣ್ಣವಯಸ್ಸಿನವನಾಗಿದ್ದಾಗಲೇ ತಂದೆ

ಯನ್ನು ಕಳೆದುಕೊಂಡನು. ಈ ಮಹಾ ವಿಜ್ಞಾನಿಯ ವಿದ್ಯಾರ್ಜನೆಯನ್ನು ಅವಲೋಕಿಸಿದರೆ ನಮಗಂತೂ ಬಹಳ ಸೋಜಿಗವಾಗದಿರದು. ತನ್ನ ಹದಿನೇಳನೆಯ ವಯಸ್ಸಿನಲ್ಲಿ ಕಾಲೇಜಿನಲ್ಲಿ ಓದುತ್ತಿದ್ದಾಗ ನ್ಯಾಯಶಾಸ್ತ್ರದ ಅಧ್ಯಾಪಕರು ಯಾವುದೋ ಒಂದು ತತ್ವವನ್ನು ಪ್ರತಿಪಾದಿಸುವಾಗ ಆಸಿಡ್ ಗಳ ಉದಾಹರಣೆಯನ್ನಿತ್ತರು. ಒಂದು ಲೋಹವನ್ನು ಕರಗಿಸಲು ಒಂದೇ ಆಮ್ಲ ಸಾಕಾಗಿದ್ದರೂ, ಚಿನ್ನದ ದ್ರಾವಣವನ್ನು ತಯಾರಿಸಲು ಎರಡು ಆಮ್ಲಗಳು ತಮ್ಮ ಶಕ್ತಿಯನ್ನು ಒಟ್ಟಿಗೆ ಬಳಸಬೇಕಾಗುತ್ತದೆ. ಇದು ಶಿಷ್ಯನಮೇಲೆ ಅತಿಶಯವಾದ ಪ್ರಭಾವವನ್ನು ಬೀರಿ ರಸಾಯನ ಶಾಸ್ತ್ರದ ಮೊದಲ ಪರಿಚಯವನ್ನುಂಟುಮಾಡಿತು. ಕ್ರಮೇಣ ಆತನ ಒಲವು ಈ ಶಾಸ್ತ್ರದ ಕಡೆಗೇ ಹೆಚ್ಚು ವಾಲಿತು.

ಮುಂದೆ ವಿದ್ಯಾರ್ಜನೆ ಮುಗಿದು ಜೀವನೋಪಾಯಕ್ಕೆ ಕಾಲಿಟ್ಟಾಗ ಹಟ್ಟನ್ ಒಬ್ಬ ನ್ಯಾಯವಾದಿಯ ಕಚೇರಿಯಲ್ಲಿ ಸಹಾಯಕನಾದನು. ಹೀಗೆ ಪ್ರಸಿದ್ಧ ಭೂವಿಜ್ಞಾನಿಯ ಜೀವನ ಮೊದಲಾಯಿತು. ಆ ಕಾಲದಲ್ಲಿ ನ್ಯಾಯಶಾಸ್ತ್ರದ ಅಭ್ಯಾಸದ ಬದಲು ಹಟ್ಟನ್ ರಸಾಯನ ಶಾಸ್ತ್ರದ ಅನೇಕ ಪ್ರಯೋಗಗಳನ್ನು ನಡೆಸಿ, ತನ್ನ ಜೊತೆಗಾರ ನ್ಯಾಯವಾದಿಗಳಿಗೆ ಅಚ್ಚರಿಯನ್ನುಂಟುಮಾಡುತ್ತಿದ್ದ. ಇದನ್ನು ಅವಲೋಕಿಸಿದ ಹಿರಿಯ ನ್ಯಾಯವಾದಿ, ವಕೀಲವೃತ್ತಿಯನ್ನು ತ್ಯಜಿಸಿ ಮನಸ್ಸು ಒಪ್ಪುವ ವೃತ್ತಿಯನ್ನು ಅವಲಂಬಿಸುವಂತೆ ಹಟ್ಟನ್‌ನಿಗೆ ಉಪದೇಶಿಸಿದನು.

ಹೀಗೆ ಒಂದು ವರ್ಷ ಕಳೆದು, ವಕೀಲ ವೃತ್ತಿಯಲ್ಲಿ ಬೇಸರಗೊಂಡು, ಔಷಧ ತಯಾರಿಕೆಯಲ್ಲಿ ಕಾಲಿಟ್ಟನು. ಇದಕ್ಕಾಗಿ ಮೂರುವರ್ಷ ಎಡಿನ್ ಬರೋನಗರದಲ್ಲಿ ವೈದ್ಯಶಾಸ್ತ್ರವನ್ನು ಅಭ್ಯಾಸಮಾಡಿ, ಹೆಚ್ಚಿನ ವ್ಯಾಸಂಗಕ್ಕಾಗಿ ಪ್ಯಾರಿಸ್ ನಗರಕ್ಕೂ ತೆರಳಿದನು. ಅಲ್ಲಿ ಮುಗಿಸಿಕೊಂಡು ಲೇಡನ್ ಪಟ್ಟಣದಲ್ಲಿ ೧೭೪೯ರಲ್ಲಿ ವೈದ್ಯಶಾಸ್ತ್ರದ ಪದವೀಧರನಾದನು. ವೈದ್ಯನಾಗಿ ಮುಂದುವರಿಯುವುದು ಅಷ್ಟಾಗಿ ಅವನಿಗೆ ರುಚಿಸಿದ ಹಾಗೆ ಕಾಣೆ.

ಮತ್ತೊಬ್ಬ ಸ್ನೇಹಿತನ ಜೊತೆಗೂಡಿ ಔಷಧಗಳ ವಿಚಾರವಾಗಿ ಕೆಲವು ಸಂಶೋಧನೆಗಳನ್ನು ನಡಸಿ " ಸಾಲ್ ಅಮೋನಿಯಕ್ " ತಯಾರಿಕೆಯನ್ನು ಪ್ರಾರಂಭಿಸಿ ಹೆಚ್ಚು ಲಾಭವನ್ನು ಗಳಿಸಿದ. ಕೆಲವು ವರ್ಷ ಹೀಗೆ ನಡೆದು,

ಇವೆಲ್ಲವನ್ನೂ ಕೈಬಿಟ್ಟು ವ್ಯವಸಾಯಕ್ಕೆ ತೊಡಗಿದನು. ೧೭೫೨ರಲ್ಲಿ ನಾರ್ ಫೋಕ್‌ನಲ್ಲಿ ಬೇಸಾಯಗಾರನೊಬ್ಬನ ಮನೆಯಲ್ಲಿ ತಂಗಿ ಹೆಚ್ಚು ಪರಿಶ್ರಮ ವನ್ನು ಸಂಪಾದಿಸಿದನು. ಬಹುಶಃ ಈ ಕಾಲದಲ್ಲೇ ಈತನಲ್ಲಿ ಸುಪ್ತವಾಗಿದ ಭೂವಿಜ್ಞಾನಪ್ರಿಯತೆ ಕೆರಳಿ ಹೊಮ್ಮಿರಬೇಕು. ಇದಕ್ಕೆ ಮುಖ್ಯ ಕಾರಣ ಸುತ್ತಲಿನ ರಮಣೀಯವಾದ ನಿಸರ್ಗ.

ಈತನು ತಂಗಿದ್ದ ಪೂರ್ವ ಆಂಗ್ಲಿಯ ಪ್ರದೇಶದಲ್ಲಿ ಬೆಳ್ಳನೆಯ ಸುಣ್ಣ ಶಿಲೆಯ ಅಸಂಖ್ಯಾತ ಸಣ್ಣ ಸಣ್ಣ ಗುಡ್ಡಗಳಿವೆ. ಇವುಗಳ ಮೈಮೇಲೆ ನಾನಾ ಆಕೃತಿಯ ಕಪ್ಪನೆಯ ಬೆಣಚು ಕಲ್ಲುಗಳು ಅಸಂಖ್ಯಾತವಾಗಿ ಅಲಂಕರಿಸುತ್ತಿವೆ. ಈ ಮನೋಹರ ದೃಶ್ಯ ನಮ್ಮ ಮರಿ ಭೂವಿಜ್ಞಾನಿಯ ಮನಸ್ಸನ್ನು ಸೆಳೆದು ಕೆರಳಿಸಿತು. ಇವಲ್ಲದೆ ನಾರ್‌ಫೋಕ್ ಸಮುದ್ರ ತೀರ ದಲ್ಲಿ ಬಗೆಬಗೆಯ ಜಲಚರಗಳ ಚಿಪ್ಪುಗಳ ರಾಶಿ. ಮಗುದೊಂದು ಕಡೆ ಉತ್ತರದಿಕ್ಕಿನಲ್ಲಿ ಕಡಿದಾದ ಗುಡ್ಡಗಳ ಶ್ರೇಣಿ. ಜೇಡು ಶಿಲೆ, ಸುಣ್ಣ ಶಿಲೆ ಇನ್ನೂ ಬಗೆ ಬಗೆಯ ಶಿಲೆಗಳು ಎಲ್ಲವೂ ಕುತೂಹಲಿಯೊಬ್ಬನ ಮನಸ್ಸನ್ನು ಕೆರಳಿಸುವಂಥವೇ. ಪಶ್ಚಿಮದ ಕಡೆಗಂತೂ ಪದರ ಪದರಗಳಾಗಿ ಹಬ್ಬಿದ ಕೆಂಪು ಚಾಕ್ ಮತ್ತು ಕಾರ್ ಶಿಲಾಪ್ರಸ್ತರಗಳು ಅತ್ಯಂತ ಮನೋಹರ ವಾಗಿವೆ. ಈ ರಮಣೀಯತೆ ಹಟ್ಟನ್‌ನ ಮನಸ್ಸನ್ನು ಸೂರೆಗೊಂಡಿತು. ತಾನು ಹಿಡಿದ ಬೇಸಾಯವನ್ನೂ ಮರೆತು ಈ ಶಿಲಾವರ್ಗಗಳನ್ನು ಅಧ್ಯಯನ ಮಾಡಲು ತೊಡಗಿದನು. ಪ್ರತಿಕಂದರವನ್ನು, ಗುಡ್ಡವನ್ನು, ನದಿ ಮತ್ತು ಸಮುದ್ರ ತೀರವನ್ನು ಅತ್ಯಂತ ತೀಕ್ಷ್ಣವಾಗಿ ನೋಡತೊಡಗಿದನು. ಅಲ್ಲಿದ್ದ ಶಿಲೆಗಳೆಲ್ಲವನ್ನೂ ಚೂರೂ ಬಿಡದೆ ಅಭ್ಯಾಸಮಾಡಿದುದೂ ಆಯಿತು.

ಹೀಗೆ ಎರಡುವರ್ಷ ನಾರ್‌ಫೋಕ್ ವಾಸವಾದಮೇಲೆ ಫ್ಲಾಂಡರ್ಸ್ ಪ್ರಾಂತದಲ್ಲಿ ಪ್ರವಾಸಮಾಡಿದನು. ಪ್ರವಾಸ ಮಾಡುವಾಗ ಸುತ್ತಲಿನ ಶಿಲೆ ಗಳನ್ನು, ಖನಿಜವರ್ಗಗಳನ್ನು ಅಲ್ಲಿಯ ಬೆಳೆ ಮತ್ತು ಬೇಸಾಯದ ಮಣ್ಣಿ ಗಿಂತಲೂ ಹೆಚ್ಚು ವಿವರವಾಗಿ ಅಭ್ಯಾಸಮಾಡಿದನು. ೧೭೫೪ರ ಹೊತ್ತಿಗೆ ಬೆರ್‌ವಿಕ್‌ಷೈರನಲ್ಲಿ ನೆಲಸಿ ತನ್ನ ಹಿರಿಯರ ಜಮೀನುಗಳಲ್ಲಿ ಅತ್ಯಂತ ಆಧುನಿಕ ರೀತಿಯಲ್ಲಿ ಬೇಸಾಯವನ್ನು ಮಾಡತೊಡಗಿದನು. ಇಲ್ಲಿ ಸುಮಾರು ಹದಿನಾಲ್ಕು ವರ್ಷ ರೈತರ ಜೀವನವನ್ನು ಇತರ ಯಾವ

ಹವ್ಯಾಸಗಳನ್ನೂ ಹಚ್ಚಿಕೊಳ್ಳದೆ ನಡಸಿದನು. ಎಂದೋ ಒಂದೊಂದು ಬಾರಿ ಎಡಿಂಬರೋವಿಗೋ, ಇತರ ಪ್ರದೇಶಗಳಿಗೋ, ಪ್ರವಾಸಿಗನಾಗಿ ತೆರಳುತ್ತಿದ್ದನು. ಸುತ್ತ ಮುತ್ತಲ ಪ್ರಾಂತದ ರೈತಾಪಿ ವರ್ಗದವರಿಗೆ ಈತನನ್ನು ಕಂಡರೆ ಅಪಾರ ಗೌರವ. ಅವನನ್ನು ಮೇಧಾವಿಯೆಂದು ಮೆಚ್ಚಿಕೊಳ್ಳುತ್ತಿದ್ದರು. ಸದಾ ಯೋಚನಾಪೂರ್ಣವಾದ ಮುಖ ಯಾವುದೋ ನಿಗೂಢ ಸಮಸ್ಯೆಗೆ ಉತ್ತರವೀಯುವುದರಲ್ಲೇ ತಲ್ಲೀನವಾಗಿದ್ದಂತೆ ಕಂಡು ಬರುತ್ತಿತ್ತು.

ಈ ವೇಳೆಗೆ ಹಿಂದೆ ಪ್ರಾರಂಭಿಸಿದ್ದ "ಸಾಲ್ ಅಮೋನಿಯಕ್" ಕೈಗಾರಿಕೆ ಬಹು ಹಣವನ್ನು ಗಳಿಸಿತು. ಬೇಸಾಯವು ಸಹ ಬಹಳ ಲಾಭದಾಯಕವಾಗಿತ್ತು. ಸುಮಾರು ೧೭೬೮ರ ವೇಳೆಗೆ ಹಣಕಾಸಿನ ಸ್ಥಿತಿ ಅನುಕೂಲವಾದ ಮೇಲೆ ಹಳ್ಳಿಗಾಡನ್ನು ಬಿಟ್ಟು ಎಡಿಂಬರೋನಗರವನ್ನು ಸೇರಿ ವಿಜ್ಞಾನ ವಿಷಯಗಳನ್ನು ಚೆನ್ನಾಗಿ ಅಧ್ಯಯನ ಮಾಡತೊಡಗಿದನು.

ಆಗ ಎಡಿಂಬರೋನಗರ ಅಷ್ಟು ಹೀನಸ್ಥಿತಿಯಲ್ಲಿರಲಿಲ್ಲ. ಅಲ್ಲಿ ಸ್ಕಾಟ್‌ಲೆಂಡಿನ ಎಲ್ಲ ಸುಸಂಸ್ಕೃತ ನಾಗರಿಕ ಜನ, ವಿದ್ವಾಂಸರು, ವಿಜ್ಞಾನಿಗಳು, ಗಣ್ಯರು ನೆಲಸಿದ್ದರು. ಹಟ್ಟನ್ ಮತ್ತೆ ಅಲ್ಲಿಗೆ ವಲಸೆ ಬಂದುದನ್ನು ಅನೇಕ ಮಂದಿ ಸ್ವಾಗತಿಸಿ ಆತನ ಸ್ನೇಹಿತರಾದರು. ಈ ಗೆಳೆಯರ ಬಳಗದಲ್ಲಿ ಸುಪ್ರಸಿದ್ಧ ರಸಾಯನ ಶಾಸ್ತ್ರಜ್ಞ ಡಾ|| ಜೋಸೆಫ್ ಬ್ಲಾಕ್ ಅತ್ಯಂತ ಆಪ್ತನಾದನು. ಹಟ್ಟನ್‌ನ ಭೂವಿಜ್ಞಾನ ವಿಷಯಗಳಲ್ಲಿ ವಿಶೇಷ ಸಹಾನುಭೂತಿಯನ್ನು ತೋರಿಸಿ ಅವಕ್ಕೆ ನಿರ್ದಿಷ್ಟವಾದ ರೂಪವನ್ನು ಕೊಡುವುದರಲ್ಲಿ ಈತನದೇ ಮೇಲುಗೈ.

ನೌಕಾಯುದ್ಧವ್ಯೂಹದ ರಚನೆಯಲ್ಲಿ ನಿಷ್ಣಾತನಾದ ಜಾರ್ಜ್ ಕ್ಲಾರ್ಕ್ ಮತ್ತೊಬ್ಬ ಆಪ್ತ ಸ್ನೇಹಿತ. ಇವರಲ್ಲದೆ, ಸಾಹಿತ್ಯ ಮತ್ತು ರಾಜಕೀಯಗಳಲ್ಲಿ ಪ್ರಸಿದ್ಧ ವ್ಯಕ್ತಿಯಾಗಿದ್ದ ಆ್ಯಡಂ ಫೆರ್‌ಗ್ಯೂಸನ್ ಸಹ ಈ ಗೆಳೆಯರ ಬಳಗದವನೇ. ಈ ಕಾಲದಲ್ಲೇ ಹಟ್ಟನ್ ವಿಶೇಷವಾಗಿ ಅಧ್ಯಯನ ಮಾಡಿ ವೈಜ್ಞಾನಿಕ ತತ್ವಗಳ ಚಿಂತನೆ ಮಾಡಿದನು. ಬಹುಶಃ ಗಣಿತಶಾಸ್ತ್ರವನ್ನು ಹೊರತು ಮಿಕ್ಕ ಎಲ್ಲಾ ವಿಜ್ಞಾನವಿಭಾಗಗಳನ್ನೂ ಅಭ್ಯಾಸಮಾಡಿ ಅನೇಕ ಹೊಸ ವಿಷಯಗಳನ್ನು ಹೊರಗೆಡಹಿದನು. ಹವಾಮಾನ ಶಾಸ್ತ್ರದಲ್ಲಿ

ಮಳೆಯ ವಿಚಾರವಾಗಿ ತನ್ನದೇ ಆದ ಒಂದು ' ಥಿಯರಿ 'ಯನ್ನು ಸೂಚಿಸಿದನು. ಭೌತಶಾಸ್ತ್ರ ಮತ್ತು ತತ್ವಶಾಸ್ತ್ರಗಳನ್ನು ಕುರಿತು ಉದ್ಗ್ರಂಥಗಳನ್ನೂ ಬರೆದನು. ತಾನು ಸಾಯುವ ಕಾಲದಲ್ಲೂ ಸಹ ವ್ಯವಸಾಯ ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥವೊಂದರ ರಚನೆಯಲ್ಲಿ ಕೈಹಾಕಿದ್ದನು. ಹೀಗೆ ಅವನ ಅಧ್ಯಯನ ನಾನಾ ಮುಖಗಳಲ್ಲಿ ನಡೆಯಿತು.

ಹಟ್ಟ್ನ್ ಕೇವಲ ಯಾವುದೋ ಒಂದು ಶಾಸ್ತ್ರದ ವಿಷಯವಾಗಿ ಮಾತ್ರ ಅಭ್ಯಾಸಮಾಡಲಿಲ್ಲ. ಜ್ಞಾನಾನ್ವೇಷಣೆ ನಾನಾ ದಿಕ್ಕುಗಳಲ್ಲಿ ನಡೆಯಿತು. ಇತರರು ಯಾರೇ ಆಗಲಿ, ವಿಜ್ಞಾನದ ವಿಷಯವಾಗಿ ಸಂಶೋಧನೆಗಳನ್ನು ನಡಸಿ ಹೊಸ ವಿಷಯಗಳನ್ನು ಬೆಳಕಿಗೆ ತಂದಾಗ ಹೆಚ್ಚಿನ ಸಂತೋಷವನ್ನು ವ್ಯಕ್ತಪಡಿಸುತ್ತಿದ್ದನು. ಜೇಮ್ಸ್ ವ್ಯಾಟ್ ಹಬೆಯ ಯಂತ್ರವನ್ನು ನಿರ್ಮಿಸಿದಾಗ, ಕುಕ್ ದಕ್ಷಿಣಸಾಗರಗಳಲ್ಲಿ ಹೊಸ ಭೂಭಾಗಗಳನ್ನು ಕಂಡು ಹಿಡಿದಾಗ, ಹಟ್ಟ್ನ್‌ಗಾದ ಸಂತೋಷ ಅಷ್ಟಿಷ್ಟಲ್ಲ.

ಎಡ್ಡಿಂಬರೋ ನಗರದಲ್ಲಿದ್ದಾಗ ಸಂಜೆ ಅಡ್ಡಾಡಲು ಯಾವ ದಿಕ್ಕಿನಲ್ಲಿ ಹೋದರೂ ಈತನಲ್ಲಿದ್ದ ವೈಜ್ಞಾನಿಕ ವಿಷಯಗಳಿಗೆ ಸುತ್ತಲಿನ ವಾತಾವರಣ ಪ್ರಚೋದಕವಾಗಿತ್ತು. ಪೂರ್ವಾಭಿಮುಖವಾಗಿ ಹೊರಟರೆ ಎಂದೋ ನಡೆದ ಜ್ವಾಲಾಮುಖಿಗಳ ಸ್ಮಾರಕವಾಗಿದ್ದ ' ಆರ್ಥರ್ಸ್‌ಸೀಟ್ ' ಮತ್ತು ' ಸ್ಯಾಲಿಸ್‌ಬರಿ ಕ್ರಾಗ್ಸ್ ' ತಲೆಯೆತ್ತಿ " ಇಗೋ ನಾವಿಲ್ಲಿದ್ದೇವೆ " ಎಂದು ಸಾರಿ ಹೇಳುತ್ತಿದ್ದವು. ಪಶ್ಚಿಮದ ಕಡೆ ಅಡ್ಡಾಡುವಾಗ ಲೀತ್ ನದಿ ತನ್ನ ಮಂಜುಳನಿನಾದದಿಂದ ಸ್ವಾಗತಿಸುತ್ತಿತ್ತು. ನದಿಯು ಇಕ್ಕೆಲಗಳಲ್ಲಿ ತನ್ನ ಕೆಲಸಕಾರ್ಯಗಳ ಮುದ್ರೆಯೊತ್ತಿ ಈ ಭೂವಿಜ್ಞಾನಿಯನ್ನು ಕೆರಳಿಸುತ್ತಿತ್ತು. ಕಾರ್ಬಾನಿಫರಸ್ ಯುಗದ ಭೂಚರಿತ್ರೆಯೆಲ್ಲಾ ತೆರೆದಿಟ್ಟಂತಿತ್ತು. ಕಡಿದಾದ, ಅಷ್ಟೇ ಮನೋಹರವಾಗಿದ್ದ ಕ್ಯಾಸಲ್‌ರಾಕ್ ಲಕ್ಷಾಂತರ ವರ್ಷಗಳ ಹಿಂದೆ ನಡೆದ ಭೂಕಾರ್ಯಕ್ಕೆ ಉತ್ತಮ ಉದಾಹರಣೆಯಾಗಿತ್ತು. ಶಿಲಾದ್ರವ ಭೂಮಿಯ ಒಳಭಾಗದಿಂದ ಹೊರಬಂದು ಆರಿ ಗಡಸುಕಲ್ಲಾದ ರೀತಿಯನ್ನು ಸುಸ್ಪಷ್ಟವಾಗಿ ಚಿತ್ರಿಸಿತ್ತು ಈ ಪ್ರದೇಶದಲ್ಲಿ.

ಇವುಗಳಿಂದ ಉತ್ತೇಜಿತನಾಗಿ ಹಟ್ಟನ್ ಪ್ರಕೃತಿಯನ್ನು ಇನ್ನೂ ಚೆನ್ನಾಗಿ ತಿಳಿದುಕೊಳ್ಳಲು ದೂರದಲ್ಲಿದ್ದ ನಾನಾ ಪ್ರದೇಶಗಳಿಗೆ ಆಗಾಗ್ಗೆ

ಪ್ರವಾಸ ಹೋಗುತ್ತಿದ್ದನು. ಇಷ್ಟು ಸಾಲದೆ, ಇಂಗ್ಲೆಂಡ್ ಮತ್ತು ವೇಲ್ಸ್ ಪ್ರಾಂತಗಳಿಗೂ ಭೇಟಿಕೊಟ್ಟನು. ಹೀಗೆ ಮೂವತ್ತಕ್ಕೂ ಹೆಚ್ಚು ವರ್ಷಗಳು ಪ್ರಕೃತಿಯ ಮಡಿಹೊಕ್ಕು ಹೊಸ ವಿಷಯಗಳನ್ನು ಸಂಗ್ರಹಿಸಿ, ಅವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದನು. ಈಗ ಭೂಮಿಯ ಮೇಲೆ ಕಂಡುಬರುವ ವಸ್ತುಗಳೆಲ್ಲಾ ಬಹುಶಃ ಹೇಗೆ ರೂಪಿತವಾಗಿರಬಹುದು? ಎಂದು ಚಿಂತನೆ ಮಾಡಿ ತನ್ನದೇ ಆದ ಒಂದು ರೀತಿಯಲ್ಲಿ ಆ ಒಗಟುಗಳನ್ನು ಬಿಡಿಸಲು ಪ್ರಯತ್ನಿಸಿದನು. ನಾನಾ ಕಡೆ ಚದರಿಹೋಗಿದ್ದ ಎಲ್ಲಾ ಕುರುಹುಗಳನ್ನೂ ಸರಿಯಾಗಿ ಜೋಡಿಸಿ, ಆಪ್ತಮಿತ್ರರು ಡಾ|| ಬ್ಲಾಕ್ ಮತ್ತು ಕ್ಲಾರ್ಕ್ ಇವರಿಗೆ ತನ್ನ ಆಲೋಚನಾ ತರಂಗಗಳ ಪರಿಚಯಮಾಡಿಸಿ, ಅವರಿಂದ ಉತ್ತೇಜಿತನಾದನು. ೧೭೮೩ರಲ್ಲಿ 'ರಾಯಲ್ ಸೊಸೈಟಿ ಆಫ್ ಎಡಿಂಬರೋ' ಸಂಸ್ಥೆ ಜನ್ಮ ತಾಳುವುದಕ್ಕೆ ಹಟ್ಟನ್ ಬಹುವಾಗಿ ಶ್ರಮಿಸಿದ್ದಾನೆ. ಇದರ ಮೊತ್ತಮೊದಲ ಕಾರ್ಯಕ್ರಮಗಳಲ್ಲಿ ಭೂಮಿಯ ವಿಷಯವಾಗಿ ತಾನು ನಡಸಿದ ಪರಿಶೋಧನೆಗಳನ್ನು ಕುರಿತ ಉಪನ್ಯಾಸವೂ ನಡೆಯಿತು. ಬಹುಶಃ ಈ ಸಂಸ್ಥೆ ಜನ್ಮ ತಾಳದಿದ್ದಲ್ಲಿ ಹಟ್ಟನ್‌ವಾದವೇ ನಮಗೆ ಪರಿಚಯವಾಗದೆ ಹೋಗುತ್ತಿತ್ತೆನ್ನಬಹುದು. ಈ ಉಪನ್ಯಾಸದ ಆಧಾರದ ಮೇಲೆ ಎರಡು ದೊಡ್ಡ ಗ್ರಂಥಗಳು ೧೭೯೫ರಲ್ಲಿ ಪ್ರಕಟವಾದುವು. ಈತನ ಪ್ರಾಣಸ್ನೇಹಿತ ಪ್ಲೇಫೇರ್, ಈತನು ಗತಿಸಿದ ಕೆಲವು ದಿನಗಳ ಮೇಲೆ "ಇಲಸ್ಟ್ರೇಷನ್ಸ್ ಆಫ್ ದಿ ಹಟ್ಟೋನಿಯನ್ ಥಿಯರಿ" ಎಂಬ ಉತ್ತಮ ಗ್ರಂಥವನ್ನು ಸಂಪಾದಿಸಿ ಬೆಳಕಿಗೆ ತಂದು ವಿಜ್ಞಾನ ಪ್ರಪಂಚಕ್ಕೆ ಉಪಕಾರ ವೆಸಗಿದಾನೆ.

"ಭೂಗೋಳದಲ್ಲಿ ಹೆಚ್ಚು ಶಾಖವಿದೆ. ಭೂಚರಿತ್ರೆಯ ಹಿಂದಿನ ಕಾಲಗಳಲ್ಲಿ ಈ ಉಷ್ಣತೆಯಿಂದಲೇ ಒಳಗೆ ಹುದುಗಿದ್ದ ಶಿಲಾದ್ರವ ಹೊರ ಬಂದು, ಕಾಲಕ್ರಮೇಣ ಆರಿ, ನಾನಾ ಬಗೆಯ ಶಿಲೆಗಳನ್ನು ಉಂಟುಮಾಡಿದೆ" ಎಂಬುದು ಹಟ್ಟನ್ ಪ್ರತಿಪಾದಿಸಿದ ಅತ್ಯಂತ ಮುಖ್ಯವಾದ ತತ್ವಗಳಲ್ಲೊಂದು. ಈ ಪ್ರತಿಪಾದನೆಗೆ ಅನೇಕ ಉದಾಹರಣೆಗಳನ್ನು ತೋರಿಸಿದನು. ಇದಕ್ಕೆ ಮೊದಲು ವರ್ನರ್ ಮತ್ತು ಆತನ ಶಿಷ್ಯರು ಗ್ರಾನೈಟ್ ಮುಂತಾದ ಅಗ್ನಿ ಶಿಲೆಗಳೂ ಸಹ ಮೂಲಸಾಗರದ ಕೆಲವು ರಾಸಾಯನಿಕ ವಸ್ತುಗಳಿಂದ

ಉಂಟಾಗಿವೆಯೆಂದು ಸಾರುತ್ತಿದ್ದರು.

ಈ ತೆರನಾದ ಅಗ್ನಿಶಿಲೆಗಳಲ್ಲದೆ ಜಲಜಶಿಲೆಗಳೆಂಬ ಮತ್ತೊಂದು ವರ್ಗವುಂಟು. ಇವು ಭೂ ಚರಿತ್ರೆಯನ್ನು ತಿಳಿಯಲು ಬಹು ಸಹಾಯಕ ವಾಗಿವೆ. ಸಣ್ಣ ಸಣ್ಣ ಶಿಲಾಕಣಗಳು ಸಾಗರದ ತಳಗಳಲ್ಲಿ ಒಟ್ಟುಗೂಡಿ ಕ್ರಮೇಣ ಪದರುಪದರಾದ ಜಲಜಶಿಲೆಗಳಾಗುತ್ತವೆ. ಕ್ರಮೇಣ ನೀರಿದ್ದ ಕಡೆ ನೆಲ, ನೆಲವಿದ್ದ ಕಡೆ ನೀರು ಕಾಣಿಸಿಕೊಳ್ಳುವುದುಂಟು. ಹೀಗಾದಾಗ ಅಲ್ಲಿನ ಜಲಜ ಶಿಲೆಗಳು ನೆಲದ ಮೇಲೆ ಬರುತ್ತವೆ. ನೀರಾದ ಕಡೆ ಜಲಜಶಿಲೆಗಳು ಪುನಃ ಉಂಟಾಗಲು ಪ್ರಾರಂಭವಾಗುತ್ತವೆ. ಅಂದರೆ ಭೂಚರಿತ್ರೆಯಲ್ಲಿ ಮತ್ತೊಂದು ಯುಗ ಪ್ರಾರಂಭವಾಯಿತೆನ್ನಬೇಕು. ಒಂದು ಯುಗದ ಜಲಜಶಿಲೆಗಳು ಮತ್ತೊಂದು ಯುಗದ ಜಲಜಶಿಲೆಗಳಿಗಿಂತ ಅನೇಕ ವಿಧಗಳಲ್ಲಿ ಬೇರೆಯಾಗಿದ್ದು ತನ್ನ ವೈಶಿಷ್ಟ್ಯವನ್ನು ತೋರಿಸುತ್ತವೆ. ಒಂದರಿಂದ ಮತ್ತೊಂದಕ್ಕೆ ಕೊಂಚ ವಿರಾಮಕಾಲವೂ ದೊರೆಯಬಹುದು. ಇದಕ್ಕೆ ‘ ಯುಗಾಂತ ವಿಳಂಬ ’ ಅಥವಾ ‘ ಸಂಚಯನ ವಿಳಂಬ ’ ಎಂದು ಹೇಳುತ್ತೇವೆ. ಪ್ರತಿಯೊಂದು ಜಲಜಶಿಲಾವರ್ಗಗಳ ತಳಭಾಗದಲ್ಲಿ ಸಂಚಯನ ವಿಳಂಬಗಳಿರುತ್ತವೆಂದೂ, ಇವುಗಳ ಸಹಾಯದಿಂದ ಭೂಚರಿತ್ರೆಯ ಯುಗಗಳನ್ನು ಸುಲಭವಾಗಿ ಗುರುತಿಸಬಹುದೆಂದೂ ಹಟ್ಟನ್ ಪ್ರತಿಪಾದಿಸಿದನು. ಭೂಕಾಲವಿಂಗಡಣೆಗೂ ಇದರಿಂದ ಬಹಳ ಸಹಾಯವಾಯಿತು.

ಈ ತತ್ವಗಳ ವಿಚಾರವಾಗಿ ಹೆಚ್ಚು ಸಂಗತಿಗಳ ಪರಿಚಯವಿದ್ದರೂ ಗ್ರಂಥಗಳನ್ನು ಬರೆಯಲು ಹಟ್ಟನ್‌ನಿಗೆ ನಾನಾ ಕಾರಣಗಳಿಂದ ಅನುಕೂಲ ವಾಗಲಿಲ್ಲ. ನಮ್ಮ ಅದೃಷ್ಟವಶಾತ್ ಆತನ ಆಪ್ತ ಮಿತ್ರ ಸುಪ್ರಸಿದ್ಧ ಗಣಿತ ವಿಜ್ಞಾನಿ ಜಾನ್ ಪ್ಲೇಫೇರ್ ಆತನ ತತ್ವಗಳನ್ನು ವಿಶದವಾಗಿ ಪ್ರತಿಪಾದಿಸಿ, ಬೃಹತ್ ಗ್ರಂಥಗಳನ್ನು ಬರೆದು ಸಾರಸ್ವತ ಪ್ರಪಂಚಕ್ಕೆ ಚೆನ್ನಾಗಿ ಪರಿಚಯ ಮಾಡಿಕೊಟ್ಟಿದ್ದಾನೆ. ಹೀಗೆ ಹಟ್ಟನ್ ತತ್ವಗಳನ್ನು ತಿಳಿದುಕೊಳ್ಳಲು ೧೭೮೫ ರಲ್ಲಿ ಮಾಡಿದ ಭಾಷಣ, ೧೭೯೫ ರಲ್ಲಿ ಪ್ರಕಟವಾದ ಗ್ರಂಥಗಳು ಮತ್ತು ಮುಖ್ಯವಾಗಿ ೧೮೦೨ ರಲ್ಲಿ ಜಾನ್ ಪ್ಲೇಫೇರ್‌ನಿಂದ ಸಂಪಾದಿತವಾಗಿ ಪ್ರಕಟವಾದ ಗ್ರಂಥಗಳು ಬಹಳ ಸಹಾಯಕವಾಗಿವೆ.

ಈತನ ಹಿಂದಿದ್ದ ಅನೇಕ ಭೂವಿಜ್ಞಾನಿಗಳು ಭೂಮಿಯ ವಿಚಾರ

ವಾಗಿ ತಮ್ಮ ಊಹಾ ಪ್ರಪಂಚದಲ್ಲಿ ಅನೇಕ ' ಥಿಯರಿ 'ಗಳನ್ನು ನಿರ್ಮಿಸಿ ಪ್ರಕಟಮಾಡಿದ್ದಾರೆ. ಹಟ್ಟನ್ ಹೀಗೆ ಮಾಡದೆ ಸ್ಪಷ್ಟ ನಿದರ್ಶನ ಮತ್ತು ಪ್ರಕೃತ ಆಧಾರಗಳ ಸಹಾಯದಿಂದ ಹಿಂದಿನ ಚರಿತ್ರೆಯನ್ನು ವಿವರಿಸಲು ಪ್ರಯತ್ನಿಸಿದನು. " ಹಿಂದಿನವನ್ನು ತಿಳಿಯಲು ಈಗಿನವು ಬಹು ಸಹಾಯಕ " ಎಂಬ ಮೂಲತತ್ವವನ್ನು ಬಹು ಚೆನ್ನಾಗಿ ಪ್ರತಿಪಾದಿಸಿದ್ದಾನೆ.

ನಾರ್‌ಫೋಕ್ ಪ್ರಾಂತದಲ್ಲಿ ಸುತ್ತಾಡುವಾಗ ಅಲ್ಲಿನ ನೆಲ ಈಗಿರುವಂತೆ ಹಿಂದೆ ಇರಲಿಲ್ಲವೆಂದೂ, ಮಣ್ಣಿನ ಪದರದ ಅಡಿಯಲ್ಲಿ ಭೂಮಿಯ ಗತಕಾಲದ ಸ್ಥಿತಿಗತಿಗಳನ್ನು ಅರಿತುಕೊಳ್ಳಲು ಅನೇಕ ಉತ್ತಮ ಕುರುಹುಗಳಿವೆಯೆಂದೂ ತಿಳಿದುಕೊಂಡನು. ಅಲ್ಲಿನ ಶಿಲೆಗಳು ಪದರು ಪದರುಗಳಾಗಿವೆ. ಕ್ರಮವಾದ ರೀತಿಯಲ್ಲಿ ರಚನೆಯನ್ನು ತೋರಿಸುತ್ತವೆ. ಒಂದೊಂದು ಪದರವೂ ಒಂದೊಂದು ಬಗೆಯ ಶಿಲೆಯಿಂದ ಕೂಡಿದೆ. ಪ್ರತಿಪದರವೂ ತನಗಿಂತ ಹಳೆಯವಾದ ಶಿಲೆಗಳ ಸಣ್ಣ ಸಣ್ಣ ಕಣಗಳ ಕೂಡುವಿಕೆಯಿಂದ ಆಗಿದೆ. ಇವು ಈಗಿರುವ ನೆಲಭಾಗ ಹಿಂದೆ ದೊಡ್ಡ ಸಮುದ್ರದ ತಳವಾಗಿತ್ತು. ಹೀಗೆಯೇ ಈಗಿನ ಸಮುದ್ರಗಳ ತಳದಲ್ಲೂ ಶಿಲಾರಚನೆ ಮುಂದುವರಿಯುತ್ತಿದೆ ಎಂದು ಅಭಿಪ್ರಾಯಪಟ್ಟನು.

ಭೂಮಿಯ ಮೇಲೆ ಅನೇಕ ಕಡೆ ಈ ತೆರನಾದ ಶಿಲಾಪ್ರಸ್ತರಗಳಿವೆ. ಇವು ಏಕಕಾಲದಲ್ಲಿ ಉಂಟಾಗದೆ ಭೂಚರಿತ್ರೆಯ ನಾನಾ ಕಾಲಗಳಲ್ಲಿ ಜನ್ಮತಾಳಿವೆ. ಸರಿಯಾದ ರೀತಿಯಲ್ಲಿ ಇವನ್ನು ಅಧ್ಯಯನ ಮಾಡಿದರೆ ಭೂಚರಿತ್ರೆಯ ಕ್ರಮವಾದ ಬದಲಾವಣೆಗಳನ್ನು ತಿಳಿಯಬಹುದು. ಇವಕ್ಕೆ ಜನ್ಮ ಕೊಟ್ಟ ಮೊದಲಿದ್ದ ಶಿಲೆಗಳನ್ನು ' ಮೂಲಶಿಲೆ 'ಗಳೆನ್ನಬಹುದು. ಈ ಜಲಜಶಿಲೆಗಳು ಅಷ್ಟು ಗಡುಸಾಗಿಲ್ಲ. ಮೃದುವಾಗಿವೆ. ಕಾಲಕ್ರಮೇಣ ಭೂಗರ್ಭದ ಉಷ್ಣ ಇವನ್ನು ಗಡಸು ಶಿಲೆಗಳಾಗಿ ಮಾರ್ಪಡಿಸುವುದೂ ಉಂಟು. ಹೀಗೆ ಭೂಮಿಯ ಮೇಲೆ ಅನೇಕ ಶಿಲೆಗಳು ಉಂಟಾಗಿವೆ. ಪದರು ಶಿಲೆಗಳು ೧೫೦೦೦ ಅಡಿ ಎತ್ತರಕ್ಕೂ ಮೀರಿದ ಪರ್ವತಶ್ರೇಣಿಗಳಲ್ಲೂ ಕಂಡು ಬಂದಿವೆ. ಅನೇಕ ಕಡೆ ಹೆಚ್ಚು ಒತ್ತಡಕ್ಕೆ ಸಿಕ್ಕಿದಾಗ ಮಡಿಕೆ ಬಿದ್ದು ಸುಕ್ಕುಸುಕ್ಕಾಗುತ್ತವೆ. ಜಲಭಾಗ ನೆಲಭಾಗವಾಗಿ ಮೇಲಕ್ಕೆ ಎತ್ತಲ್ಪಡುವುದರಿಂದಲೇ ಇದು ಸಾಧ್ಯವಿಲ್ಲ. ಇದಕ್ಕೂ ಹೆಚ್ಚಿನ ಬದಲಾವಣೆಗಳಾಗಲೇ

ಬೇಕು. ಇವು ಭೂಚರಿತ್ರೆಯಲ್ಲಿ ಒಂದೇ ಕಾಲದಲ್ಲಿ ಆಗದೆ, ನಾನಾ ಕಾಲಗಳಲ್ಲಿ ತಮ್ಮ ಪ್ರಭಾವವನ್ನು ತೋರ್ಪಡಿಸಿವೆ ಎಂಬ ಅಂಶವನ್ನು ಆಧಾರ ಸಹಿತವಾಗಿ ವಿವರಿಸಿದ ಭೂವಿಜ್ಞಾನಿಗಳ ಪೈಕಿ ಹಟ್ಟನ್ ಅಗ್ರಗಣ್ಯ.

ಈ ಮಹತ್ ಕ್ರಿಯೆಗೆ ಮೂಲ ಯಾವುದು? ಎಂಬುದನ್ನು ಹಟ್ಟನ್ ಯೋಚಿಸಿ, ಅದನ್ನು ತಿಳಿಯಲು ಭೂಮಿಯ ಮೇಲೆ ಯಾವುದಾದರೂ ಕುರುಹುಗಳಿವೆಯೋ ಎಂಬಂಶವನ್ನು ಪರಿಶೀಲಿಸಿದನು. ಶಕ್ತಿ ಭೂಗರ್ಭದಿಂದಲೇ ಆವಿರ್ಭವಿಸಿರಬೇಕು, ಇದರಲ್ಲಿ ಯಾವ ಅನುಮಾನವೂ ಇಲ್ಲ ಮತ್ತು ಇದಕ್ಕೆ ಮುಖ್ಯ ಮೂಲ—ಭೂಮಿಯ ಅಂತರಾಳದಲ್ಲಿ ಹುದುಗಿರುವ ಶಾಖ.

ಆದರೆ ಈತನ ಸಮಕಾಲೀನರಾದ ಅನೇಕ ಇತರ ವಿಜ್ಞಾನಿಗಳು ಭೂಗರ್ಭದಲ್ಲಿ ಹುದುಗಿರುವ ಈ ಉಷ್ಣದ ವಿಚಾರವಾಗಿ ಅಷ್ಟು ಹೆಚ್ಚಿನ ಅಭಿಪ್ರಾಯಗಳನ್ನು ಹೊಂದಿರಲಿಲ್ಲ. ಉದಾಹರಣೆಗೆ ಭೂಮಿಯ ಮೇಲೆ ಆಗಾಗ ಕಾಣಿಸಿಕೊಳ್ಳುವ ಅಗ್ನಿಪರ್ವತಗಳಿಗೆ ಕಾರಣ ಈ ಶಾಖವಲ್ಲ, ಕೆಲವು ಪದಾರ್ಥಗಳ ಉರಿಯುವಿಕೆಯೇ ಎನ್ನುತ್ತಿದ್ದರು. ಹಟ್ಟನ್ ಈ ಅಭಿಪ್ರಾಯವನ್ನು ಅನುಮೋದಿಸದೆ, ಭೂಮಿಯ ತಿರುಳು ದ್ರವರೂಪದಲ್ಲಿ ಅತ್ಯಂತ ಹೆಚ್ಚು ಉಷ್ಣತೆಯಿಂದ ಕೂಡಿದೆ, ಅದಕ್ಕೆ ಸಾಕಷ್ಟು ಆಧಾರಗಳೂ ಇವೆ ಎಂದು ಸ್ಪಷ್ಟಪಡಿಸಿದನು.

ಒಳಗೆ ಹುದುಗಿರುವ ಶಿಲಾದ್ರವ, ಒತ್ತಡದ ವ್ಯತ್ಯಾಸಗಳಿಂದ ಭೂಮಿಯ ಹೊರಚಿಪ್ಪಿನಲ್ಲಿ ಉಂಟಾಗುವ ಬಿರುಕುಗಳ ಮೂಲಕ ಮೇಲಕ್ಕೆ ಬಂದು ಶಿಲೆಯಾಗಿ ಮಾರ್ಪಡುತ್ತದೆ. ಇವೇ ಅಗ್ನಿ ಶಿಲೆಗಳು. ಇವು ಸಾಮಾನ್ಯವಾಗಿ ಬಂಡೆಯಾಕಾರದಲ್ಲಿರುತ್ತವೆ. ಜಲಜಶಿಲೆಗಳಂತೆ ಪದರು ರಚನೆಯನ್ನು ತೋರಿಸುವುದಿಲ್ಲ.

ವರ್ನರ್ ಅಭಿಪ್ರಾಯದಂತೆ ಇಂಥವೂ ಸಹ ಸಾಗರಗಳ ತಳದಲ್ಲೇ ಜನ್ಮತಾಳುತ್ತವೆ. ಅಗ್ನಿ ಶಿಲೆಗಳೇ ಇಲ್ಲ. ಈ ಪಂಥದವರನ್ನು "ನೆಪ್ಚೂನಿಸ್ಟ್ಸ್" ಎಂದೂ ಕರೆಯುತ್ತಿದ್ದರು.

ನೆಪ್ಚೂನ್ ಎಂದರೆ ಸಮುದ್ರದ ಅಧಿ ದೇವತೆ. ಆಗ—ಹಟ್ಟನ್ ಬರುವ ಮೊದಲು ಈ ಅಭಿಪ್ರಾಯಗಳಿಗೇ ವಿಜ್ಞಾನವಲಯಗಳಲ್ಲಿ ಬಹು ಮನ್ನಣೆ.

ಬುಡವಿಲ್ಲದ ಅರ್ಥವಿಲ್ಲದ ಈ ವಾದವನ್ನು ಧೈರ್ಯವಾಗಿ ಖಂಡಿಸಿ, ಸರಿಯಾದ ರೀತಿಯಲ್ಲಿ ಭೂವಿಜ್ಞಾನದ ಮೂಲತತ್ವಗಳನ್ನು ಮಂಡಿಸಿದ ಮಹಾನುಭಾವ—ಜೇಮ್ಸ್ ಹಟ್ಟನ್. ಆತನ ವಾದಕ್ಕೆ ಎಲ್ಲರೂ ತಲೆ ಬಾಗಲೇಬೇಕಾಯಿತು. ಈಚಿನ ಸಂಶೋಧನೆಗಳೆಲ್ಲಾ ಹಟ್ಟನ್ ವಾದವನ್ನು ಸಮರ್ಥಿಸುತ್ತವೆ ಎಂದಮೇಲೆ ಆತನ ಕೀರ್ತಿಕಲಶಕ್ಕೆ ಮೆರುಗುಕೊಟ್ಟಂತಾಗಲಿಲ್ಲವೆ ?

ಇನ್ನೂ ಮುಂದುವರಿದು ಅಗ್ನಿಶಿಲೆಗಳನ್ನು 'ವ್ಹಿನ್‌ಸ್ಟೋನ್,' 'ಫಾರ್ಫಿರಿ' ಮತ್ತು 'ಗ್ರಾನೈಟ್' ಎಂದು ಮೂರು ವರ್ಗಗಳಾಗಿ ವಿಭಾಗಿಸಿದನು. ಈಚಿನ ಭೂವಿಜ್ಞಾನಿಗಳೂ ಸಹ ಅಗ್ನಿ ಶಿಲೆಗಳನ್ನು ಇದೇ ರೀತಿ ಕ್ರಮವಾಗಿ ವಾಲ್ಕ್ಯಾನಿಕ್, ಹೈಪಬಿಸಲ್ ಮತ್ತು ಪ್ಲುಟಾನಿಕ್ ಎಂದು ವಿಂಗಡಿಸಿರುವುದೂ ಗಮನಾರ್ಹ. ಹಟ್ಟನ್‌ಗೆ ಮುಂಚೆ ಅಗ್ನಿಶಿಲೆಗಳ ವರ್ಗೀಕರಣವೇ ಇರಲಿಲ್ಲ ; ಅಲ್ಲದೆ ಎಲ್ಲ ಶಿಲೆಗಳೂ ಜಲಜಶಿಲೆಗಳೇ ಎಂಬ ಕುರುಡುವಾದವಿತ್ತು ಎಂಬುದನ್ನೂ ನೆನಪಿನಲ್ಲಿಡಬೇಕು.

ಅಗ್ನಿಶಿಲೆ ಮತ್ತು ಜಲಜಶಿಲೆಗಳಲ್ಲದೆ ರೂಪಾಂತರಶಿಲೆಗಳೆಂಬ ಮುಖ್ಯವಾದ ಮತ್ತೊಂದು ವರ್ಗವಿದೆ. ಎಲ್ಲ ಬಗೆಯ ಶಿಲೆಗಳೂ ಭೂಮಿಯಲ್ಲಿ ಹೆಚ್ಚಿನ ಒತ್ತಡ ಮತ್ತು ಶಾಖಕ್ಕೆ ಒಳಗಾದಾಗ ಹೊಸರೂಪವನ್ನು ಪಡೆದು ರೂಪಾಂತರ ಶಿಲೆಗಳಾಗುತ್ತವೆ. ಇದನ್ನೂ ಸಹ ಸೂಕ್ಷ್ಮವಾಗಿ ಹಟ್ಟನ್ ತನ್ನ ಗ್ರಂಥದಲ್ಲಿ ನಮೂದಿಸಿದ್ದಾನೆ.

ಭೂಮಿಯ ಮೇಲ್ಭಾಗದಲ್ಲಿನ ಗುಡ್ಡ ಬೆಟ್ಟಗಳು ಕ್ರಮೇಣ ನಶಿಸಿ ಮಾಯವಾಗುತ್ತವೆ. ಹೀಗೆ ಈ ಕಾರ್ಯಗಳೆಲ್ಲಾ ನಿಧಾನವಾಗಿ, ಮಂದಗತಿಯಿಂದ, ಸಾಮಾನ್ಯರ ದೃಷ್ಟಿಗೆ ಅಗೋಚರವಾಗಿ ನಡೆಯುತ್ತಿವೆ. ಈ ನಿಸರ್ಗನಿಯಮಗಳಲ್ಲಿ ಯಾವ ಹೆಚ್ಚಳ ಅಥವಾ ಪ್ರಳಯವಾಗಲಿ ಸಂಭವಿಸುವುದಿಲ್ಲ. ಇದನ್ನು ಮೊದಲಿಗೆ ಸ್ಪಷ್ಟಪಡಿಸಿದವನು ಹಟ್ಟನ್. ಈತನಿಗೆ ಮೊದಲು, ಭೂಮಿಯ ಮೇಲೆ ಕಾಣಿಸಿಕೊಳ್ಳುವ ಈ ನಿಸರ್ಗದ ಬದಲಾವಣೆಗಳಿಗೆ ಪ್ರಳಯಗಳೇ ಕಾರಣ ಎಂಬ ನಂಬಿಕೆ ಜನರಲ್ಲಿ ಮತ್ತು ವಿಜ್ಞಾನಿಗಳಲ್ಲಿ ಇತ್ತು. ಇವಲ್ಲದೆ ನೀರ್ಗಲ್ಲಿನ ಪ್ರವಾಹಗಳ ವಿಷಯವಾಗಿಯೂ ಹೆಚ್ಚಿನ ಶೋಧನೆಗಳನ್ನು ನಡಸಿ, ಅನೇಕ ಹೊಸ ಸಂಗತಿಗಳನ್ನು

ತಿಳಿಸಿದನು.

ಹಟ್ಟನ್ ತುಂಬ ನಯ, ವಿನಯಸಂಪನ್ನ. ಅಸಂಖ್ಯಾತ ಮಿತ್ರರ ಸ್ನೇಹವಿತ್ತು. ಈತನ ವಿದ್ವತ್ತು, ಸದ್ಗುಣಗಳನ್ನು ಅನೇಕ ಮಿತ್ರರು ತುಂಬುಕಂಠದಿಂದ ಕೊಂಡಾಡಿದ್ದಾರೆ.

ಭೂ ವಿಜ್ಞಾನದ ಮೊದಲ ದಿನಗಳಲ್ಲಿ ತಪ್ಪುಹೆಜ್ಜೆ ಇಡುತ್ತಿದ್ದ ವಿಜ್ಞಾನಿಗಳನ್ನು ಸರಿಯಾದ ಮಾರ್ಗದಲ್ಲಿ ಕೊಂಡೊಯ್ದು, ಶಾಸ್ತ್ರದ ಬೆಳವಣಿಗೆಗೆ ಮೂಲಭೂತನಾದ ಈ ಮಹಾ ಆಚಾರ್ಯನಿಗೆ, ಪ್ರತಿಭಾವಂತನಿಗೆ, ವಿದ್ವನ್ಮಣಿಗೆ, ವಿಜ್ಞಾನಶ್ರೇಷ್ಠನಿಗೆ ನಮ್ಮ ನಮಸ್ಕಾರಗಳು.

# ಚಾರ್ಲ್ಸ್ ಡಾರ್ವಿನ್

ಚಾರ್ಲ್ಸ್ ಡಾರ್ವಿನ್ ಒಬ್ಬ ಪ್ರಸಿದ್ಧ ಜೀವ ವಿಜ್ಞಾನಿ. ಈತನು ವಿಜ್ಞಾನ ರಂಗದಲ್ಲಿ ಅಮಿತವಾಗಿ ದುಡಿದು, ಅನೇಕ ಸಮಸ್ಯೆಗಳಿಗೆ ಪರಿಹಾರ ದೊರಕಿಸಿದ್ದಾನೆ. ಈತನು ಲಿಂಕರ್ನ್‌ಷೈರಿನ ಪ್ರಸಿದ್ಧ ಬ್ಯಾರಿಸ್ಟರ್‌ರಾದ ಡಾರ್ವಿನ್ನರ ವಂಶಕ್ಕೆ ಸೇರಿದವನು. ಚಾರ್ಲ್ಸ್ ಡಾರ್ವಿನ್ನನ ತಾತ ಇರಾಸ್ಮಸ್ಸನು ಲೀಚ್‌ಫೀಲ್ಡ್ ನಗರದಲ್ಲಿ ವೈದಕೀಯ ವೃತ್ತಿಯಲ್ಲಿದ್ದು ಅಲ್ಲಿಯ ಜನರ ಮತ್ತು ಬ್ರಿಟಿಷ್ ಆಳರಸರ ಮೆಚ್ಚುಗೆಗೆ ಪಾತ್ರನಾಗಿದ್ದನು. ಇರಾಸ್ಮಸ್ಸನು ತನ್ನ ವೃತ್ತಿಯ ಜೊತೆಗೆ ಸಸ್ಯಾಲಯವನ್ನಿಟ್ಟುಕೊಂಡು, ಸಂಶೋಧನೆ ನಡೆಸುತ್ತಿದ್ದನು. ಬ್ಯಾರಿಸ್ಟರುಗಳಾಗಿ ಹೆಸರಾದ ಡಾರ್ವಿನ್ ವಂಶಸ್ಥರಲ್ಲಿ ವಿಜ್ಞಾನದ ಹಾದಿಯನ್ನು ಹಿಡಿದವರಲ್ಲಿ ಈತನೇ ಮೊದಲನೆಯವನು. ಇರಾಸ್ಮಸ್ಸನ ಮೊದಲನೆಯ ಹೆಂಡತಿ ಮೇರಿ ಜರಾಲ್ಡಳ ಹೊಟ್ಟೆಯಲ್ಲಿ ರಾಬರ್ಟ್ ವಾರಿಂಗ್ ಡಾರ್ವಿನ್ ಹುಟ್ಟಿದನು. ರಾಬರ್ಟನು ತನ್ನ ಇಪ್ಪತ್ತನೆಯ ವಯಸ್ಸಿನಲ್ಲಿಯೇ ವೈದ್ಯಕೀಯ ಪರೀಕ್ಷೆಯಲ್ಲಿ ಉತ್ತೀರ್ಣನಾದನು. ತನ್ನ ತಂದೆಯಂತೆ ತಾನೂ ಸಹ ಈ ವೃತ್ತಿಯಲ್ಲಿ ಹೆಚ್ಚು ಜನಾನುರಾಗಿಯಾಗಿ ಪ್ರಖ್ಯಾತನಾಗಿದ್ದನು. ರಾಬರ್ಟನು ತನ್ನ ವೃತ್ತಿಯಲ್ಲದೆ ಬೇರೆ ಯಾವ ಶಾಸ್ತ್ರದಲ್ಲಿಯೂ ತನ್ನ ತಂದೆಯಂತೆ ಆಸಕ್ತಿ ತೋರಿಸಿದವನಲ್ಲ. ಈತ ಬಡಬಗ್ಗರಿಗೆ ಉಚಿತವಾಗಿ ಚಿಕಿತ್ಸೆ ನಡೆಯಿಸುತ್ತಿದ್ದನು.

ರಾಬರ್ಟರ ತಂದೆ ಇರಾಸ್ಮಸ್ಸನಿಗೆ ವೆಡ್ಜ್‌ವುಡ್ ಮನೆತನದಲ್ಲಿ ಮೊದಲಿನಿಂದಲೂ ಸ್ನೇಹ. ರಾಬರ್ಟನೂ ಆ ಮನೆತನದವರ ಜೊತೆಯಲ್ಲಿ ಬಾಲ್ಯದಿಂದಲೂ ಸಂಪರ್ಕವಿಟ್ಟುಕೊಂಡಿದ್ದನು. ಇರಾಸ್ಮಸ್ಸನ ಮಿತ್ರ ಜೊಸೇಯಿ ವೆಡ್ಜ್‌ವುಡ್ಡರಿಗೆ ಸುಪಾನಳೆಂಬ ಮಗಳಿದ್ದಳು. ಈಕೆ ತುಂಬ ವಿದ್ಯಾವಂತೆ ಮತ್ತು ಅಪಾರವಾದ ಲೋಕಾನುಭವವುಳ್ಳವಳು. ತಂದೆಯ ಸಹನೆ, ಸಾಹಸ, ಕಲಾಕೌಶಲ್ಯಗಳೆಲ್ಲವೂ ಈಕೆಯಲ್ಲಿ ಎದ್ದು ಕಾಣುತ್ತಿದ್ದವು. ಇಂತಹ ಸುಸಂಸ್ಕೃತ ಯುವತಿಗೆ ರಾಬರ್ಟನು ಬಾಲ್ಯದಿಂದಲೂ ಚಿರಪರಿಚಿತನಾದ

ವ್ಯಕ್ತಿ. ಇವರಿಬ್ಬರ ವಿವಾಹ ೧೭೯೬ ರಲ್ಲಿ ನಡೆಯಿತು. ಈ ದಂಪತಿಗಳಿೀ ರ್ವರೂ ತಮ್ಮ ಸ್ವಂತ ಹಣದಿಂದ ಮನೆಯನ್ನು ಕಟ್ಟಿಕೊಂಡು ಸ್ವತಂತ್ರವಾಗಿ ಸುಖ ಜೀವನ ಸಾಗಿಸುತ್ತಿದ್ದರು. ಇವರಿಗೆ ಕಾಲಕ್ರಮೇಣ ಐವರು ಮಕ್ಕಳಾದರು. ಈ ಮಕ್ಕಳಲ್ಲಿ ಕಿರಿಯವನೇ ಪ್ರಸಿದ್ಧನಾದ ಚಾರ್ಲ್ಸ್ ಡಾರ್ವಿನ್. ಡಾರ್ವಿನ್ ಹುಟ್ಟಿದ್ದು ೧೮೦೯ ನೇ ಫೆಬ್ರವರಿ ೧೨ ನೆಯ ದಿನ ಷ್ರೂಸ್ಬರಿ ಎಂಬಲ್ಲಿ.

ಡಾರ್ವಿನ್ ಹುಟ್ಟಿದ ವರ್ಷ, ವಿಶ್ವವಿಖ್ಯಾತವಾದ ಪ್ರಸಿದ್ಧ ಮಹಾ ಪುರುಷರನ್ನು ಪ್ರಪಂಚಕ್ಕೆ ಕೊಟ್ಟ ಸುವರ್ಣ ವರ್ಷ. ಆಂಗ್ಲ ಸಾಹಿತ್ಯದಲ್ಲಿ ಕವಿಶ್ರೇಷ್ಠನೆನಿಸಿದ ಟೆನಿಸನ್, ವಿಖ್ಯಾತ ಆಂಗ್ಲ ಸಾಹಿತಿಗಳಾದ ಎಡ್ಗರ್ ಅಲ್ಲನ್ ಪೋ ಮತ್ತು ಬ್ರೌನಿಂಗ್ ಇವರುಗಳೂ, ಪ್ರಸಿದ್ಧ ರಾಜಕಾರಣಿಗಳಾದ ಏಬ್ರಹಾಂ ಲಿಂಕನ್ ಮತ್ತು ಗ್ಲಾಡ್ಸ್ಟನ್ ಅವರೂ, ಮತ್ತು ಜರ್ಮನಿಯ ಸಂಗೀತ ವಿಶಾರದ ಮೆಂಡಲ್ ಷಾ ಹುಟ್ಟಿದ ಮಹಾ ವರ್ಷ. ವರ್ಷದ ಮಹತ್ವವೋ ಏನೋ ಡಾರ್ವಿನ್ ಕೂಡ ಅವರೆಲ್ಲರಂತೆ ವಿಜ್ಞಾನ ಪ್ರಪಂಚದಲ್ಲಿ ತನ್ನದೇ ಆದ ಪ್ರಭಾವವನ್ನು ಬೀರಿದ್ದಾನೆ.

ಡಾರ್ವಿನ್ ಹುಟ್ಟಿದ ಮೇಲೆ ಆತನ ತಾಯಿಯ ಆರೋಗ್ಯ ಅಷ್ಟಾಗಿ ನೆಟ್ಟಗಿರಲಿಲ್ಲ. ರೋಗದಿಂದ ನರಳುತ್ತಾ ದೇಹವೆಲ್ಲವೂ ಕೃಶವಾಗಿತ್ತು. ಡಾರ್ವಿನ್ನನಿಗೆ ಒಂಭತ್ತು ವರ್ಷ ತುಂಬುವುದರಲ್ಲಿ ಖಾಯಿಲೆಯು ಉಲ್ಬಣವಾಗಿ, ತಾಯಿಯು ದೈವಾಧೀನಳಾದಳು. ಡಾರ್ವಿನ್ನನಿಗೆ ಪ್ರಾರಂಭ ಶಿಕ್ಷಣವೆಲ್ಲವೂ ತಾಯಿಯಿಂದಲೇ ನಡದಿತ್ತು. ಆಕೆಯು ಗತಿಸುವ ಮುನ್ನ ಷ್ರೂಸ್ಬರಿಯ ಯೂನಿಟೇರಿಯನ್ ಚರ್ಚಿಗೆ ಓದಲು ಹೋಗುತ್ತಿದ್ದನು. ನಂತರ ಆ ಶಾಲೆಯನ್ನು ಬಿಟ್ಟು ಆ ಊರಿನ ಮತ್ತೊಂದು ಶಾಲೆಗೆ ಪ್ರವೇಶಿಸಿದನು. ಶಾಲೆಗಳಲ್ಲಿ ಕೊಡುವ ಸಾಧಾರಣವಾದ ಶಿಕ್ಷಣ ಹಳೆಯ ಸಾಂಪ್ರದಾಯಕ ಪದ್ಧತಿಗಳನ್ನು ಅನುಸರಿಸಿತ್ತು. ಈ ಶಿಕ್ಷಣ ಡಾರ್ವಿನ್ನನಿಗೆ ಅಷ್ಟಾಗಿ ಹಿಡಿಸಲಿಲ್ಲ. ತನಗೆ ತೋರಿದ ರೇಖಾಗಣಿತ ಶಾಸ್ತ್ರವನ್ನು ಓದುತ್ತಾ ಕಾಲಕಳೆಯುತ್ತಿದ್ದನು. ಇದರಿಂದ ಹುಡುಗರಿಂದಾಗಲಿ, ಉಪಾಧ್ಯಾಯರಿಂದಾಗಲಿ ಯಾವ ಮಾನ್ಯತೆಯನ್ನೂ ಪಡೆಯದೆ, ಸೋಮಾರಿ ಎಂದು ನಾಮಾಂಕಿತನಾಗಿದ್ದನು. ಆತನಿಗಿದ್ದ ಪ್ರೇರಕ ಶಕ್ತಿಯೇ ಬೇರೆಕಡೆ.

ಮುಂದೆ ಆತನೊಬ್ಬ ಜೀವ ವಿಜ್ಞಾನಿಯಾಗುವನೆಂದು ಆ ಉಪಾಧ್ಯಾಯರಿಗೆ ಏನು ಗೊತ್ತು ?

ಡಾರ್ವಿನ್ನನ ವಂಶ ವಿಜ್ಞಾನ ಪ್ರೇಮಕ್ಕೂ, ಸೂಕ್ಷ್ಮದರ್ಶನ ಶಕ್ತಿಗೂ ಆದರ್ಶವಾಗಿತ್ತು. ಅಂತಹ ವಂಶೀಯನಾದ ಡಾರ್ವಿನ್ನನಲ್ಲಿ ವಿಜ್ಞಾನ ಪ್ರೇಮವಿರದೆಯಿಲ್ಲ. ಆದರೆ ತನ್ನ ತಂದೆಯಂತೆ ವೈದ್ಯಕೀಯ ವೃತ್ತಿಯ ಕಡೆಗೆ ಜ್ಞಾನ ಹರಿಯಲ್ಲಿಲ್ಲ. ಇವರ ವಂಶದ ಇರಾಸ್ಮಸ್ಸನು ವೈದ್ಯನಾದರೂ ಸಸ್ಯ ಶಾಸ್ತ್ರದಲ್ಲಿ ಅಭಿರುಚಿಯಿಟ್ಟುಕೊಂಡಿದ್ದಂತೆ,—ಮೊಮ್ಮಗ ಡಾರ್ವಿನ್ ತನ್ನ ತಾತನನ್ನು ಕಣ್ಣಾರೆ ನೋಡದೆ ಇದ್ದರೂ, ಜೀವ ವಿಜ್ಞಾನದ ಕಡೆ ತನ್ನ ಮನಸ್ಸನ್ನು ಬೆಳೆಯಿಸಿದ್ದನು.

ಡಾರ್ವಿನ್ನನು ಚಿಕ್ಕಂದಿನಿಂದಲೂ ಪ್ರಕೃತಿಯ ಕಡೆ ತನ್ನ ಮನಸ್ಸನ್ನು ಬಿಟ್ಟಿದ್ದ ವ್ಯಕ್ತಿ. ತೋಟದಲ್ಲಿ ಆಡುವಾಗಲೂ ಆತನ ಗಮನವೆಲ್ಲವೂ ಬಣ್ಣ ಬಣ್ಣದ ಹೂವುಗಳ ಕಡೆಗೋ ಹಾರಾಡುವ ಪಾರಿವಾಳಗಳ ಕಡೆಗೋ ಹೋಗುತ್ತಿತ್ತು. ಪ್ರಕೃತಿಯೆಂದರೆ ಅವನಿಗೆ ಎಷ್ಟೋ ಆನಂದ ಚಿಟ್ಟೆಗಳ ಬಣ್ಣಗಳಿಗೆ ಮಾರು ಹೋಗಿ ಅವುಗಳನ್ನು ಸಂಗ್ರಹಿಸುತ್ತಿದ್ದನು. ಹಕ್ಕಿಗಳನ್ನು ಹಿಡಿಯುವುದರಲ್ಲಿಯೂ, ಬೇಟೆಯಾಡುವುದರಲ್ಲಿಯೂ ತುಂಬ ಪ್ರೀತಿ. ಗುರಿಯಿಟ್ಟು ಬಂದೂಕದಿಂದ ಹೊಡೆಯುವುದೇ ಒಂದು ಕೌಶಲ್ಯವೆಂದು ಅವನ ಭಾವನೆ. ಹೀಗೆ ಹಕ್ಕಿಗಳ ಬೇಟೆಯೇ ಅಲ್ಲದೆ ಹೊರಗಡೆ ಹೋದಾಗ ಕಲ್ಲುಗಳ ಮತ್ತು ಲೋಹಗಳ ಚೂರುಗಳನ್ನು, ನಾಣ್ಯಗಳನ್ನು ಕೂಡಿಸುವ ಹುಚ್ಚು. ಬಿಡುವಾದಾಗ ಸಂಗ್ರಹವಾದ ಪದಾರ್ಥಗಳನ್ನು ವಿಂಗಡಿಸಿ, ಅವುಗಳ ವಿಚಾರವನ್ನು ತಿಳಿಯಲು ಪ್ರಯತ್ನ ಮಾಡುತ್ತಿದ್ದನು. ಈ ಬೇಟೆ ಮತ್ತು ಸಂಗ್ರಹ ಕಾರ್ಯಗಳಿಂದ ಡಾರ್ವಿನ್ನನಿಗೆ ದರ್ಶನ ಶಕ್ತಿಯೂ, ವಿಚಾರ ಶಕ್ತಿಯೂ, ಪರಿಶೀಲನಾಶಕ್ತಿಯೂ ಹೆಚ್ಚುತ್ತಾ ಬಂದುವು.

ಡಾರ್ವಿನ್ನನು ಶಾಲೆಯಲ್ಲಿ ಪಾಠ ಪ್ರವಚನಗಳಿಗೆ ಗಮನ ಕೊಡದೆಯಿದ್ದರೂ ಚುರುಕು ಸ್ವಭಾವದವನಾಗಿದ್ದನು. ಬಲಾಢ್ಯನೂ, ಸುಮ್ಮನೆ ಕೂಡುವ ಸ್ವಭಾವವಲ್ಲದವನೂ ಹೌದು. ತನಗೆ ಮೆಚ್ಚಿದ ಕೆಲಸದಲ್ಲಿ ಹೆಚ್ಚು ಆಸಕ್ತಿವಹಿಸುತ್ತಿದ್ದನು. ಸ್ನೇಹಿತರೊಡನೆ ಸಲಿಗೆಯಿಂದ ವರ್ತಿಸುವ ಸ್ವಭಾವ. ಪ್ರಕೃತಿಯೆ ಅವನಿಗೆ ಶಾಲೆ, ಶಾಲೆಯೆ ಅವನ ವಿರಾಮ ಗೃಹ. ಈ

ಗುಣಗಳು ಇವನ ತಂದೆಗೆ ಸರಿ ತೋರಲಿಲ್ಲ. ಶಾಲಾ ಪಾಠಗಳಲ್ಲಿ ಅನಾಸಕ್ತ ನಾದುದರಿಂದ ದಿನವೂ ಬೈಗುಳದ ಮಳೆಯೇ ಆಗುತ್ತಿತ್ತು. ಅಕ್ಕ ಅಣ್ಣಂದಿರೂ ಕೂಡ ಇವನ ಸಂಗ್ರಹವಸ್ತುಗಳನ್ನು ನೋಡಿ ಪರಿಹಾಸ್ಯ ಮಾಡುತ್ತಿದ್ದರು. ಇಷ್ಟಾದರೂ ಡಾರ್ವಿನ್ ಎಂದೂ ಇವುಗಳಿಗೆ ಕಿವಿ ಗೊಟ್ಟವನಲ್ಲ. ಪೂರ್ಣ ಸ್ವಾಭಿಮಾನಿ, ತನ್ನಲ್ಲಿಯೇ ತನಗೆ ಮೆಚ್ಚಿಗೆ. ಸಸ್ಯಶಾಸ್ತ್ರ ಮತ್ತು ಪ್ರಾಣಿಶಾಸ್ತ್ರಗಳ ಪುಸ್ತಕಗಳನ್ನು ಓದಿ ತನ್ನ ಅಭಿರುಚಿ ಯನ್ನು ವೃದ್ಧಿಪಡಿಸಿಕೊಳ್ಳುತ್ತಿದ್ದನು.

ಡಾರ್ವಿನ್ನನು ಎಡಿನ್ಬರೋಗೆ ಮುಂದಿನ ವ್ಯಾಸಂಗಕ್ಕಾಗಿ ಹೊರಟನು. ಅವರ ತಂದೆಯ ಇಚ್ಛೆಯಂತೆ ವೈದ್ಯನಾಗಲು ಆತನಿಗೆ ಕೊಂಚವೂ ಇಷ್ಟ ವಿರಲಿಲ್ಲ. ಮನುಷ್ಯನನ್ನು ಶಸ್ತ್ರಗಳಿಂದ ಕತ್ತರಿಸಿ ಅಭ್ಯಾಸಿಸುವುದು ಅವನಿಗೆ ಸಹಿಸಲಾಗಲಿಲ್ಲ. ಪ್ರಯೋಗಶಾಲೆಗಳು ಆತನ ದೃಷ್ಟಿಗೆ ಕಷ್ಟಕರವಾದಂತೆ ಭಾಸವಾಗುತ್ತಿದ್ದುವು. ಈ ಕಾರಣ ಡಾರ್ವಿನ್ನನು ವೈದ್ಯಶಾಸ್ತ್ರದ ಗೋಜಿಗೆ ಹೋಗದೆ ಜೀವವಿಜ್ಞಾನದ ವಿಭಾಗದಲ್ಲಿ ವಿದ್ಯಾರ್ಥಿಯಾಗಿ ಸೇರಿದನು. ಎಡಿನ್ಬರೋ ವಿಶ್ವವಿದ್ಯಾನಿಲಯದಲ್ಲಿ ಜೀವವಿಜ್ಞಾನ ಶಾಖೆಯ ಅಧ್ಯಾಪಕ ಗ್ರ್ಯಾಂಟ್ ಮತ್ತು ಜೇಮ್ಸನ್ ಅವರುಗಳು ಡಾರ್ವಿನ್ನನ ವ್ಯಕ್ತಿತ್ವದ ಮೇಲೆ ತುಂಬ ಪ್ರಭಾವವನ್ನು ಬೀರಿದ್ದಾರೆ.

ವೈದ್ಯಶಾಸ್ತ್ರವನ್ನು ಬಿಟ್ಟು ಜೀವವಿಜ್ಞಾನ ವಿಭಾಗವನ್ನು ಅಧ್ಯಯನ ಮಾಡುತ್ತಿರುವುದನ್ನು ತಿಳಿದ ಡಾರ್ವಿನ್ನನ ತಂದೆಯು ಕೋಪಗೊಂಡು, ಕೇಂಬ್ರಿಡ್ಜಿಗೆ ಮತಧರ್ಮವನ್ನು ಅಭ್ಯಾಸಿಸಲು ಕಳುಹಿಸಿಕೊಟ್ಟನು. ಅಲ್ಲಿಯೂ ಕೂಡ ಮತಧರ್ಮದಲ್ಲಿ ಆಸಕ್ತಿಯಿಲ್ಲದೆ ಮತ್ತೆ ಜೀವವಿಜ್ಞಾನ ಶಾಸ್ತ್ರದಲ್ಲಿ ಪದವೀಧರನಾಗಲು ಬಯಸಿದನು. ಈತ ಹೇಗೆ ಪ್ರಕೃತಿ ಪ್ರೇಮಿಯೋ, ಹಾಗೆಯೇ ಕಲಾಪ್ರೇಮಿಯೂ ಸಹ. ಕೆತ್ತನೆ, ಕಲೆ, ಸಂಗೀತಗಳಲ್ಲಿ ಬಹಳ ಅಭಿರುಚಿ. ಇಷ್ಟಾದರೂ ಚಿಟ್ಟೆಗಳನ್ನು ಹಿಡಿದು ಸಂಗ್ರಹಿಸುವ ಕಾರ್ಯ ಮಾತ್ರ ನಿಂತಿರಲಿಲ್ಲ. ಅವುಗಳ ಪರಿಶೀಲನಾ ಕಾರ್ಯದಲ್ಲಿ ವಿಶೇಷ ಆಸಕ್ತಿ ವಹಿಸಿದ್ದನು. ಒಮ್ಮೆ ಎರಡು ಸಗಣಿ ಚಿಟ್ಟೆಗಳನ್ನು ಎರಡು ಕೈಗಳಲ್ಲೂ ಹಿಡಿದುಕೊಂಡಿರಲು, ಆ ವೇಳೆಗೆ ಮತ್ತೊಂದು ಬಣ್ಣದ ಚಿಟ್ಟೆಯು ಕಾಣಿಸಿ ಕೊಳ್ಳಲು, ಬಲಗೈಯಲ್ಲಿನ ಚಿಟ್ಟೆಯನ್ನು ಬಾಯಿಗೆ ಹಾಕಿಕೊಂಡು ಮೂರನೆ

ಯದನ್ನು ಹಿಡಿಯಲು ಪ್ರಯತ್ನಿಸಿದನಂತೆ. ಬಾಯಿಗೆ ಹಾಕಿಕೊಂಡ ಚಿಟ್ಟೆಯು ನಂಜನ್ನು ಸುರಿಸಿ ಅವಾಂತರಕ್ಕೆ ಈಡುಮಾಡಿತಂತೆ. ಹೀಗೆ ತೊಂದರೆಗೆ ಒಳಗಾದರೂ ಚಿಟ್ಟೆಗಳನ್ನು ಹಿಂಸಿಸುತ್ತಿರಲಿಲ್ಲ. ಸಸ್ಯಶಾಸ್ತ್ರ ಮತ್ತು ಪ್ರಾಣಿಶಾಸ್ತ್ರದಲ್ಲಿ ಹೆಚ್ಚಾದ ಪರಿಶ್ರಮ ಪಡೆಯುತ್ತಿದ್ದರೂ ಭೂಶಾಸ್ತ್ರದಲ್ಲೂ ಸಾಕಷ್ಟು ಜ್ಞಾನಾರ್ಜನೆಯನ್ನು ಮಾಡಿ, ತನ್ನ ಊರಾದ ಷ್ರೂಸ್‌ಬರಿಯ ಸುತ್ತಮುತ್ತಲಿನ ಭೂ ಲಕ್ಷಣವನ್ನೂ ಸ್ಕಾಟ್ಲೆಂಡ್ ದೇಶದ ಭೂ ವಿನ್ಯಾಸ ಮತ್ತು ಶಿಲೆಗಳನ್ನೂ ಅಧ್ಯಯನ ಮಾಡಿದ್ದನು.

ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದಲ್ಲಿರುವಾಗ ಡಾರ್ವಿನ್ನನ ಪ್ರತಿಭೆಯನ್ನು, ಬುದ್ಧಿಶಕ್ತಿಯನ್ನು ಕಂಡು ಮನ್ನಣೆ ಕೊಟ್ಟವರು ಹೆನ್ಸ್ಲೋ ಅವರು. ವಿದ್ಯಾರ್ಥಿಗಳಲ್ಲಿ ಅವರಿಗೆ ತುಂಬ ಮಮತೆ. ಆದರಲ್ಲೂ ಈ ಪ್ರತಿಭಾವಂತ ಶಿಷ್ಯನಲ್ಲಿರುವ ವಿಶೇಷ ಗುಣಗಳಿಗೆ ಮಾರುಹೋಗಿದ್ದರು. ಆತನ ಪುರೋಭಿವೃದ್ಧಿಗಾಗಿ ಸಕಲ ಸಹಾಯಗಳನ್ನೂ ನೀಡಿದರು. ತಮ್ಮ ಜ್ಞಾನಭಂಡಾರವನ್ನು ಪ್ರಿಯ ಶಿಷ್ಯನಿಗೆ ಧಾರೆಯೆರೆದರು. ಡಾರ್ವಿನ್ನನು ತನ್ನಲ್ಲಿದ್ದ ಸಂಗ್ರಹ ವಸ್ತುಗಳ ಮೇಲೆ ಭಾಷಣ ಮಾಡಿ ಮೆಚ್ಚುಗೆ ಪಡೆಯುತ್ತಿದ್ದನು. ಜೊತೆಗೆ ಆತನ ಸಂಶೋಧನಾಕಾರ್ಯಗಳೆಲ್ಲದರಲ್ಲೂ ಹೆನ್ಸ್ಲೋ ಅವರು ನೇರವಾಗಿ ಪ್ರೋತ್ಸಾಹಿಸುತ್ತಿದ್ದರು. ಡಾರ್ವಿನ್ನನು ೧೮೩೧ ರಲ್ಲಿ ಬಿ.ಎ. ಪದವಿಯನ್ನೂ ನಂತರ ಎಂ. ಎ. ಪದವಿಯನ್ನೂ ಪಡೆದು, ಹಲವಾರು ಸಂಶೋಧನೆಗಳನ್ನು ಮಾಡಿ ಪಂಡಿತನಾದನು. ಈ ತೆರನಾದ ವಿದ್ಯಾಭ್ಯಾಸಕ್ಕೆ ಕಾರಣರಾದ ತಮ್ಮ ಗುರುಗಳನ್ನು ಡಾರ್ವಿನ್ ತನ್ನ ಆಜೀವಪರ್ಯಂತ ಸ್ಮರಿಸಿಕೊಳ್ಳುತ್ತಿದ್ದನು.

ದೇಶಾಟನೆಯಲ್ಲಿ ಡಾರ್ವಿನ್ನನಿಗೆ ಮೊದಲಿನಿಂದಲೂ ಪ್ರೇಮ. ಪ್ರಕೃತಿ ಆರಾಧಕನಾದ ಆತನಿಗೆ ಅದೊಂದು ಭವ್ಯ ಅನುಭವವಾಗಿ ಕಾಣುವುದರಲ್ಲಿ ಸಂದೇಹವೇನಿರಲಿಲ್ಲ. ಬ್ರಿಟಿಷ್ ಸರ್ಕಾರದವರು "ಬೀಗಲ್" ಎಂಬ ಹಡಗೊಂದನ್ನು ಸಿದ್ಧಪಡಿಸಿ, ವಿಜ್ಞಾನಿಗಳ ತಂಡದೊಡನೆ ದಕ್ಷಿಣ ಅಮೆರಿಕಾಕ್ಕೆ ಪ್ರಕೃತಿಶಾಸ್ತ್ರವನ್ನು ಅಧ್ಯಯನಮಾಡಿಕೊಂಡು ಬರಲು, ಫಿಟ್ಸ್‌ರಾಯ್ ಎಂಬುವನನ್ನು ಮುಖಂಡನಾಗಿ ನೇಮಕಮಾಡಿದರು. ಇಂತಹ ವಿಜ್ಞಾನ ಯಾತ್ರೆಗೆ ಪ್ರತಿಭಾಶಾಲಿಯಾದ ನಿಸರ್ಗವಿಜ್ಞಾನಿಗಳೊಬ್ಬರು ಬೇಕಾಗಿತ್ತು.

ಇದಕ್ಕಾಗಿ ಹೆನ್ಸ್ಲೋ ಅವರ ಅಭಿಪ್ರಾಯದ ಮೇಲೆ ಡಾರ್ವಿನ್‌ನನ್ನು ಸೂಚಿಸಲಾಯಿತು. ಡಾರ್ವಿನ್ನನನ್ನು ದಕ್ಷಿಣ ಅಮೇರಿಕಾಕ್ಕೆ ಕಳುಹಿಸಿ ಕೊಡಲು ತಂದೆ ರಾಬರ್ಟ್‌ನಿಗೆ ಕೊಂಚವೂ ಸಮಾಧಾನವಿರಲಿಲ್ಲ. ಆದರೆ ದೇಶಾಟನೆಯಿಂದ ಮಗನು ಗಳಿಸುವ ಅನುಭವ, ಪಾಂಡಿತ್ಯ, ಕೀರ್ತಿ ಇವು ಗಳಿಗೆ ಮನ್ನಣೆಕೊಟ್ಟ ಡಾರ್ವಿನ್ನನ ಸೋದರಮಾವ ವೆಡ್ಜ್‌ವುಡ್ಡ್‌ನ ಮಾತಿನ ಮೇಲೆ ರಾಬರ್ಟನು ಸಮ್ಮತಿಕೊಟ್ಟನು. ಇದನ್ನು ತನ್ನ ಪಾಂಡಿತ್ಯಕ್ಕೆ ಸಂದ ಮಹಾ ಗೌರವವೆಂದು ಪರಿಗಣಿಸದೆ, ತನ್ನ ಗುರುಗಳ ಅಸಾಧರಣ ಪ್ರೇಮದಿಂದ ದೊರೆತ ಅವಕಾಶವೆಂದು ಹಿಗ್ಗಿಹೋದನು.

ಡಾರ್ವಿನ್ನನು ತನ್ನ ತಂದೆಯ ಒಪ್ಪಿಗೆ ಮೇರೆ ಹೊರಟು ಯಾತ್ರೆಯ ನಾಯಕ ರಾಯ್‌ನನ್ನು ಹೋಗಿ ಕಂಡಾಗ, ರಾಯ್‌ನು ಚಕಿತನಾದನಂತೆ. ಬಾಹ್ಯರೂಪ ಮನುಷ್ಯನ ಸಾಮರ್ಥ್ಯವನ್ನು ಪ್ರತಿಬಿಂಬಿಸುವುದಿಲ್ಲ. ಅಂತೆಯೇ ದಪ್ಪಮೂಗಿನ ಡಾರ್ವಿನ್ನನು ರಾಯ್‌ನನ್ನು ನೋಡಿದಾಗ, ಅವನು ಈತನ ಸಹನೆ, ಸಾಹಸಗಳಲ್ಲಿ ಸಂದೇಹಪಟ್ಟು ಇವನೆಂತಹ ವಿಜ್ಞಾನಿ ಎಂದನಂತೆ. ಆದರೂ ಹೆನ್ಸ್ಲೋರವರು ಮತ್ತೆ ಹೇಳಿದ್ದರಿಂದ ಡಾರ್ವಿನ್ನನೂ ಪ್ರವಾಸಿಗರ ಜೊತೆಯಲ್ಲಿ ಸೇರಿಕೊಂಡನು. ಮುಂದೆ ರಾಯ್‌ನು ಪ್ರವಾಸಕಾಲದಲ್ಲಿ ಡಾರ್ವಿನ್ನನಲ್ಲಿ ಕಂಡು ಬಂದ ಚಾತುರ್ಯ, ಪಾಂಡಿತ್ಯವನ್ನು ನೋಡಿ ಬೆಕ್ಕಸ ಬೆರಗಾಗಿ ತನ್ನ ಮೂಗಿನ ಮೇಲೆಯೇ ಬೆರಳಿಟ್ಟುಕೊಂಡನಂತೆ.

ಅಮೇರಿಕ ಮತ್ತು ಪ್ರಪಂಚದ ಎಲ್ಲಾ ಭಾಗಗಳಿಗೂ ಹೋಗಿ ಬರಬೇಕೆಂದು ತೀರ್ಮಾನವಾಗಿ, ೧೮೩೧ ರ ಡಿಸೆಂಬರ್ ೨೭ ರಲ್ಲಿ ಹಡಗು ಸಿದ್ಧವಾಗಿ ಹೊರಟಿತು. ಪ್ರವಾಸಕ್ಕೆ ಹೊರಡುವಾಗ ಡಾರ್ವಿನ್ನನಿಗೆ ಸುಮಾರು ೨೩ ವರ್ಷ. ಇಂತಹ ಚಿಕ್ಕ ಮೂರ್ತಿಯಲ್ಲಿ ಹುದುಗಿದ್ದ ಪಾಂಡಿತ್ಯ ಅತಿಶಯವಾದದ್ದು. ಹೀಗೆ ಹೊರಟ ಯಾನ ಕೇವಲ ಒಂದು ವರ್ಷವಲ್ಲ. ಐದು ವರ್ಷಗಳ ಕಾಲ ವಿಶ್ವಪರ್ಯಟನೆಯನ್ನು ಮುಗಿಸಿಕೊಂಡು ಹಿಂತಿರುಗಿತು. ಮಾರ್ಗದಲ್ಲಿ ಡಾರ್ವಿನ್ನನಿಗೆ ಅನೇಕ ಬೇನೆಗಳು ಉಂಟಾಗಿ ಊಟವಸತಿಗಳಿಗೆ ತೊಂದರೆಯಾದರೂ, ಲೆಕ್ಕಿಸದೆ ಸದಾ ಹರ್ಷ ಚಿತ್ತದಿಂದಿರುತ್ತಿದ್ದನು.

ಪ್ರವಾಸ ಕಾಲದಲ್ಲಿ ನೋಡಿದ, ಅನುಭವಿಸಿದ ಎಲ್ಲಾ ಅಂಶಗಳನ್ನೂ

ಬರೆದಿಟ್ಟನು. ಅಗ್ನಿಪರ್ವತಗಳ ವಿನ್ಯಾಸ, ತೀರಪ್ರದೇಶದ ಭೂಲಕ್ಷಣ, ಹಕ್ಕಿಗಳ, ಹುಳುಗಳ, ಚಿತ್ರವಿಚಿತ್ರವಾದ ಕೀಟಗಳ ಮತ್ತು ವಿಶೇಷ ರೀತಿಯ ಸಸ್ಯಗಳ ಪರಿಶೀಲನೆ ಮತ್ತು ಸಂಗ್ರಹಣೆ ಮಾಡಿದನು. ಅಲ್ಲದೆ ಬ್ರೆಸಿಲ್ ತೀರಪ್ರದೇಶದ ಅರಣ್ಯ ಸಂಪತ್ತು ಮತ್ತು ಪ್ರಕೃತಿ ಸೌಂದರ್ಯ, ರಯೋಡಿಜನಿರೊವಿನ ಒಳನಾಡಿನ ಸಂಶೋಧನೆ, ಅಲ್ಲಿಯ ನೀಗ್ರೋ ಜನರ ದಾಸ್ಯ, ಮಾಂಟವಿಡಿಯೋನಲ್ಲಿ ಭೂಪರಿಶೀಲನೆ, ವಿವಿಧ ಪಕ್ಷಿಗಳ ಸಹ ಜೀವನ, ಹೋರಾಟ ಇವೆಲ್ಲವೂ ಒಂದುಕ್ಕೊಂದು ಆಶ್ಚರ್ಯ ವಾಗಿ ಕಾಣುತ್ತಿತ್ತು. ಪ್ರಾಣಿಗಳ ವಿವಿಧ ಕಾರ್ಯಗಳನ್ನು ನೋಡಿದ ಮೇಲೆ ಪ್ರಾಣಿ ಶಾಸ್ತ್ರವನ್ನು ಹೆಚ್ಚಾಗಿ ಅಧ್ಯಯನ ಮಾಡಬೇಕೆಂಬ ಬಯಕೆ ಹೆಚ್ಚಾಯಿತು. ಭೂವಿನ್ಯಾಸದ ಪರಿಶೀಲನೆಯಲ್ಲಿ ಸಹಸ್ರಾರು ವರ್ಷಗಳ ಹಿಂದೆ ಬದುಕಿದ್ದ ಪ್ರಾಣಿಗಳ ಜೀವಾವಶೇಷಗಳನ್ನು ನೋಡಿ ಅಚ್ಚರಿಗೊಂಡನು. ದಕ್ಷಿಣ ಅಮೇರಿಕಾದ ಬೇಹಿಯಬ್ಲಾಂಕ ಮತ್ತು ಬಿಯೊನಾಸ್ ನಗರಗಳಿಗೆ ಹೋಗಿ, ಅವುಗಳ ಸುತ್ತಮುತ್ತಲ ಪ್ರದೇಶಗಳಲ್ಲಿ ಹಿಂದಿನಕಾಲದ ವಿವಿಧ ಜಾತಿಯ ಚತುಷ್ಪಾದಿಗಳ ಮೂಳೆಗಳನ್ನು ಶಿಲೆಗಳಲ್ಲಿ ಕಂಡು ಸಂತಸಗೊಂಡು, ಮುಂದೆ ಹಾಗೆಯೇ ಹೋಗುವಲ್ಲಿ ಸೌಂಟಾಫಿಯ ಎನ್ನುವ ಕಡೆ ಪ್ರಾಚೀನ ಕಾಲದ ಕುದುರೆಯ ಜೀವಾವಶೇಷಗಳು ದೊರೆತವು. ಪ್ರವಾಸವು ಹೀಗೆ ಮುಂದುವರಿದಂತೆಲ್ಲಾ ಡಾರ್ವಿನ್ನನ ವಿಜ್ಞಾನದೃಷ್ಟಿಯು ವಿಕಾಸಹೊಂದುತ್ತಾ ಇತ್ತು. ಪ್ರತಿಯೊಂದು ಕಡೆಯೂ ಹೊಸಹೊಸ ವಸ್ತುಗಳು ಎದ್ದು ಕಾಣು ತ್ತಿದ್ದವು. ಮುಂದೆ ಪಟಗೋನಿಯದ ಮತ್ತು ಚಿಲಿ ಭೂಲಕ್ಷಣವನ್ನೂ ವೀಕ್ಷಿಸಿದನು. ವಾಲ್ಡೀವಿಯಕ್ಕೆ ಪ್ರವಾಸಿಗರು ಬಂದಾಗ ಎಂದೂ ಅನು ಭವಿಸದ ಭೂಕಂಪನದ ಅನುಭವವಾಯಿತು. ಆದರೆ ಯಾವ ತೊಂದರೆಯೂ ಆಗಲಿಲ್ಲ. ದಕ್ಷಿಣ ಅಮೇರಿಕಾದ ಒಳನಾಡಿನ ಸಂಶೋಧನೆಯನ್ನು ಮುಗಿಸಿ ಕೊಂಡು, ಆಸ್ಟ್ರೇಲಿಯಾವನ್ನು ಮುಟ್ಟಿ, ಅಲ್ಲಿಯ ಭೂ ಪರಿಶೀಲನೆ, ಸಸ್ಯ ಮತ್ತು ಪ್ರಾಣಿಗಳ ಶೇಖರಣೆಯಾದ ಮೇಲೆ ತೌರೂರಿಗೆ ೧೮೩೬ ರ ಅಕ್ಟೋ ಬರಿನಲ್ಲಿ ಹಿಂತಿರುಗಿದರು.

ಈ ಬೀಗಲ್ ವಿಜ್ಞಾನಪ್ರವಾಸದಿಂದ ಡಾರ್ವಿನ್ನನ ಮುಂದಿನ ಜೀವ ನವೇ ಬದಲಾಯಿಸಿತು. ಒಂದು ಹಡಗಿನ ಪ್ರಯಾಣ ಅವನು ಅಜೀವ

ಪರ್ಯಂತ ವಿಜ್ಞಾನಿಯಾಗಿರಲು ಕಾರಣವಾಯಿತು. ಪ್ರವಾಸದ ಪ್ರಾರಂಭದಿಂದ ಅಂತ್ಯದವರೆಗೂ ಸಂಗ್ರಹಿಸಿದ ವಸ್ತುಗಳು, ವಿಚಾರಪೂರಿತವಾದ ದೃಶ್ಯಗಳೂ ಆತನ ಬುದ್ಧಿಶಕ್ತಿಯನ್ನೇ ವಿಕಾಸಗೊಳಿಸಿದುವು. ಕಾಡು ಮಾನವನ ದರ್ಶನದಿಂದ ಮಾನವಜನಾಂಗ ಮಂಗನಿಂದ ಪ್ರಾರಂಭವಾಯಿತು ಎಂಬ ಅರಿವು ಬಂದಿತು. ಹತ್ತಾರು ವರ್ಷ ಅಧ್ಯಯನ ಮಾಡಿದರೂ ದುಸ್ಸಾಧ್ಯವಾದ ಸತ್ಯಾಂಶವನ್ನು ಒಂದು ದೇಶಾಟನೆಯಲ್ಲಿ ಅನುಭವಿಸಿದನು. ಈ ದೇಶಾಟನೆಯಿಂದ ಪಡೆದ ಅನುಭವವೆಲ್ಲವೂ ಮುಂದೆ ಆತನ ಪಾಂಡಿತ್ಯ, ಪ್ರತಿಭೆಗಳೆಂಬ ಬೆಳಕಿನಲ್ಲಿ ಹೊಮ್ಮಿ, ಅರಳಿ, ವಿಕಾಸಗೊಂಡು ಅನೇಕ ತತ್ತ್ವ ನಿರೂಪಣೆಗಳಿಗೆ ಪೂರಕವಾಗಿವೆ. ಕೊಲಂಬಸ್ಸನು ಮಾನವನಿಗೆ ಅಮೇರಿಕಾ ಖಂಡಗಳನ್ನು ತೋರಿಸಿಕೊಟ್ಟಂತೆ ಡಾರ್ವಿನ್ನನು ವಿಕಾಸತತ್ತ್ವದ ಜ್ಞಾನ ಪ್ರಪಂಚವನ್ನು ತೋರಿಸಿ ಕೊಟ್ಟಿದ್ದಾನೆ.

ಪ್ರವಾಸಕಾಲದಲ್ಲಿ ತಂದ ವಿವಿಧ ಸಸ್ಯಗಳ, ಪ್ರಾಣಿಗಳ ಮತ್ತ ಇತರ ವಸ್ತುಗಳನ್ನು ಕ್ರಮವಾಗಿ ವಿಂಗಡಿಸಿ, ಒಂದು ಪ್ರದರ್ಶನಾಲಯವನ್ನೇ ಮಾಡಿಕೊಂಡನು. ಪೂರ್ಣ ಪರಿಶೀಲನೆಗಾಗಿ ಇವುಗಳನ್ನು ಬೇರೆ ಬೇರೆ ವರ್ಗಗಳಾಗಿ ಬೇರ್ಪಡಿಸಿಕೊಂಡನು. ಇದರಿಂದ ವಿಜ್ಞಾನಿಗಳಿಂದ ಮೆಚ್ಚಿಗೆ ದೊರೆತು ಲಂಡನ್ನಿನ ಭೂ ಶಾಸ್ತ್ರ ಸಂಘದವರು ಇವನನ್ನು ಆ ಸಂಸ್ಥೆಯ ಕಾರ್ಯದರ್ಶಿಯಾಗಿ ನೇಮಿಸಿದರು. ಮೂರು ವರ್ಷಗಳ ಕಾಲಾವಧಿಯಲ್ಲಿ ಸಂಸ್ಥೆಯ ಕಾರ್ಯಗಳನ್ನು ಯಶಸ್ವಿಯಾಗಿ ನಡೆಸಿ, ಪ್ರವಾಸಕಾಲದಲ್ಲಿ ತಾನು ನೋಡಿದ ಅಗ್ನಿಪರ್ವತಗಳ ಸ್ವಭಾವ ಮತ್ತು ದಕ್ಷಿಣ ಅಮೇರಿಕಾದ ಭೂ ವಿನ್ಯಾಸ ಇವುಗಳ ಮೇಲೆ ಲೇಖನಗಳನ್ನು ಬರೆದು ಪ್ರಕಟಿಸಿದನು.

೧೮೩೯ರಲ್ಲಿ ಡಾರ್ವಿನ್ನನು ಸೋದರಮಾವನ ಮಗಳಾದ ಎಮ್ಮಾ ವೆಡ್ಜ್‌ವುಡ್ಡಳನ್ನು ವಿವಾಹವಾದನು. ಆಕೆ ಈತನಿಗೆ ವಿಜ್ಞಾನ ಪಾಂಡಿತ್ಯದಲ್ಲಿ ಅನುರೂಪಳಲ್ಲದಿದ್ದರೂ, ಉತ್ತಮ ಗೃಹಿಣಿಯಾಗಿ ಆತನ ದಾಂಪತ್ಯಜೀವನದಲ್ಲಿ ಸುಖ ಸಂತೋಷಗಳಿಗೆ ಭಾಗಿಯಾದಳು. ಇದಾದ ತರುವಾಯ ಡಾರ್ವಿನ್ನನು ಸಂಗ್ರಹದ ಪೂರ್ಣಸಂಶೋಧನೆಯನ್ನು ನಡೆಯಿಸಿ, ೧೮೪೫ರಲ್ಲಿ 'ನಿಸರ್ಗ ವಿಜ್ಞಾನಿಯ ಪ್ರಪಂಚಯಾತ್ರೆ' ಎಂಬ ಸಂಗ್ರಹವನ್ನು ಪ್ರಕಟಿಸಿದನು. ಇದರಿಂದ ಆತನ ಪಾಂಡಿತ್ಯದ ಆಳ ಎಲ್ಲರಿಗೂ ಗೋಚರವಾಯಿತು.

ಇದಾದ ಮೇಲೆ ಅಲ್ಲಿಯ ಪ್ರಾಣಿಗಳು, ಸಸ್ಯಗಳು, ಭೂ ಲಕ್ಷಣ, ಹವಳ ದ್ವೀಪಗಳು ಇವುಗಳ ಮೇಲೆ ವಿಶೇಷ ಪ್ರಕಟನೆಗಳು ಹೊರಬಿದ್ದುವು. ಈ ರೀತಿಯಾದ ದುಡಿತದಿಂದ ಡಾರ್ವಿನ್ನನ ಆರೋಗ್ಯ ಕೆಡುತ್ತಾ ಬಂದು, ೧೮೪೨ರಲ್ಲಿ ನಗರದಿಂದ ಕೊಂಚ ದೂರವಾಗಿರಲು ಕೆಂಟ್‌ಪ್ರದೇಶದ ಡಾನ್ ಎಂಬ ಹಳ್ಳಿಗೆ ಶಾಂತ ವಾತಾವರಣವನ್ನು ಅನುಭವಿಸಲು ತೆರಳಿದನು.

ಡಾನ್ ಗ್ರಾಮ ಸಮುದ್ರಮಟ್ಟಕ್ಕೆ ನಾನೂರಡಿ ಎತ್ತರದಲ್ಲಿದ್ದು ಪ್ರಕೃತಿ ಸೌಂದರ್ಯದಿಂದ ಕೂಡಿತ್ತು. ಇಂತಹ ಮನೋಹರವಾದ ಪ್ರದೇಶದಲ್ಲಿ ತನ್ನ ಮನೆಯಲ್ಲಿಯೇ ಒಂದು ಸಂಶೋಧನಾಲಯವನ್ನು ಪ್ರಾರಂಭಿಸಿದನು. ಮುಂದೆ ಆತನ ಆರೋಗ್ಯ ನೆಟ್ಟಗಿಲ್ಲದೆ ನರಳುತ್ತಿದ್ದರೂ, ಸಂಶೋಧನಾ ಕಾರ್ಯದಲ್ಲಿ ನಿರತನಾಗಿ, ವಿರಾಮವಿಲ್ಲದೆ ದುಡಿದು ಅನೇಕ ಪ್ರಕಟನೆಗಳನ್ನು ವಿಜ್ಞಾನ ಪ್ರಪಂಚಕ್ಕೆ ಕೊಟ್ಟಿದ್ದಾನೆ. ಎಂಟು ವರ್ಷಗಳ ದೀರ್ಘವಾದ ಸಂಶೋಧನೆಯ ಪರಿಣಾಮವಾಗಿ ಪ್ರಕಟಿಸಿದ " ಬ್ರಿಟನ್ನಿನ ಪ್ರಾಚೀನ ಸಿರಿಪಿಡಿಯಾ" ಎಂಬ ಗ್ರಂಥಕ್ಕೆ ವೊಲಾಸ್ಟನ್ ಚಿನ್ನದ ಪದಕವೂ ದೊರೆಯಿತು. ಹವಳದ ದ್ವೀಪಗಳು ಮತ್ತು ಬಾರ್ನಕಲ್ ಪ್ರಾಣಿಗಳ ಮೇಲೆ ಹೊರಬಿದ್ದ ಸಂಶೋಧನಾಗ್ರಂಥಕ್ಕೆ ರಾಯಲ್ ಸೊಸೈಟಿಯವರು ಚಿನ್ನದ ಪದಕವನ್ನು ಕೊಟ್ಟು ಗೌರವಿಸಿದರು. ಹೀಗೆ ಡಾರ್ವಿನ್ನನ ವಿಜ್ಞಾನ ಪ್ರತಿಭೆ ನಾನಾ ಮುಖವಾಗಿ ಹರಿದು, ಸರ್ವಸಂಸ್ಥೆಗಳ, ಅನೇಕ ವಿಜ್ಞಾನಿಗಳ ಮೆಚ್ಚಿಗೆ, ಗೌರವ ಪ್ರಶಸ್ತಿಗಳೂ ದೊರೆತವು.

ಇಷ್ಟಾದರೂ ಡಾರ್ವಿನ್ನನು ಸುಮ್ಮನೆ ಕುಳಿತಿರಲಿಲ್ಲ. ವಿಕಾಸ ತತ್ವನಿರೂಪಣೆಯಲ್ಲಿ ಹಗಲಿರುಳೂ ಶ್ರಮಿಸುತ್ತಿದ್ದನು. ಪ್ರವಾಸ ಕಾಲದಲ್ಲಿ ತಂದಿದ್ದ ಜೀವಾವಶೇಷಗಳಿಂದ ಅನೇಕ ಸಮಸ್ಯೆಗಳು ಗೋಚರವಾದುವು. ಈ ಸಮಸ್ಯೆಗಳ ಪೂರ್ಣನಿರೂಪಣೆಗಾಗಿ ತನ್ನ ಆಯುಷ್ಯವನ್ನೆಲ್ಲಾ ಮುಡುಪು ಮಾಡಿದನು. ತನ್ನ ೨೨ವರ್ಷಗಳ ಅವಿಶ್ರಾಂತ ದುಡಿತದಿಂದ ಜೀವ ಜಂತುಗಳಿಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ಪ್ರತಿಪಾದಿಸಿದನು.

ಪ್ರಪಂಚದ ಜೀವರಾಶಿಗಳೆಲ್ಲವೂ,ಒಂದು ಜಂತುವಿನಿಂದ ಮತ್ತೊಂದು ಜಂತುವು ಹುಟ್ಟಿರುವಂತೆಯೆ, ಒಂದು ಜಾತಿ ಮತ್ತೊಂದು ಕೆಳಜಾತಿ

ಯಿಂದಲೇ ಹುಟ್ಟಿರಬೇಕು. ಜೀವಕೋಟಿಗಳಲ್ಲಿ ಸಂತಾನವೃದ್ಧಿಯಿಂದ ಆಹಾರಾದಿಗಳಿಗೆ ಅಭಾವವಾಗಿ ಅವುಗಳಲ್ಲಿ ನಾನಿರಬೇಕು, ತಾನಿರಬೇಕು ಎಂಬ ಹೋರಾಟವಾಗುವುದು. ದಿನಚರಿಯಲ್ಲಿ ಇಂತಹ ಹೋರಾಟದ ದೃಶ್ಯಗಳನ್ನು ಎಷ್ಟೋ ಕಾಣುತ್ತಿರಬಹುದು. ನವಿಲು, ಗಿಳಿ, ಕೋಗಿಲೆ ಮುಂತಾದ ಪಕ್ಷಿಗಳಲ್ಲಿ ಇದು ಸ್ವಾಭಾವಿಕ. ಈ ಹೋರಾಟ ಸ್ವಜಾತಿಗಳಲ್ಲಿ ಕಂಡುಬರುವಂತೆ ವಿಜಾತಿಗಳಲ್ಲಿ ಕಂಡುಬರುವುದಿಲ್ಲ. ಪ್ರಾಣಿಗಳಲ್ಲಿರುವ ಹೋರಾಟದಂತೆಯೇ ಸಸ್ಯವರ್ಗದಲ್ಲಿಯೂ ಕೂಡ ಗೋಚರವಾಗುತ್ತದೆ. ಈ ರೀತಿಯಾದ ಪರಸ್ಪರ ಸಂಗ್ರಾಮವು ನಿರಂತರವೂ ಜರುಗುತ್ತಿರುತ್ತದೆ. ಹೋರಾಟವನ್ನು ತಡೆಯಲಾರದ ಎಷ್ಟೋ ವರ್ಗದ ಪ್ರಾಣಿಗಳು ಮತ್ತು ಸಸ್ಯಗಳು ನಿರ್ಮೂಲವಾಗಿರಬೇಕು. ಇವೆಲ್ಲವನ್ನೂ ಡಾರ್ವಿನ್ನನು ನಿದರ್ಶನ ಪೂರ್ವಕವಾಗಿ ಉಲ್ಲೇಖಿಸಿದ್ದಾನೆ.

ಜೀವರಾಶಿಗಳಲ್ಲಿ ಸ್ವಜಾತಿಯಲ್ಲಿಯೇ ಒಂದಕ್ಕೊಂದು ಪರಸ್ಪರ ವ್ಯತ್ಯಾಸವನ್ನು ತೋರಿಸುತ್ತವೆ. ಮಾನವರ್ಗದಲ್ಲಿ ಕಂಡುಬರುವಂತೆಯೇ ಸಸ್ಯ ಪ್ರಾಣಿಗಳ ವರ್ಗಗಳಲ್ಲಿಯೂ ಒಂದಕ್ಕೊಂದಕ್ಕೆ ಯಾವ ರೀತಿಯಲ್ಲಿ ಯಾದರೂ ವ್ಯತ್ಯಾಸವಿದ್ದೇ ಇರುತ್ತದೆ. ಈ ವ್ಯತ್ಯಾಸಕ್ಕೆ ಸಂತತಿಯೊಂದೇ ಅಲ್ಲದೆ ಸನ್ನಿವೇಶಗಳೂ ಕಾರಣವಾಗಿರುತ್ತವೆ. ಹೀಗೆಯೇ ಸನ್ನಿವೇಶಕ್ಕೆ ಹೊಂದಿಕೊಂಡು ಕೆಲವು ಉಳಿಯಬಹುದು ಮತ್ತೆ ಕೆಲವು ಅಳಿಯಬಹುದು. ಇದನ್ನೇ 'ನೈಸರ್ಗಿಕ ಚುನಾವಣೆ'ಯೆಂದು ಡಾರ್ವಿನ್ನನು ತನ್ನ ಸಂಶೋಧನೆ ಗಳಲ್ಲೆಲ್ಲಾ ಇದೇ ಮುಖ್ಯವಾದದ್ದು ಎಂದಿದ್ದಾನೆ. ಇದಲ್ಲದೆ ಕೊನೆಯದಾಗಿ ಇಂದಿನ ಜೀವಿಗಳೆಲ್ಲಾ ಹಿಂದಿದ್ದ ಜೀವಿಗಳಿಂದ ಒಂದು ರೀತಿಯಲ್ಲಿ ವ್ಯತ್ಯಾಸ ವಾಗಿ ವಿಕಾಸ ಹೊಂದುತ್ತವೆ ಎಂದು ಸಾರಿದನು.

ಡಾರ್ವಿನ್ನನು ತನ್ನ ಬೀಗಲ್ ಯಾತ್ರೆಯ ಅನುಭವದಿಂದಲೂ, ಮತ್ತು ಸಂಗ್ರಹಿಸಿ ತಂದ ವಸ್ತುಗಳ ಸಂಶೋಧನೆಯಿಂದಲೂ ಒಂದು ತತ್ವವನ್ನು ನಿರೂಪಿಸಿದನು. ಇಂತಹ ಆಧಾರದಮೇಲೆ ಲಯಲ್, ಹಕ್ಸ್ಲಿ ಮುಂತಾದ ವಿಜ್ಞಾನಿಗಳಿಂದ ಸಲಹೆ ಪಡೆದು ವಿಕಾಸತತ್ವದ ಮೇಲೆ " ಜೀವರಾಶಿಗಳ ಹುಟ್ಟು" ಎಂಬ ಪುಸ್ತಕವನ್ನು ಬರೆಯಲು ಪ್ರಾರಂಭಿಸಿ, ಮುಗಿಸುವಷ್ಟರಲ್ಲಿ ವ್ಯಾಲೇಸ್ ಎಂಬುವನು ಇದೇ

ತತ್ವವನ್ನು ಅನುಸರಿಸಿ ಲೇಖನವನ್ನು ಬರೆದು ಕಳುಹಿಸಿದನು. ತನ್ನ ತತ್ವಕ್ಕೂ ವ್ಯಾಲೇಸಿನ ತತ್ವಕ್ಕೂ ಇರುವ ಸಾಮ್ಯವನ್ನು ಕಂಡು ಅಚ್ಚರಿಗೊಂಡನು. ತನ್ನ ಜೀವನವನ್ನೆಲ್ಲಾ ಸವೆಯಿಸಿ ಮಾಡಿದ ಒಂದು ನಿರ್ದಿಷ್ಟ ತತ್ವ ಪರಿಪಾಲನೆಗೆ ಬಂದಿದ್ದರೂ, ಅದರಲ್ಲಿ ತನಗಿಂತಲೂ ಕಿರಿಯನಾದ ವ್ಯಾಲೆಸನಿಗೆ ಕೊಡಬೇಕಾದ ಗೌರವಕ್ಕೆ ಕೊಂಚವೂ ಹಿಂಜರಿಯಲಿಲ್ಲ. ಇದು ಡಾರ್ವಿನ್ನನಲ್ಲಿದ್ದ ಉದ್ದಾಮ ಗುಣ. ಆದರೆ ಅದೇ ಉದ್ದಾಮ ಗುಣದ ವಿಜ್ಞಾನಿ ವ್ಯಾಲೇಸನು ಕೂಡ, ವಿಜ್ಞಾನ ರಂಗದಲ್ಲಿ ಬಹು ಕಾಲದಿಂದಲೂ ದುಡಿದಿರುವ ಡಾರ್ವಿನ್ನನಿಗೆ ತತ್ವನಿರೂಪಣೆಯ ಗೌರವವನ್ನು ಬಿಟ್ಟುಕೊಟ್ಟನು. ಇಂತಹ ಔದಾರ್ಯ ವಿಜ್ಞಾನಿಗಳಲ್ಲಿ ಅತಿ ವಿರಳ. ಡಾರ್ವಿನ್ನನ ಗ್ರಂಥವನ್ನು ಪ್ರಕಟಿಸಬೇಕಾದರೆ ಪ್ರಕಟನಾಲಯದವರು ಹಿಂದೂ ಮುಂದೂ ನೋಡುತ್ತಿದ್ದರು. ತತ್ವದಲ್ಲಿ ಅನೇಕ ದೋಷಗಳಿರಬಹುದೆಂದೇ ಅವರ ಸಂಕೋಚ. ಆದರೂ ಪ್ರಕಟವಾದ ಮೇಲೆ ಲಯಲ್, ಹೂಕರ್ ಮತ್ತು ಹಕ್ಸ್ಲಿ ಇವರುಗಳು ಬಾಯಿತುಂಬ ಹೊಗಳಿ ವಿಮರ್ಶಿಸಿದರು. ಗ್ರಂಥ ಪ್ರಕಟವಾದ ದಿವಸವೇ ಸಾವಿರಾರು ಪ್ರತಿಗಳು ಬಿಕರಿಯಾಗಿ ಎರಡು ತಿಂಗಳೊಳಗೆ ಇನ್ನೊಂದು ಸಾರಿ ಮುದ್ರಿಸಲಾಯಿತು. ಡಾರ್ವಿನ್ನನು ಇನ್ನೂ ಜೀವಂತವಾಗಿರುವಾಗಲೇ ಈ ಗ್ರಂಥ ಹಲವಾರು ಸಾರಿ ಮುದ್ರಣವಾಯಿತು. ಇದು ಜೀವರಾಶಿಗಳ ಹುಟ್ಟಿಗೆ ಸಂಬಂಧಪಟ್ಟ ಗ್ರಂಥ. ಪ್ರಪಂಚದ ನಾನಾ ಭಾಷೆಗಳಾದ ಹಿಂದೂಸ್ಥಾನಿ, ರಷ್ಯ, ಜರ್ಮನ್, ಸ್ವೀಡನ್, ಡಚ್, ಫ್ರೆಂಚ್ ಮತ್ತು ಜಪಾನ್ ಇವುಗಳಲ್ಲಿ ಭಾಷಾಂತರಹೊಂದಿ ಇಡೀ ವಿಶ್ವಕ್ಕೇ ಮಾರ್ಗದರ್ಶಕವಾಯಿತು.

ಈ ಗ್ರಂಥದಲ್ಲೆ ಮಾನವನ ವಿಕಾಸದ ವಿಚಾರವಾಗಿ ನಮೂದಿಸಿದ್ದರೂ, ಡಾರ್ವಿನ್ನನು ೧೮೭೧ರಲ್ಲಿ "ಮಾನವನ ಅವತರಣ" ಎಂಬ ಪುಸ್ತಕವನ್ನು ಪ್ರಕಟಿಸಿದನು. ಆತನ ತತ್ವದ ಪ್ರಕಾರ ಮನುಷ್ಯನುಕೂಡ ಕೆಳವರ್ಗದ ಪ್ರಾಣಿಗಳಿಂದ ವಿಕಾಸಹೊಂದಿರುತ್ತಾನೆ. ಪ್ರಾಣಿವರ್ಗದ ವಿಕಾಸವನ್ನು ನಿರೂಪಿಸುತ್ತಾ ಮನುಷ್ಯನು ಮಂಗಗಳಿಂದ ಪರಿವರ್ತನೆ ಹೊಂದಿರುವುದನ್ನು ಸೂಚಿಸಿರುತ್ತಾನೆ. ಆದಿ ಮಾನವನಿಗೂ ಕಪಿಗಳಿಗೂ ಅನೇಕ ಸಾದೃಶಗಳಿವೆ. ಮೆದಳು, ಕೈಬೆರಳು, ಮುಖ ಇವುಗಳೆಲ್ಲದರಲ್ಲೂ ಬಹಳ

ಹೋಲಿಕೆಗಳಿವೆ. ಅದರಲ್ಲೂ ಚಿಂಪಂಜಿ, ಗೋರಿಲ್ಲ, ಕಪಿಗಳು ಮನುಷ್ಯರನ್ನು ಹೆಚ್ಚಾಗಿ ಹೋಲುತ್ತವೆ. ಪ್ರಾಚೀನ ಮಂಗಗಳಿಂದ ಚಿಂಪಂಜಿ, ಗೋರಿಲ್ಲಗಳೂ, ಇವುಗಳಿಂದ ಆದಿ ಮಾನವನೂ, ಆದಿಮಾನವನಿಂದ ನವೀನ ಮಾನವನೂ ಪರಿವರ್ತನೆಯಾಗಿದಾನೆ. ಪರಿವರ್ತನೆ ಹೊಂದುವಾಗ ಸನ್ನಿವೇಶಕ್ಕೆ ಅನುಸಾರವಾಗಿ ಅನೇಕ ಮಾರ್ಪಾಡುಗಳಾಗಿವೆ.

ಡಾರ್ವಿನ್ನನು ಜೀವವಿಕಾಸದ ಮೇಲೆ ಅತ್ಯಮೂಲ್ಯವಾದ ಗ್ರಂಥಗಳನ್ನು ಪ್ರಕಟಿಸಿದ ಮೇಲೆ, ತನ್ನ ಸಂಶೋಧನೆಯನ್ನು ಎಂದೂ ನಿಲ್ಲಿಸಿದವನಲ್ಲ. ರಸ್ತೆಯಲ್ಲಿ ಮೈಲಿಗಲ್ಲುಗಳು ಒಂದಾದ ಮೇಲೊಂದು ಬರುವಂತೆ, ಡಾರ್ವಿನ್ನನ ಸಂಶೋಧನಾಲಯದಿಂದ ಅನೇಕ ಗ್ರಂಥಗಳು ಹೊರಬಂದುವು. ೧೮೭೨ ರಲ್ಲಿ " ಮನುಷ್ಯನ ಮತ್ತು ಪ್ರಾಣಿಗಳ ಭಾವ ಪ್ರದರ್ಶನ ", ೧೮೭೫ ರಲ್ಲಿ " ಕೀಟಾಹಾರಿ ಸಸ್ಯಗಳು", ೧೮೭೬ರಲ್ಲಿ "ಸ್ವರೇಣು ಮತ್ತು ಅನ್ಯರೇಣು ಸ್ಪರ್ಶದಿಂದ ಸಸ್ಯವರ್ಗದಲ್ಲಾಗುವ ಬದಲಾವಣೆಗಳು " ಮತ್ತು ೧೮೭೭ ರಲ್ಲಿ " ಹೂವುಗಳಲ್ಲಿ ಕಾಣಬರುವ ರೂಪ ವೈವಿಧ್ಯ" ಎಂಬ ಗ್ರಂಥಗಳು ಪ್ರಕಟವಾದುವು. ಆತನ ಕೊನೆಯ ಗ್ರಂಥ ೧೮೮೨ ರಲ್ಲಿ ಪ್ರಕಟವಾದ " ಎರೆ ಹುಳುಗಳು ಮಣ್ಣನ್ನು ಸಜ್ಜುಗೊಳಿಸುವ ಕಾರ್ಯ."

ಡಾರ್ವಿನ್ನನ ಗ್ರಂಥ ಹೊರಬಿದ್ದ ಮೇಲೆ ಅವನ ಕೀರ್ತಿ ಅದ್ಭುತವಾಗಿ ಪ್ರಸಾರವಾಯಿತು. ಅನೇಕ ಸಂಸ್ಥೆಗಳೂ, ವಿಶ್ವವಿದ್ಯಾನಿಲಯಗಳೂ ಆತನ ಗೌರವಾರ್ಥವಾಗಿ ವಿಶೇಷ ಪ್ರಶಸ್ತಿಗಳನ್ನು ಕೊಡಲನುವಾದುವು. ೧೮೬೧ರಲ್ಲಿ" ಪ್ರಸ್ಯ್ಸ ಆರ್ಡರ್ ಆಫ್ ನೈಟ್ ಹುಡ್ " ಎಂಬ ಅಂತರ ರಾಷ್ಟ್ರೀಯ ಪ್ರಶಸ್ತಿಯೂ, ೧೮೭೭ರಲ್ಲಿ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದಿಂದ ಎಲ್.ಎಲ್.ಡಿ. ಗೌರವ ಪದವಿಯೂ ದೊರೆತವು. ಫ್ರಾನ್ಸಿನ ವಿಜ್ಞಾನ ಸಂಘದವರು ಪ್ರಾಣಿಶಾಸ್ತ್ರಭಾಗದ ಸದಸ್ಯನಾಗಿಚುನಾಯಿಸಿ, ಪುರಸ್ಕರಿಸಿದರು. ೧೮೭೯ ರಲ್ಲಿ ಲಂಡನ್ನಿನ ಫಿಸಿಷಿಯರ್ಸ ಕಾಲೇಜಿನವರು ಚಿನ್ನದ ಪದಕವನ್ನು ಕೊಟ್ಟು ಮರ್ಯಾದೆ ಮಾಡಿದರು. ಈ ರೀತಿಯಾಗಿ ಡಾರ್ವಿನ್ನನಿಗೆ ಒಂದರ ಮೇಲೊಂದು ಪ್ರಶಸ್ತಿಗಳು ದೊರೆತರೂ ಎಂದೂ ತನ್ನನ್ನು ತಾನೇ ಮರೆತವನಲ್ಲ. " ವಿಜ್ಞಾನಕ್ಕಾಗಿ ಶ್ರಮಿಸುತ್ತಿರುವೆ "ಎಂಬುದೇ ಆತನಿಂದ ಬರುತ್ತಿದ್ದ ನಿಗರ್ವವಾಣಿ.

ಸಂಶೋಧನಾಲಯವನ್ನೂ ಮತ್ತು ಡಾರ್ವಿನ್ನನ್ನು ನೋಡಲು ಅನೇಕರು ಯಾತ್ರಿಕರಂತೆ ಬಂದು ಹೋಗುತ್ತಿದ್ದರು. ಅವರೆಲ್ಲರಲ್ಲೂ ಸರಳವಾಗಿ ವರ್ತಿಸಿ, ತನ್ನ ಗಂಭೀರವಾದ ನುಡಿಗಳಿಂದ ಮುಗ್ಧಗೊಳಿಸುತ್ತಿದ್ದನು. ಈತನ ಸ್ವಭಾವ ಆದರ್ಶವಾದದ್ದು. ಆಶೆ, ಜಂಭಗಳಿಗೆ ಎಡೆಯಿರಲಿಲ್ಲ. ಮುಗುಳು ನಗೆ, ಮಧುರ ಹಾಸ್ಯ, ಮಿತ ನುಡಿ ಇವೇ ಎದ್ದು ಕಾಣುತ್ತಿದ್ದ ಗುಣಗಳು. ಹೊಗಳಿಕೆಗೆ ನಾಚಿಕೆ ಪಡುತ್ತಿದ್ದನು. ಹಾಗೆಯೆ ತಿಳಿಯಾದ ಮನಸ್ಸು. ಆಳುಗಳನ್ನು ಕೂಡ ನೋಯಿಸಿದವನಲ್ಲ. ಪ್ರಾಣಿಗಳಲ್ಲೂ ಅದೇ ದಯಾ ಹೃದಯ. ತನ್ನ ಬಾಲ್ಯದಲ್ಲಿ ಎಸಗುತ್ತಿದ್ದ ಹಕ್ಕಿಗಳ ಬೇಟೆಯನ್ನು ಜ್ಞಾಪಿಸಿಕೊಂಡು ಮರುಗುತ್ತಿದ್ದನಂತೆ. ಕುದುರೆ, ನಾಯಿಗಳಲ್ಲಿ ತುಂಬ ಪ್ರೀತಿ.

ಡಾರ್ವಿನ್ನನು ಉದಾರಿಯೂ ಹೌದು. ಅನೇಕ ಸಂಸ್ಥೆಗಳಿಗೆ ಉದಾರವಾಗಿ ದಾನಮಾಡಿದ್ದಾನೆ. ಬೇರೆ ಭಾಷೆಯ ಗ್ರಂಥಗಳ ಭಾಷಾಂತರಕ್ಕಾಗಿ ಹಣ ಸಹಾಯ ಮಾಡಿದ್ದಾನೆ. ಡಾರ್ವಿನ್ನನು ಡಾನ್ ಹಳ್ಳಿಯಲ್ಲಿ ನೆಲಸಿದ ಮೇಲೆ ಆತನ ಆರೋಗ್ಯ ಎಂದೂ ಉತ್ತಮವಾಗಲಿಲ್ಲ. ಜೀರ್ಣಾಂಗಗಳ ತೊಂದರೆಯಿಂದ ಕಷ್ಟಪಡುತ್ತಲೇ ಇದ್ದನು. ಇಷ್ಟಾದರೂ ಕಾಯಿಲೆ ಹೆಚ್ಚಾದಾಗ ವಿಶ್ರಾಂತಿ ತೆಗೆದುಕೊಂಡು, ಕೊಂಚ ಉತ್ತಮಗೊಂಡಾಗ ತನ್ನ ಕಾರ್ಯದಲ್ಲಿ ನಿರತನಾಗಿರುತ್ತಿದ್ದನು. ಕೊಠಡಿಯಿಂದ ಸಾಮಾನ್ಯವಾಗಿ ಹೊರಗೆ ಬರುತ್ತಲೇ ಇರಲಿಲ್ಲ. ಡಾನ್ ಹಳ್ಳಿಯಲ್ಲಿ ಸುಮಾರು ನಲವತ್ತು ವರ್ಷಗಳನ್ನು ಹೀಗೆಯೇ ಕಳೆದಿದ್ದಾನೆ ಎಂದರೆ ಆಶ್ಚರ್ಯವಾಗುತ್ತದೆ. ಸಾಮಾನ್ಯವಾಗಿ ಆತನಿಗೆ ಸರಿಯಾಗಿ ನಿದ್ದೆಬರುತ್ತಿರಲಿಲ್ಲ. ಆ ವೇಳೆಯಲ್ಲೆಲ್ಲಾ ತಲೆಯಲ್ಲಿ ವಿಜ್ಞಾನ ಸಮಸ್ಯೆಗಳು ತುಂಬಿರುತ್ತಿದ್ದುವು. ಆತನ ದಿನಚರಿಯೆಲ್ಲವೂ ಒಂದು ಕ್ರಮವರಿತ ನಿಯಮಾವಳಿ. ಬೆಳಗಿನ ಜಾವ ಮುಂಚೆಯೇ ಎದ್ದು ಸ್ನಾನಮಾಡಿ, ಆಹಾರ ಮುಗಿಸಿಕೊಂಡು ಬೆಟ್ಟವೊ, ಬಯಲೊ ಆ ಕಡೆ ತಿರುಗಾಡಿಕೊಂಡು ಬರುತ್ತಿದ್ದನು.

ಮೇಲೆ ಸೂಚಿಸಿದಂತೆ ಹಣದ ವಿಷಯದಲ್ಲಿ ಎಷ್ಟು ಉದಾರಿಯೋ ತನ್ನ ಜ್ಞಾನ ಭಂಡಾರವನ್ನು ಅಷ್ಟೇ ಉದಾರವಾಗಿ ವಿದ್ಯಾರ್ಥಿ ವೃಂದಕ್ಕೆ ಸಲ್ಲಿಸುತ್ತಿದ್ದನು. ಆತ ನಡೆಯಿಸುತ್ತಿದ್ದ ಸಂಶೋಧನಾಲಯ ಚೊಕ್ಕಟವಾದ

ಚಿಕ್ಕ ಮನೆ. ಪ್ರಯೋಗಶಾಲೆಯ ಸುತ್ತಲೂ ವಿಧವಿಧ ಗಿಡಮರಗಳೂ, ಪ್ರಾಣಿಗಳೂ ಇದ್ದು ನಿಲಯಕ್ಕೆ ಕಳೆಕೊಟ್ಟಿತ್ತು. ಈ ವಿಜ್ಞಾನ ಪ್ರೇಮಿಗೆ ಬಾಲ್ಯದಲ್ಲಿ ಸಾಹಿತ್ಯದಲ್ಲಿ ಹೆಚ್ಚಾದ ಅಭಿರುಚಿಯಿದ್ದು ಕ್ರಮೇಣ ಕಡಮೆ ಯಾಯಿತು. ಇದಕ್ಕೆ ವಿಜ್ಞಾನವೆಂದೂ ಕಾರಣವಲ್ಲ. ಈ ರೀತಿಯಾದ ಸಾಹಿತ್ಯದ ಅಸಡ್ಡೆಗೆ ಆತನ ಅನಾರೋಗ್ಯವೇ ಮೂಲ.

ಡಾರ್ವಿನ್ನರ ದಾಂಪತ್ಯ ಜೀವನ ಬಹಳ ಸಂತೋಷದಾಯಕವಾಗಿತ್ತು. ಮನೆಯಲ್ಲಿ ಮಕ್ಕಳು ಮತ್ತು ಹೆಂಡತಿಯೊಡನೆ ತುಂಬ ಸಲಿಗೆಯಿಂದ ವರ್ತಿಸು ತ್ತಿದ್ದನು. ಆತನು ಅನಾರೋಗ್ಯದಿಂದ ಶ್ರಮಪಡುತ್ತಿದ್ದಾಗ ಹೆಂಡತಿ ಮಕ್ಕಳೆಲ್ಲರೂ ಆತನಿಗೆ ನೆರವಾಗುತ್ತಿದ್ದರು. ಸದ್ಗುಣೆ ಮತ್ತು ಸುಸಂಸ್ಕೃತ ಳಾದ ಹೆಂಡತಿ ಡಾರ್ವಿನ್ನನಿಗೆ ಮನೆಗೆಲಸವನ್ನು ಎಂದೂ ಹಚ್ಚಿದವಳಲ್ಲ. ತಾನೇ ದಕ್ಷತೆಯಿಂದ, ವಿಚಕ್ಷಣತೆಯಿಂದ ನಡೆಸಿಕೊಂಡು ಹೋಗುತ್ತಿದ್ದಳು. ಇದಲ್ಲದೆ ಆಕೆಯಿಂದ ಸಂಶೋಧನೆಗೆ ಬೇಕಾದಷ್ಟು ನೆರವು ಮತ್ತು ಉತ್ತೇ ಜನವೂ ದೊರೆಯುತ್ತಿತ್ತು. ಡಾರ್ವಿನ್ನನ ಆರೋಗ್ಯ ನೆಟ್ಟಗಿಲ್ಲದ್ದರಿಂದ ಹೆಚ್ಚುಕಾಲ ಮನೆಯಲ್ಲಿಯೇ ಇರುತ್ತಿದ್ದು, ಮಕ್ಕಳ ಹತ್ತಿರ ಸರಳವಾಗಿ ಆಟವಾಡುತ್ತಿದ್ದನು. ಅವರಿಗೆ ಪುಟ್ಟಕತೆಗಳನ್ನು ಹೇಳಿ ಸಂತೋಷ ಪಡಿಸುತ್ತಿದ್ದನು. ಮಕ್ಕಳನ್ನು ಎಂದೂ ಬೈದು ಹೊಡೆದವನಲ್ಲ. ತನ್ನ ಮಕ್ಕಳಿಗೆ ಏನು ಪ್ರಿಯವೋ ಆತನಿಗೂ ಅದೇ ಪ್ರಿಯ. ಮಕ್ಕಳು ಸಾಕು ತ್ತಿದ್ದ ನಾಯಿ ಮರಿಗಳನ್ನು ತಾನು ಬಹು ಜಾಗರೂಕತೆಯಿಂದ ನೋಡಿ ಕೊಳ್ಳುತ್ತಿದ್ದನು.

ಡಾರ್ವಿನ್ನನಿಗೆ ಮಕ್ಕಳು ಒಂಭತ್ತು. ಅವರಲ್ಲಿ ಉಳಿದವರು ಐವರು ಗಂಡು ಮಕ್ಕಳು ಮತ್ತು ಇಬ್ಬರು ಹೆಣ್ಣುಮಕ್ಕಳು. ಗಂಡು ಮಕ್ಕಳೆಲ್ಲರೂ ತಂದೆಯಂತೆಯೆ ಪ್ರತಿಭಾಶಾಲಿಗಳು. ಹಿರಿಯ ಮಗನಾದ ವಿಲಿಯಂ ಇರಾಸ್ಮಸ್ ಸೌತ್ ಹ್ಯಾಂಟನ್ನಿನಲ್ಲಿ ವ್ಯಾಪಾರ ಮಾಡಿಕೊಂಡು ಸಾಹುಕಾರ ನಾಗಿದ್ದನು. ಎರಡನೆಯವನು ನಕ್ಷತ್ರ ಶಾಸ್ತ್ರ ವಿಶಾರದನಾದನು. ಮೂರ ನೆಯವನು ಸಸ್ಯಶಾಸ್ತ್ರ ಪಂಡಿತನಾಗಿ ರಾಯಲ್ ಸೊಸೈಟಿಯಲ್ಲಿ ಕಾರ್ಯ ನಿರತನಾಗಿದ್ದನು. ನಾಲ್ಕನೆಯವನು ಎರಡನೆಯವನಂತೆ ನಕ್ಷತ್ರ ಶಾಸ್ತ್ರ ಸಂಶೋಧನೆಯಲ್ಲಿ ಉದ್ದಿಕ್ತನಾಗಿ ದೊಡ್ಡ ಹುದ್ದೆಯನ್ನು ಅನುಭವಿಸು

ತ್ತಿದ್ದನು. ಕೊನೆಯವನು ಯಂತ್ರ ವಿಜ್ಞಾನಿಯಾಗಿ ಕಾರ್ಖಾನೆಯೊಂದ ರಲ್ಲಿ ಆಡಳಿತ ವಹಿಸಿದ್ದನು.

ಡಾರ್ವಿನ್ ಸಾಯುವುದಕ್ಕೆ ಒಂದು ತಿಂಗಳ ಮುನ್ನ ಸಾಧಾರಣವಾಗಿ ಆರೋಗ್ಯವಾಗಿದ್ದನು. ಆಮೇಲೆ ರೋಗವು ಇದ್ದಕ್ಕಿದ್ದಂತೆ ಉಲ್ಬಣವಾಗಿ ಬಹಳ ನಿಶ್ಶಕ್ತಿಯನ್ನುಂಟುಮಾಡಿತು. ಆದರೂ ತನ್ನ ಪ್ರಯೋಗಶಾಲೆ ಯನ್ನು ಬಿಟ್ಟವನಲ್ಲ. ಅಂತಹ ಕಷ್ಟದ ದಿನಗಳಲ್ಲೂ ತನ್ನ ಪ್ರಯೋಗ ಮತ್ತು ಸಂಬಂಧ ಪಟ್ಟ ಪುಸ್ತಕಗಳ ಕಡೆಯೇ ಗಮನವಂತೆ. ೧೮೮೨ನೆ ಏಪ್ರಿಲ್ ೧೯ ನೇ ತಾರೀಕು ಡಾರ್ವಿನ್ನನ ಹೃದಯ ದುರ್ಬಲವಾಗುತ್ತಾ ಬಂದು, ಕಡೆಗೆ ಇಹಲೋಕವನ್ನು ತ್ಯಜಿಸಿದನು.

ತನ್ನ ಇಡೀ ಜೀವನವನ್ನೇ ವಿಜ್ಞಾನದ ಸೇವೆಗೆ ಮುಡುಪಾಗಿಟ್ಟಿದ್ದ ಮಹಾವ್ಯಕ್ತಿ ಅಂದು ಅದೃಶ್ಯನಾದನು. ಪ್ರಪಂಚವೇ ಆ ಪೂಜ್ಯನಿಗಾಗಿ ಶೋಕ ಸಾಗರದಲ್ಲಿ ಮುಳುಗಿತು. ಆತನ ಅಂತ್ಯಕ್ರಿಯೆ ವೆಸ್ಟ್ ಮಿನಿಸ್ಟರ್ ಶ್ಮಶಾನದಲ್ಲಿ ೧೮೮೨ ನೆ ಏಪ್ರಿಲ್ ೨೬ ರಲ್ಲಿ ಜರುಗಿತು. ಪ್ರಸಿದ್ಧ ಭೌತ ಶಾಸ್ತ್ರಜ್ಞನಾದ ನ್ಯೂಟನ್‌ನ ಗೋರಿಯ ಹತ್ತಿರದಲ್ಲೇ ಡಾರ್ವಿನ್ನನ ಪಾರ್ಥಿವದೇಹವನ್ನು ಇಡಲಾಯಿತು. ಅಂತ್ಯ ಸಂಸ್ಕಾರಕ್ಕೆ ವಿಜ್ಞಾನಿಗಳು, ಸಾಹಿತಿಗಳು, ಕಲಾವಿದರು, ರಾಜ ಕಾರಣಿಗಳು ಕಿಕ್ಕಿರಿದು ನೆರೆದಿದ್ದರು. ಪ್ರಪಂಚದ ಅನೇಕ ಸಂಸ್ಥೆಗಳಿಂದ ಪ್ರತಿನಿಧಿಗಳು ಬಂದಿದ್ದರು. ಆತನ ಪರಮ ಮಿತ್ರರಾದ ಹಕ್ಸ್ಲಿ, ವ್ಯಾಲೆಸ್, ಲಯಲ್ ಮತ್ತು ಹೂಕರ್ ಇವರುಗಳು ಕೂಡ ತಮ್ಮ ಅಂತಿಮ ಗೌರವವನ್ನು ಸಲ್ಲಿಸಿದರು.

ಡಾರ್ವಿನ್ನನು ಸ್ವರ್ಗವಾಸಿಯಾದರೂ ವಿಜ್ಞಾನ ಪ್ರಪಂಚಕ್ಕೆ ಆತ ನಿತ್ತ ಗ್ರಂಥಗಳು ಚಿರಸ್ಮರಣೀಯವಾಗಿವೆ. ಜೀವ ವಿಜ್ಞಾನದಲ್ಲಿ "ಡಾರ್ವಿನ್ ಯುಗ" ಎಂಬ ಹೊಸಯುಗಕ್ಕೇ ಜನ್ಮ ಕೊಟ್ಟ ಈ ಮಹಾ ಪುರುಷ ಮುಂದಿನ ಪೀಳಿಗೆಗೆ ಸಂಶೋಧನೆಯ ದಾರಿಯನ್ನೂ ಹಾಕಿ ಕೊಟ್ಟಿದ್ದಾನೆ. ಇಂತಹ ಮಹಾ ವಿಜ್ಞಾನಿಗೆ ನಮೋ, ಮಹಾ ತಪಸ್ವಿಗೆ ನಮೋ.

# ಲೂಯಿ ಪ್ಯಾಶ್ಚರ್

ಫ್ರಾನ್ಸ್ ದೇಶದ ಮೆಲ್ಯುನ ನಗರದ ಪಿಲ್ಲಿ–ಲು–ಫೋರ್ತ್ ವ್ಯವಸಾಯ ಕ್ಷೇತ್ರದ ಕಡೆಗೇ ಆ ಬೆಳಿಗ್ಗೆ ಜನರೆಲ್ಲಾ ಧಾವಿಸುತ್ತಿದ್ದಾರೆ. ಫ್ರಾನ್ಸಿನ ಹೆಸರಾಂತ ಮೇಧಾವಿಗಳು, ರಾಜಕಾರಣಿಗಳು, ವೈದ್ಯರು, ವಿಜ್ಞಾನಿಗಳು, ಶ್ರೀಮಂತರು, ಜನಸಾಮಾನ್ಯರು ಕಿಕ್ಕಿರಿದು ಸೇರಿದ್ದಾರೆ. ಜನವೆಲ್ಲಾ ಆ ದಿನದ ಸತ್ವ ಪರೀಕ್ಷೆಯ ಮುಖ್ಯ ವ್ಯಕ್ತಿಯಾಗಿದ್ದವನೊಬ್ಬನ ಆಗಮನ ವನ್ನೇ ಎದುರು ನೋಡುತ್ತಿದ್ದಾರೆ. ಬಾರಿ ಬಾರಿಗೂ ಬೀಗಹಾಕಿದ್ದ ದನ ಗಳ ರೊಪ್ಪದ ಕಡೆಗೂ ಅವರ ದೃಷ್ಟಿ ಬೀಳುತ್ತಿತ್ತು. ನಿಯಮಿತ ಕಾಲವಾ ಯಿತು. ಮಧ್ಯವಯಸ್ಸಿನ ವಿಜ್ಞಾನಿಯೊಬ್ಬ ತನ್ನ ಸಹೋದ್ಯೋಗಿಗಳೊ ಡನೆ ರೊಪ್ಪದ ಬಾಗಿಲಿಗೆ ನಡೆದನು. ಜನತೆಯ ಜಯಕಾರ ನಭೋ ಮಂಡಲ ವನ್ನು ಮುಟ್ಟಿತು. ಆದರೂ ಎಲ್ಲರ ದೃಷ್ಟಿಯೂ ರೊಪ್ಪದ ಕಡೆಗೇ. ಬಾಗಿಲು ತೆರೆಯಿತು. ಕಿವಿತೂತಾದ ಇಪ್ಪತ್ತುನಾಲ್ಕು ಕುರಿಗಳು ಮೆಲುಕು ಹಾಕುತ್ತಾ ನಲಿದಾಡುತ್ತಿದ್ದವು. ಕಿವಿ ತೂತಿಲ್ಲದ ಉಳಿದ ಇಪ್ಪತ್ತುನಾಲ್ಕು ಕುರಿಗಳಲ್ಲಿ ಇಪ್ಪತ್ತೆರಡು ರಕ್ತಕಾರಿ ಸತ್ತು ನೆಲಕ್ಕುರುಳಿದ್ದವು. ಉಳಿದೆರಡು ಈಗಲೋ ಆಗಲೋ ಎನ್ನುವಂತೆ ಕುಟುಕು ಜೀವವಲ್ಲಿದ್ದವು. ಮೂಗು ಬಾಯಿ ಗಳಿಂದ ಕಪ್ಪನೆಯ ರಕ್ತ ತೊಟ್ಟಿಕ್ಕುತ್ತಿತ್ತು. ಅವೂ ನೆಲಕ್ಕುರುಳಿ ಸತ್ತವು.

ಎದುರಾಳಿಗಳ ಮುಖ ಅಷ್ಟೇ ಕಳೆಗುಂದಿ ಗುಂಪಿನಲ್ಲಿ ತಲೆಮರೆಯಾ ದರು. ಪ್ಯಾಶ್ಚರನ ಕೀರ್ತಿ ಇಮ್ಮಡಿಯಾಯಿತು. ಸೇರಿದ್ದ ಜನರ ಹರ್ಷೋ ದ್ಗಾರ ಮತ್ತೆ ನಭೋ ಮಂಡಲವನ್ನೇ ಭೇದಿಸಿತು. ಲೂಯಿಪ್ಯಾಶ್ಚರ್ ದೊಡ್ಡ ವಿಜ್ಞಾನಿ. ಪ್ರಾಣಿವರ್ಗದಲ್ಲಿ ಕಂಡುಬರುವ ರೋಗಗಳಿಗೆಲ್ಲಾ ಕೆಲವು ಜೀವಾಣುಗಳೇ ಕಾರಣವೆಂದೂ, ಇವನ್ನು ಬೇರೊಂದು ಬಗೆಯ ಜೀವಾಣುಗಳಿಂದಲೇ ಕೊಂದು ರೋಗವನ್ನು ತಡೆಗಟ್ಟಬಹುದೆಂದೂ ಅನೇಕ ಪ್ರಯೋಗಗಳ ಮೂಲಕ ಸಾಧಿಸಿದನು. ಜಯವೂ ದೊರೆಯಿತು. ಅಸಂಖ್ಯಾತ ಪ್ರಾಣಿಗಳು ಬದುಕಿದುವು. ಆದರೂ ಪ್ಯಾಶ್ಚರನ ವಿರೋಧಿಗಳು, ಮುಖ್ಯ

ವಾಗಿ ಫ್ರಾನ್ಸಿನ ವೈದ್ಯ ಸಮೂಹ ಇದನ್ನು ಒಪ್ಪದೆ ಖಂಡಿಸುತ್ತಿದ್ದರು. ಪ್ಯಾಶ್ಚರನನ್ನು ಅವಹೇಳನ ಮಾಡುತ್ತಿದ್ದರು. ಕೊನೆಗೆ ಸವಾಲೊಂದನ್ನು ಹಾಕಿದರು.

ಈ ಸವಾಲಿಗೆ ಜವಾಬೇ ಪಿಲ್ಲಿ-ಲು-ಫೋರ್ತ್ ವ್ಯವಸಾಯ ಕ್ಷೇತ್ರದಲ್ಲಿ ನಡೆದ ಪ್ರಯೋಗ. ಪ್ಯಾಶ್ಚರನ ಆಶಯದಂತೆ ಆರೋಗ್ಯಕರವಾದ ನಲವತ್ತೆಂಟು ಕುರಿಗಳಿಗೆ ರೋಗದಾಯಕವಾದ ಅತಿ ಕ್ರೂರ ಜೀವಾಣುಗಳ ವ್ಯಾಕ್ಸೀನ್ ಅನ್ನು ಚುಚ್ಚಲಾಯಿತು. ಇವುಗಳಲ್ಲಿ ಇಪ್ಪತ್ತನಾಲ್ಕು ಕುರಿಗಳಿಗೆ ಮಾತ್ರ ರೋಗವನ್ನು ತಡೆಗಟ್ಟುವ ನೆರಡಿ ಜೀವಾಣುಗಳ ವ್ಯಾಕ್ಸೀನಿಂದ ಇನಾಕ್ಯು ಲೇಷನ್ ಆಯಿತು. ಗುರುತಿಗಾಗಿ ಇವುಗಳ ಕಿವಿಯನ್ನು ಚುಚ್ಚಿ ತೂತು ಮಾಡಿದರು. ಇನ್ನು ಬೇರೆ ಇಪ್ಪತ್ತ ನಾಲ್ಕು ಕುರಿಗಳನ್ನು ಹಾಗೇ ಬಿಡ ಲಾಯಿತು. ಕಿವಿಯನ್ನು ಚುಚ್ಚಲಿಲ್ಲ. ಕೆಲವು ದಿನಗಳಾದ ಮೇಲೆ ಇವ ನ್ನೆಲ್ಲಾ ಪರೀಕ್ಷಿಸಬೇಕೆಂದು ತೀರ್ಮಾನ ಮಾಡಿದರು. ಪ್ಯಾಶ್ಚರನವಾದ ದಂತೆ ರೋಗ ನಿರೋಧಕ ಇನಾಕ್ಯುಲೇಷನ್ ಆದ ಕುರಿಗಳೆಲ್ಲಾ ಬದುಕಬೇಕು, ಉಳಿದವು ಸಾಯಬೇಕು. ಅಂದು, ೧೮೮೧ ನೇ ಜೂನ್ ೨ನೆಯ ತಾರೀಕು ಪರೀಕ್ಷೆಗೆ ಗೊತ್ತಾದ ದಿನ. ಪ್ಯಾಶ್ಚರನ ಭವಿಷ್ಯವಾಣಿ ನಿಜವಾಯಿತು. ಆತನ ಕೀರ್ತಿ ವಿಶ್ವದ ಮೂಲೆ ಮೂಲೆಗೂ ಹಬ್ಬಿತು.

ಹೀಗೆ ಕೋಟ್ಯಾಂತರ ಪ್ರಾಣಿಗಳ ಜೀವದಾನ ಮಾಡಿದ ಲೂಯಿ ಪ್ಯಾಶ್ಚರ್ ಫ್ರಾನ್ಸಿನ ಜೂರಾ ಪರ್ವತ ಪ್ರಾಂತದ ಡೋಲ್ ನಗರದಲ್ಲಿ ೧೮೨೨ ನೇ ಡಿಸೆಂಬರ್ ೨೭ ನೇ ತಾರೀಕು ಬಡ ಚಮ್ಮಾರರ ಕುಟುಂಬ ವೊಂದರಲ್ಲಿ ಜನಿಸಿದನು. ಇವನ ತಂದೆ ಜಾನ್ ಜೋಸೆಫ್ ಆ ಊರಿನ ಹೆಸರಾಂತ ಚಮ್ಮಾರ. ಇದಕ್ಕೆ ಮೊದಲು ಇವನು ಫ್ರಾನ್ಸಿನ ಮುಖಂಡ ನಾದ ನೆಪೋಲಿಯನ್ನನ ಸೈನ್ಯದಲ್ಲಿ ಸಾರ್ಜೆಂಟ್ ಮೇಜರ್ ಹುದ್ದೆಯಲ್ಲಿದ್ದು ತನ್ನ ನಾಯಕನಿಗಾಗಿ ವೀರಾವೇಶದಿಂದ ಅನೇಕ ಕದನಗಳಲ್ಲಿ ಹೋರಾಡಿ ದ್ದನು. ಅವನ ಸ್ವಾತಂತ್ರ್ಯ ಪ್ರೇಮ, ದೇಶಭಕ್ತಿ ಉಜ್ವಲವಾದುವು. ನೆಪೋಲಿಯನ್ನನಿಗೆ ಯುದ್ಧದಲ್ಲಿ ಜಯಲಕ್ಷ್ಮಿ ಒಲಿಯಲಿಲ್ಲ. ಕಳೆಗುಂದಿದ ಜೋಸೆಫ್ ಸೈನಿಕ ವೃತ್ತಿಯನ್ನೇ ಬಿಟ್ಟು ಹೊಟ್ಟೆಯ ಪಾಡಿಗಾಗಿ ಸ್ಯಾಲಿನ್ಸ್ ನಗರದಲ್ಲಿ ಚಮ್ಮಾರ ವೃತ್ತಿಯನ್ನು ಕೈಗೊಂಡನು.

ಆಗ ಫ್ರಾನ್ಸಿನಲ್ಲಿ ಹೆಚ್ಚಿನ ರಾಜಕೀಯ ಹೋರಾಟವಾಗುತ್ತಿತ್ತು. ದೇಶದಲ್ಲಿ ನೆಮ್ಮದಿಯಿರಲಿಲ್ಲ. ಜಾನ್ ಜೋಸೆಫ್‌ನಿಗೆ ಅದೇ ತಾನೇ ಯುದ್ಧದಲ್ಲಿ ಪರಾಭವಗೊಂಡಿದ್ದ ನೆಪೋಲಿಯನ್‌ನಲ್ಲಿ ಅಪಾರಭಕ್ತಿ. ತನ್ನ ಮುಖಂಡನ ಎದುರಾಳಿಗಳನ್ನು ಕಂಡರೇನೇ ಆಗದು. ಹೀಗಿರುವಾಗ ಸ್ಯಾಲಿನ್ಸ್ ನಗರದ ಮುಖ್ಯಸ್ಥ ಜೋಸೆಫ್‌ನಲ್ಲಿದ್ದ ಕತ್ತಿಯನ್ನು ನಗರ ಭವನಕ್ಕೆ ತರುವಂತೆ ಹೇಳಿ ಕಳುಹಿಸಿದನು. ಜೋಸೆಫ್ ಕತ್ತಿಯನ್ನು ತೆಗೆದು ಕೊಂಡು ಹೋಗಿ ನಗರಾಧ್ಯಕ್ಷನಿಗೂ ಒಪ್ಪಿಸಿದನು. ಆ ಕೂಡಲೇ ಅವನು ಅದನ್ನು ಪೋಲಿಸಿನವನ ವಶಕ್ಕೆ ಕೊಟ್ಟನು. ಈ ಅಪಮಾನವನ್ನು ಕಂಡ ಜೋಸೆಫ್ ಕೋಪೋದ್ರಿಕ್ತನಾಗಿ ಪೋಲೀಸಿನವನ ಕೈಯಿಂದ ಅದನ್ನು ಕಿತ್ತು ಹೊರನಡೆದನು. ಇಷ್ಟು ಹೆಚ್ಚಿನ ಸ್ವಾಭಿಮಾನ ಪ್ಯಾಶ್ಚರನ ತಂದೆಯದು. ರಾಷ್ಟ್ರ ಪ್ರೇಮ ಆತನ ಪ್ರತಿರಕ್ತನಾಳದಲ್ಲೂ ಉಕ್ಕುತ್ತಿತ್ತು. ಇದಲ್ಲದೆ ಉತ್ತಮ ಚಿತ್ರಕಾರ ಮತ್ತು ಕಲಾವಿದ.

ಲೂಯಿ ಬೆಳೆದು ದೊಡ್ಡವನಾದಂತೆ ತಂದೆಯ ಈ ಸದ್ಗುಣಗಳು ಅವನಲ್ಲಿ ಕಂಡು ಬಂದವು. ಚಿತ್ರ ಬರೆಯುವುದರಲ್ಲಿ ಸಣ್ಣವಯಸ್ಸಿನಲ್ಲೇ ತಂದೆಯನ್ನು ಮೀರಿಸಿದನು. ಊರಿನ ಸುತ್ತಮುತ್ತಲೂ ರಮಣೀಯವಾದ ಹಿಮಾಚ್ಛಾದಿತ ಪರ್ವತಗಳು, ಸುಂದರವಾದ ವನಗಳು. ಲೂಯಿ ತನ್ನ ಸಂಗಡಿಗರೊಡನೆ ಇಲ್ಲೆಲ್ಲಾ ಗಂಟೆಗಟ್ಟಲೆ ಅಲೆದಾಡುತ್ತಾ ನಿಸರ್ಗದ ಮಡಲಿನಲ್ಲಿ ಬೆಳೆದು ದೊಡ್ಡವನಾದನು.

ಸ್ಯಾಲಿನ್ಸ್ ನಗರದಲ್ಲಿ ಜೀನ್ ಜೋಸೆಫ್‌ನ ವೃತ್ತಿ ಅಷ್ಟು ಲಾಭದಾಯಕವಾಗಿರಲಿಲ್ಲ. ಸಂಸಾರದಲ್ಲಿ ಮಕ್ಕಳು ಮರಿಯಾದರು. ಬರುತ್ತಿದ್ದ ಅಲ್ಪ ವರಮಾನ ಸ್ವಲ್ಪವೂ ಸಾಕಾಗುತ್ತಿರಲಿಲ್ಲ. ಲೂಯಿಗೆ ನಾಲ್ಕು ವರ್ಷ ವಯಸ್ಸಾಗಿದ್ದಾಗ ಇಡೀ ಸಂಸಾರ ಆರ್ಬಾಯ್ ನಗರಕ್ಕೆ ವಲಸೆ ಬಂತು. ಅಲ್ಲಿ ತಂದೆಯ ವ್ಯಾಪಾರವೂ ಉತ್ತಮವಾಯಿತು. ಒಂದು ದಿನ ಸಣ್ಣ ಹುಡುಗ ಲೂಯಿ ಪ್ಯಾಶ್ಚರ್ ತಂದೆಯೊಡನೆ ನಗರದ ಬೀದಿಗಳಲ್ಲಿ ಅಡ್ಡಾಡುತ್ತಿದ್ದನು. ಅಲ್ಲಿಯ ಕಮ್ಮಾರನ ಅಂಗಡಿಯ ಮುಂದೆ ಅಸಾಧ್ಯ ಜನಸಂದಣಿ ಸೇರಿತ್ತು. ಗುಂಪಿನಿಂದ ಮಧ್ಯೆ ಮಧ್ಯೆ ಹೃದಯ ಬೇಧಕವಾದ ಚೀರಾಟವೂ ಬರುತ್ತಿತ್ತು. ಕುತೂಹಲಿಯಾದ ಲೂಯಿ ಬಗ್ಗಿ

ನೋಡಿ ಘೋರ ದೃಶ್ಯವೊಂದನ್ನು ಕಂಡು ತತ್ತರಿಸಿದನು. ಅದೇ ಊರಿನ ಕೆಲವು ರೈತರಿಗೆ ಹುಚ್ಚು ತೋಳ ಕಡಿದಿತ್ತು. ಕಮ್ಮಾರ ಅವರಿಗೆಲ್ಲಾ ಕಾದ ಕಬ್ಬಿಣದ ಬರೆ ಹಾಕುತ್ತಾ ಚಿಕಿತ್ಸೆ ಮಾಡುತ್ತಿದ್ದನು. ಅವರ ಗೋಳಾಟ ಹೇಳಿತೀರದು. ಇದೇ ಹುಚ್ಚು ಹಿಡಿದ ತೋಳ ಮತ್ತು ನಾಯಿ ಕಡಿದವರಿಗೆ ಆಗ ಮಾಡುತ್ತಿದ್ದ ಚಿಕಿತ್ಸೆ. ಇದು ಈಗ ನಮಗೆ ರಾಕ್ಷಸೀಯವಾಗಿ ಕಂಡರೂ ಆಗ ಅದೇ ರಾಮಬಾಣ, ಹುಚ್ಚು ನಾಯಿಯ ಕಡಿತಕ್ಕೆ. ಅಂತೂ ಈ ಘೋರ ಅನುಭವ ಲೂಯಿಯ ಎಳೆಯ ಮನಸ್ಸಿನಲ್ಲಿ ಬೇರೂರಿತು.

ಬೆಳೆದು ದೊಡ್ಡವನಾದ ಹುಡುಗನಿಗೆ ತಂದೆ ಅಕ್ಷರಾಭ್ಯಾಸ ಮಾಡಿಸಿದನು. ಆಗ ಗ್ರಾಮಾಂತರ ಪ್ರದೇಶಗಳಲ್ಲಿ ವಿದ್ಯಾಭ್ಯಾಸ ಚೆನ್ನಾಗಿ ನಡೆಯುತ್ತಿರಲಿಲ್ಲ. ಶಾಲೆಗೆ ಬರುತ್ತಿದ್ದ ರೈತರ ಬಲಿತ ಹುಡುಗರಿಗೆ ಓದಿನಲ್ಲಿ ಆಸಕ್ತಿಯೇ ಇಲ್ಲ. ಇದಕ್ಕೆ ಸರಿಯಾಗಿ ಉಪಾಧ್ಯಾಯರೂ ಅಸಡ್ಡೆಯಾಗಿದ್ದರು. ಲೂಯಿ ಸೇರಿದ ಶಾಲೆಗೆಲ್ಲಾ ಅವನೇ ವಯಸ್ಸಿನಲ್ಲಿ ಚಿಕ್ಕವನು. ಅಲ್ಲಿಯ ಪಾಠಕ್ರಮ ಅವನ ಮನಸ್ಸಿಗೇ ಹಿಡಿಸಲಿಲ್ಲ. ಕತ್ತೆಯ ಕಾಗದದ ದಪ್ಪರಟ್ಟಿನ ಪುಸ್ತಕಗಳಲ್ಲಿ ಚಿತ್ರಗಳೇ ಇರಲಿಲ್ಲ. ಪಾಠವೆಲ್ಲಾ ಬರೀ ಅಕ್ಷರಗಳೇ. ಲೂಯಿ ತನ್ನ ಈ ತೆರನಾದ ಪುಸ್ತಕಗಳ ತುಂಬಾ ಪಾಠಕ್ಕೆ ಸಂಬಂಧಿಸಿದಂತೆ ಸುಂದರ ಚಿತ್ರಗಳನ್ನು ಬರೆದನು. ಇದನ್ನು ನೋಡಿದ ಇವನ ತಂದೆ, ಶಾಲಾ ಉಪಾಧ್ಯಾಯರು ಇವನನ್ನು ಬಹುವಾಗಿ ಮೆಚ್ಚಿಕೊಂಡರು. ಇವನ ಪ್ರತಿಭೆ ಅವರಿಗೆ ಅರಿವಾಯಿತು. ಶ್ರದ್ಧಾಸಕ್ತಿಯಿಂದ ಅವನ ವಿದ್ಯಾರ್ಜನೆಯೂ ಮುಂದುವರಿಯಿತು.

ಈ ಕಾಲದಲ್ಲೇ ನಡೆದ ಕೆಲವು ರಾಜಕೀಯ ಘಟನೆಗಳೂ ಬಾಲಕ ಲೂಯಿಯ ಮೇಲೆ ಮಹತ್ಪರಿಣಾಮವನ್ನುಂಟುಮಾಡಿದವು. ಅವನ ರಾಷ್ಟ್ರಪ್ರೇಮ, ಸ್ವಾತಂತ್ರ್ಯಪ್ರಿಯತೆಯನ್ನು ಉದ್ದೀಪನಗೊಳಿಸಿದವು. ಇವುಗಳಲ್ಲಿ ಮೊದಲನೆಯದು ಹತ್ತನೆಯ ಚಾರ್ಲ್ಸ್ ದೊರೆ ನಾಗರಿಕರ ಹಕ್ಕುಗಳನ್ನು ಮೊಟಕು ಮಾಡಿದ ಶಾಸನ ಮತ್ತು ಎರಡನೆಯದು ಲಯನ್ಸ್ ಪಟ್ಟಣದ ನಾಗರಿಕರು ಆಳರಸರ ಸರ್ವಾಧಿಕಾರತ್ವವನ್ನು ಕಿತ್ತೆಸೆದು ತಮ್ಮ ಸ್ವಾತಂತ್ರ್ಯವನ್ನು ಸಾರಿದ ಮಹತ್ವಪೂರ್ಣವಾದ ಘಟನೆ.

ಅರ್ಬಾಯ್‌ನಲ್ಲಿ ಲೂಯಿಯ ಓದು ಮುಗಿಯಿತು. ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಮಗನನ್ನು ಪ್ಯಾರಿಸ್‌ನಗರಕ್ಕೆ ಕಳುಹಿಸಲು ತಂದೆ ತಾಯಿಗಳು ನಿರ್ಧರಿಸಿದರು. ೧೮೩೮ ನೆ ಇಸವಿಯಲ್ಲಿ ಹದಿನಾರು ವರ್ಷದ ಲೂಯಿ ಅಕ್ಕರೆಯ ಮನೆಯವರನ್ನು ಬಿಟ್ಟು, ಭಾರವಾದ ಹೃದಯವನ್ನು ಹೊತ್ತು ತನಗೆ ಪರಿಚಯವಿಲ್ಲದ ದೂರದ ಪ್ಯಾರಿಸ್ ಪಟ್ಟಣಕ್ಕೆ ಪ್ರಯಾಣಮಾಡಿದನು. ಪ್ರಯಾಣಮಾಡುವಾಗಲೂ ಮನಸ್ಸೆಲ್ಲಾ ಮನೆಯವರ ಮೇಲೆ ನಾಟಿ ಹೋಗಿತ್ತು. ಪ್ಯಾರಿಸ್ಸಿನ 'ಲ್ಯಾಟಿನ್ ಕ್ವಾರ್ಟರ್ಸ್' ಪ್ರದೇಶದಲ್ಲಿದ್ದ ಶಾಲೆಯೊಂದನ್ನೂ ಸೇರಿದನು. 'ಪೆನ್‌ಷನ್ ಬಾರ್ಬೆ' ಎಂಬ ವಿದ್ಯಾರ್ಥಿನಿಲಯವನ್ನೂ ಸೇರಿದನು. ಹೊಸ ಸನ್ನಿವೇಶ, ವಾತಾವರಣ ಲೂಯಿಗೆ ಹಿಡಿಸಲಿಲ್ಲ. ಮನೆಯ ಗೀಳು ಹಿಡಿಯಿತು. ಪಾಠ ಪ್ರವಚನಗಳಲ್ಲಿ ಆಸಕ್ತಿಯೇ ಇಲ್ಲ. ಉತ್ಸಾಹ ಉಡುಗಿ ಮಂಕು ಬಡಿದವನಂತಾದನು. ಆರೋಗ್ಯವೂ ಕೆಟ್ಟಿತು. ಜೊತೆಯಲ್ಲಿದ್ದ ಸ್ನೇಹಿತರು ಎಷ್ಟು ಸಮಾಧಾನ ಹೇಳಿದರೂ ಸರಿಹೋಗಲಿಲ್ಲ. ತನ್ನನ್ನು ನೋಡಲು ಬಂದ ಮಿತ್ರರನ್ನು ಕುರಿತು, "ಸದ್ಯ ಚಮ್ಮಾರರ ಅಂಗಡಿಯೊಂದರ ಗಾಳಿ ಬೀಸಿದರೆ ಸಾಕು ನನಗೆಷ್ಟೋ ಹಾಯೆನಿಸುತ್ತದೆ" ಎಂದು ತನ್ನ ಮನಸ್ಸಿನ ಕೊರಗನ್ನು ತೋಡಿಕೊಂಡನು. ಕೊಂಚ ದಿನಗಳಲ್ಲೇ ಜೀನ್ ಜೋಸೆಫ್ ಮಗನನ್ನು ನೋಡಲು ಬಂದನು. ಸೊರಗಿ ಕಡ್ಡಿಯಾಗಿದ್ದ ತನ್ನ ಮಗನನ್ನು ಕಂಡು ಗಾಬರಿಪಟ್ಟು ಮತ್ತೆ ಅರ್ಬಾಯ್‌ಗೇ ಕರೆದುಕೊಂಡ ಹೋದನು.

ಕೊಂಚಕಾಲ ಮನೆಯಲ್ಲೇ ಉಳಿದನು. ಓದಲು ಹೆಚ್ಚಿನ ವಿಷಯಗಳಿರದೆ ಚಿತ್ರಾಭ್ಯಾಸ ಮುಂದುವರಿದು, ಅನೇಕ ಅತ್ಯುತ್ತಮ, ಸುಂದರ ಚಿತ್ರಗಳನ್ನು ಬರೆದನು. ಅರ್ಬಾಯ್‌ನಲ್ಲೆಲ್ಲಾ ಉತ್ತಮ ಕಲಾವಿದನೆಂದು ಹೊಗಳಿದರು. ಆಮೇಲೆ ತನ್ನ ವಿದ್ಯಾಭ್ಯಾಸವನ್ನು ಮುಂದುವರಿಸುವ ಸಲುವಾಗಿ ಈ ಬಾರಿ ಡೂಬ್ಸ್ ನದಿಯ ತೀರದಲ್ಲಿದ್ದ ಬೆಸಾನ್‌ಕಾನ್ ನಗರದ ರಾಯಲ್ ಕಾಲೇಜನ್ನು ಸೇರಿದನು. ಈ ಪಟ್ಟಣಕ್ಕೆ ಹೆಚ್ಚಿನ ವ್ಯಾಪಾರಕ್ಕಾಗಿ ಜೋಸೆಫ್ ತಿಂಗಳಿಗೊಮ್ಮೆಯಾದರೂ ಹೋಗಿಬರುತ್ತಿದ್ದ. ಹೀಗಾಗಿ ತನ್ನ ಮುದ್ದು ಮಗನ ಯೋಗಕ್ಷೇಮ ವಿಚಾರಿಸಲು ಬಹಳ ಅನುಕೂಲವಾಯಿತು. ತಂದೆಯನ್ನು ಆಗಾಗ ಕಾಣುತ್ತಿದ್ದುದರಿಂದ ಲೂಯಿಯ ಮನಸ್ಸಿನ ದುಗು

ಡುವೂ ಬಹುಮಟ್ಟಿಗೆ ಕಡಿಮೆಯಾಗಿ ವಿದ್ಯಾಭ್ಯಾಸ ಚೆನ್ನಾಗಿಯೇ ಮುಂದು ವರಿಯಿತು. ೧೮೪೦ನೆ ಇಸವಿಯಲ್ಲಿ ಈ ವಿಶ್ವವಿದ್ಯಾನಿಲಯದ 'ಬ್ಯಾಚೆಲರ್ ಆಫ್ ಲೆಟರ್ಸ್' ಎಂಬ ಡಿಗ್ರಿಯನ್ನೂ ಪಡೆದನು. ಅದೇ ಕಾಲೇಜಿನಲ್ಲೇ ಗಣಿತಶಾಸ್ತ್ರದ ಸಹಾಯಕ ಅಧ್ಯಾಪಕನಾಗಿಯೂ ವರ್ಷಕ್ಕೆ ೨೦೦ ಫ್ರಾಂಕ್ ಸಂಬಳದ ಮೇಲೆ ನಿಯಮಿತನಾದನು. ಆಗ ಅವನಿಗಿನ್ನೂ ಇಪ್ಪತ್ತುವರ್ಷ ವಯಸ್ಸು. ಹೆಚ್ಚು ಜ್ಞಾನಾರ್ಜನೆ ಮಾಡಬೇಕೆಂಬ ಹಂಬಲ ಅತಿಯಾಗಿತ್ತು. ತನ್ನ ಓದನ್ನು ಮುಂದುವರಿಸಿ ಎರಡು ವರ್ಷಗಳಾದ ಮೇಲೆ ವಿಜ್ಞಾನ ವಿಭಾಗದಲ್ಲೂ ಪದವೀಧರನಾದನು. ಪ್ಯಾರಿಸ್ ನಗರಕ್ಕೂ ಹೋಗಿ ಅಲ್ಲಿಯ ಹೆಸರಾಂತ ವಿಶ್ವವಿದ್ಯಾನಿಲಯದಲ್ಲಿ ಇನ್ನೂ ಹೆಚ್ಚಿನ ರಸಾಯನ ವಿಜ್ಞಾನ ವನ್ನು ಅಧ್ಯಯನ ಮಾಡಬೇಕೆಂದು ನಿರ್ಧರಿಸಿದನು. ತಂದೆಯೂ ಸಹ ಮಗನ ಈ ನಿರ್ಧಾರವನ್ನು ಪ್ರೋತ್ಸಾಹಿಸಿದನು.

ಪ್ಯಾರಿಸ್ ಪಟ್ಟಣವನ್ನು ಸೇರಿದ್ದೂ ಆಯಿತು. ಏನಾದರೂ ಆಗಲಿ ಇಕೋಲೆ ನಾರ್ಮೆಲ್‌ನಲ್ಲೇ ವಿದ್ಯಾಭ್ಯಾಸ ಮುಂದುವರಿಸಬೇಕೆಂದೂ ನಿರ್ಧ ರಿಸಿದನು. ಇದಕ್ಕೆ ಮುನ್ನ ಸಾರ್ಬಾನ್ ವಿಶ್ವವಿದ್ಯಾನಿಲಯಕ್ಕೆ ಸೇರಿದ ಅಲ್ಲಿನ ಸುಪ್ರಸಿದ್ಧ ರಸಾಯನ ಶಾಸ್ತ್ರಜ್ಞನಾದ ಜೆ. ಬಿ. ಡೂಮಾಸ್‌ನ ನೇತೃತ್ವ ದಲ್ಲಿ ರಸಾಯನ ಶಾಸ್ತ್ರವನ್ನೂ ಕಲಿತನು. ಈ ವಿಜ್ಞಾನ ವಿಭಾಗ ಲೂಯಿಗೆ ಅಚ್ಚುಮೆಚ್ಚಾಯಿತು. ತಾನೊಬ್ಬ ರಸಾಯನ ಶಾಸ್ತ್ರಜ್ಞನಾಗುವ ಕನಸನ್ನು ಕಾಣಲಾರಂಭಿಸಿದನು. ಸಾರ್ಬಾನಿನ ಪರೀಕ್ಷೆಯಲ್ಲೂ ಉತ್ತೀರ್ಣ ನಾಗಿ ೧೮೪೩ರಲ್ಲಿ ಇಕೋಲೆ ನಾರ್ಮೆಲ್ ಅನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಸೇರಿದನು. ರಸಾಯನಿಕ ಶಾಸ್ತ್ರದ ಸಂಶೋಧನೆಗಳಲ್ಲಿ ಮಗ್ನನಾದನು. ಪ್ರಯೋಗ ಶಾಲೆಯನ್ನು ಬಿಟ್ಟು ಹೊರಬರುವುದೇ ಅಪರೂಪವಾಯಿತು. ಒಮ್ಮೊಮ್ಮೆ ತನ್ನ ಆಪ್ತಮಿತ್ರರ ಜತೆಗೂಡಿ ಪ್ಯಾರಿಸ್ಸಿನ ಉದ್ಯಾನವನಗಳಲ್ಲಿ ತಿರುಗಾಡುತ್ತಿದ್ದನು. ಆ ವಿಹಾರದಲ್ಲೂ ಸಹ ವಿಜ್ಞಾನದ ವಿಷಯಗಳ ಚರ್ಚೆಯೇ. ಒಂದು ದಿನ ಷ್ಯಾಡ್ವಿ ಎಂಬ ಮಿತ್ರನೊಬ್ಬ ಲೂಯಿಗೆ ಆಗ ತಾನೆ ಪ್ರಚುರವಾಗಿದ್ದ ಹರಳುಗಳ ವಿಶೇಷಗುಣವಾದ 'ಪೋಲರೈಸೇಷ' ಅನ್ನು ವಿವರಿಸಿದನು. ಇದನ್ನು ಕೇಳಿ ಮೋಹಿತನಾದ ಪ್ಯಾಶ್ಚರ್ ಹರಳುಗಳ ಈ ರಹಸ್ಯವನ್ನು ಕಂಡುಹಿಡಿಯಲು ತೊಡಗಿದನು.

ಅದೇ ಕಾಲದಲ್ಲಿ ಸಾರ್ಬನ್ ವಿಶ್ವವಿದ್ಯಾನಿಲಯದಲ್ಲಿ ಭೌತವಿಜ್ಞಾನದ ಪ್ರೊಫೆಸರಾಗಿದ್ದ ಬಿಯೊಟ್ ಅವರೂ ಹರಳುಗಳಮೇಲೆ ವಿಶೇಷ ಸಂಶೋಧನೆಯನ್ನು ನಡೆಸುತ್ತಿದ್ದರು. ತಮ್ಮ ಪ್ರಯೋಗದಲ್ಲಿ ಅವರು ಇನ್ನೂ ಉತ್ತೀರ್ಣರಾಗಿರಲಿಲ್ಲ. ಲೂಯಿ ತನ್ನ ಅಧ್ಯಯನಕ್ಕಾಗಿ ಟಾರ್ಟಾರಿಕ್ ಆಮ್ಲದ ಹರಳುಗಳನ್ನು ಸಂಗ್ರಹಿಸಿದನು. ಇವುಗಳಲ್ಲಿ ಎರಡು ಬಗೆ, ಒಂದು ಟಾರ್ಟಾರಿಕ್ ಆಮ್ಲ ಮತ್ತೊಂದು ರ್‍ಯಾಸ್‌ಮಿಕ್ ಆಮ್ಲ. ಈ ಎರಡು ಜಾತಿಯ ಹರಳುಗಳೂ ನೋಡಲು ಒಂದೇ ಆಕಾರವಾಗಿದ್ದು ವಿಭಾಗಿಸುವುದೇ ಬಹು ಕಷ್ಟವಾಗಿತ್ತು. ಅಲ್ಲದೆ ಇವುಗಳಲ್ಲಿ ಒಂದು ಜಾತಿಯದು ಮಾತ್ರ ಪೋಲರೈಸೇಷ ಎಂಬ ವಿಶೇಷಗುಣವನ್ನು ಸೂಸುತ್ತಿದ್ದವು. ಇದು ಲೂಯಿಯ ಕುತೂಹಲವನ್ನು ಕೆರಳಿಸಿತು. ಏನಾದರೂ ಮಾಡಿ ಈ ಗುಣ ವಿಶೇಷವನ್ನು ಸೂಚಿಸುವ ಹರಳನ್ನು ಕಂಡುಹಿಡಿಯಬೇಕೆಂದೂ ನಿರ್ಧರಿಸಿದನು. ಈ ಸಂಶೋಧನೆಗಳು ಪ್ರೊ. ಬಿಯೊಟ್‌ರಿಗೂ ತಿಳಿದು ಲೂಯಿ ಪ್ಯಾಶ್ಚರನನ್ನು ಬಹುವಾಗಿ ಶ್ಲಾಘಿಸಿದರು. ಅವನ ಅಧ್ಯಯನದಿಂದ ತಮ್ಮ ಹರಳಿನ ಸಂಶೋಧನೆಗೂ ಬಹಳ ಸಹಾಯವಾಗುವುದೆಂದೂ ತಿಳಿಸಿದರು.

೧೮೪೮ ರಲ್ಲಿ ಲೂಯಿ ಪ್ಯಾಶ್ಚರನನ್ನು ಸ್ಟ್ರಾಸ್‌ಬರ್ಗ್ ಕಾಲೇಜಿನಲ್ಲಿ ಅಧ್ಯಾಪಕರಾಗಿ ನಿಯಮಿಸಿದರು. ಅಲ್ಲಿಯ ಮುಖ್ಯಸ್ಥನಾದ ಲಾರೆಂಟ್‌ನ ಭೇಟಿ ನಡೆಯಿತು. ಅವನೂ ಸಹ ಹರಳುಗಳ ಮೇಲೆಯೇ ಸಂಶೋಧನೆ ನಡೆಸುತ್ತಿದ್ದನು. ಒಬ್ಬ ಸಹಾಯಕನೂ ಬೇಕಾಗಿತ್ತು. ಇದನ್ನು ಕೇಳಿದ ಪ್ಯಾಶ್ಚರ್ ಸಂತೋಷದಿಂದ ಒಪ್ಪಿ ಅವನ ಸಹಾಯಕನಾದನು. ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತಾಯಿತು. ಟಾರ್ಟಾರಿಕ್ ಆಮ್ಲದ ಹರಳುಗಳ ಸಂಶೋಧನೆ ಮುಂದುವರಿಯಿತು. ಸೂಕ್ಷ್ಮವಾಗಿ ಪರೀಕ್ಷೆಮಾಡಿದ ಮೇಲೆ ಒಂದು ಹೊಸ ವಿಷಯವನ್ನೇ ಕಂಡುಹಿಡಿದನು. ಟಾರ್ಟಾರಿಕ್ ಆಮ್ಲದ ಎಲ್ಲಾ ಹರಳುಗಳಲ್ಲೂ ಒಂದು ಮುಖ ಬಲಗಡೆ ಬಾಗಿರುವುದಾಗಿಯೂ, ರ್‍ಯಾಸೆಮಿಕ್ ಆಮ್ಲದ ಹರಳುಗಳಲ್ಲಿ ಹೀಗಿರದೆ ಕೆಲವು ಬಲಕ್ಕೂ ಕೆಲವು ಎಡಕ್ಕೂ ಬಾಗಿರುವ ಮುಖಗಳನ್ನು ಹೊಂದಿರುವುದಾಗಿಯೂ ತಿಳಿಸಿದನು. ಅನಂತರ ರ್‍ಯಾಸೆಮಿಕ್ ಆಮ್ಲದ ಹರಳುಗಳಲ್ಲಿ ಬಲಮುಖಿಗಳನ್ನೂ, ಎಡಮುಖಿಗಳನ್ನೂ ವಿಭಾಗಿಸಿದನು. ಬೆಳಕಿನ ಕಿರಣಗಳನ್ನು

ಎಡಮುಖಿಗಳು ಎಡಗಡೆಗೂ, ಬಲಮುಖಿಗಳು ಬಲಗಡೆಗೂ ತಿರುಗಿಸುವು ದಾಗಿಯೂ ತಿಳಿದು ಬಂತು. ಈ ಎರಡು ಜಾತಿಯ ಹರಳುಗಳು ರಾಸಾಯನಿಕವಾಗಿ ಒಂದೇ ಪ್ರಮಾಣದಲ್ಲಿ ಬೆರೆತು ಹೊಸ ಹರಳುಗಳನ್ನೂ ಉಂಟು ಮಾಡುತ್ತವೆ. ಈ ಜಾತಿಯ ಹರಳುಗಳಲ್ಲಿ ಬೆಳಕು ಯಾವ ಕಡೆಗೂ ಬಾಗುವುದೇ ಇಲ್ಲವೆಂದೂ ಸಾರಿದನು. ಈ ಹೊಸ ಸಂಶೋಧನೆಯಿಂದ ಯುವಕ ವಿಜ್ಞಾನಿ ಲೂಯಿ ಪ್ಯಾಶ್ಚರನ ಕೀರ್ತಿ ಹೆಚ್ಚಿತು. ಇದರಲ್ಲೇ ಬಹುಕಾಲವನ್ನು ಕಳೆದಿದ್ದ ಪ್ರೊ|| ಬಿಯೋಟ್ ಪ್ಯಾಶ್ಚರನ ಸಂಶೋಧನೆಯನ್ನು ಅಷ್ಟು ಸುಲಭವಾಗಿ ಒಪ್ಪಲಿಲ್ಲ. ಕೊನೆಗೊಂದು ದಿನ ಪ್ಯಾಶ್ಚರನೇ ಅವನ ಸಂಶೋಧನಾಲಯಕ್ಕೆ ಹೋಗಿ ಹರಳುಗಳನ್ನು ಪ್ರತ್ಯೇಕಿಸಿ ತೋರಿಸಿದಾಗ ಬಿಯೋಟ್‌ಗಾದ ಅಚ್ಚರಿ ಅಷ್ಟಿಷ್ಟಲ್ಲ.

ಪ್ಯಾಶ್ಚರ್‌ಗೆ ಈಗ ಸುಮಾರು ೨೬ ವರ್ಷ ವಯಸ್ಸು. ಸ್ಟ್ರಾಸ್‌ಬರ್ಗ್ ವಿಶ್ವವಿದ್ಯಾನಿಲಯದ ಮುಖ್ಯಸ್ಥ ಲಾರೆಂಟ್‌ನಿಗೆ ಸುಂದರಿಯಾದ ಮಗಳೊಬ್ಬಳಿದ್ದಳು. ಅವಳನ್ನು ಕಂಡು ಮೋಹಿತನಾದನು. ಅಲ್ಲಿ ಕೆಲಸಕ್ಕೆ ಸೇರಿ ಇನ್ನೂ ಎರಡು ವಾರಗಳಾಗಿತ್ತು. ಪದ್ಧತಿಯಂತೆ ವಿಶ್ವವಿದ್ಯಾನಿಲಯದ ಮುಖ್ಯಾಧಿಕಾರಿಗೆ ಮಗಳನ್ನು ಮದುವೆಯಾಗಲು ಒಪ್ಪಿಗೆ ಕೊಡಬೇಕೆಂಬ ಪತ್ರವೂ ಹೋಯಿತು. ಮೇರಿ ಕೂಡಲೆ ತನ್ನ ಒಪ್ಪಿಗೆಯನ್ನು ಕೊಡಲೂ ಇಲ್ಲ. ಇವನ ನಡೆವಳಿಕೆ ಕೊಂಚ ವಿಚಿತ್ರವಾಗಿಯೂ ಇತ್ತು. ಹುಡುಗಿಯ ತಂದೆ ತಾಯಿಗಳೂ ಒಪ್ಪಿದ ಹಾಗೆ ಕಾಣೆ. ಕೂಡಲೆ ಇವರೆಲ್ಲರಿಗೂ ಉದ್ದನೆಯ ಪತ್ರಗಳನ್ನು ಬರೆದು ಪ್ರಾರ್ಥಿಸಿದನು. ಅದರಲ್ಲೂ ತನ್ನ ಪ್ರೇಯಸಿಯನ್ನು ಕುರಿತು “ ಆತುರದಲ್ಲಿ ನನ್ನನ್ನು ಒಲ್ಲೆಯೆನ್ನದಿರು., ನಿಧಾನವಾಗಿ ಯೋಚಿಸು. ಹೊರಗಡೆ ನಾನು ನಿರುತ್ಸಾಹಿ, ಲಜ್ಜಾ ಸ್ವಭಾವದವನಾಗಿ ಕಂಡರೂ ನಿನ್ನನ್ನು ನೋಡಿ ಮಾರುಹೋಗಿದ್ದೇನೆ. ನನ್ನ ಹೃದಯವನ್ನೇ ನಿನಗರ್ಪಿಸಿದ್ದೇನೆ. ದಯಮಾಡಿ ಒಪ್ಪಿಗೆಯನ್ನು ನೀಡು ” ಎಂದು ಬರೆದನು. ಆಕೆಯೂ ಒಪ್ಪಿದಳು. ೧೮೪೯ ನೆ ಮೇ ತಿಂಗಳಿನ ೨೯ ನೆ ತಾರೀಕು ಇಬ್ಬರ ಮದುವೆಯೂ ನಡೆಯಿತು.

ಈ ವೇಳೆಗಾಗಲೆ ಲೂಯಿ ವಿಜ್ಞಾನದಲ್ಲಿ 'ಡಾಕ್ಟರೇಟ್' ಪದವಿಯನ್ನೂ ಪಡೆದಿದ್ದನು. ಸಂಶೋಧನೆಗಳಲ್ಲೂ ಇವನ ಹೆಸರು ಫ್ರಾನ್ಸಿನ ವಿಜ್ಞಾನ

ಕೇಂದ್ರಗಳಲ್ಲೆಲ್ಲಾ ಹರಡಿತ್ತು. ಮದುವೆಯಲ್ಲಿ ಅಷ್ಟು ಅನುರಕ್ತನಾಗಿದ್ದರೂ ಸಹ ವಿಜ್ಞಾನ ಸಂಶೋಧನೆಗಳಲ್ಲೇ ಮುಳುಗಿದ್ದ ಲೂಯಿಗೆ ಗೊತ್ತಾದ ಮದುವೆಯ ದಿನವೇ ಮರೆತು ಹೋಯಿತು. ನೆಂಟರಿಷ್ಟರು ಮದುವೆ ಸಮೀಪವಾಗುತ್ತಿರುವುದನ್ನು ನೋಡಿ ಅವನ ಸಂಶೋಧನಾಲಯಕ್ಕೇ ಓಡಿ ಜ್ಞಾಪಿಸಿ ಕರೆದುಕೊಂಡು ಬಂದರಂತೆ. ತಾನು ಮಾಡುವ ಕೆಲಸದಲ್ಲಿ ಅಷ್ಟು ಆಸಕ್ತಿ ಲೂಯಿಗೆ. ಇತರ ಯಾವುದರ ಪರಿವೆಯೇ ಆಗುತ್ತಿರಲಿಲ್ಲ.

ಇಂತಹ ವಿಚಿತ್ರ ವ್ಯಕ್ತಿಯ ಜತೆಯಲ್ಲಿ ಬಾಳ್ವೆಯನ್ನು ಬಹು ಸಮರ್ಪಕವಾಗಿ ಮೇರಿ ನಡೆಸಿದಳೆಂದರೆ ನಮಗೆಲ್ಲಾ ಆಶ್ಚರ್ಯವಾಗದಿರದು. ಅನೇಕ ವೇಳೆ ಹೆಂಡತಿಯನ್ನೇ ಮರೆತು ಸಂಶೋಧನಾಲಯದಲ್ಲೇ ಹಗಲಿರುಳೆನ್ನದೆ ಇರುತ್ತಿದ್ದನು. ಇಷ್ಟಾದರೂ ಆಕೆಗೆ ಈತನಲ್ಲಿ ಅಪಾರ ಪ್ರೇಮ. ತನ್ನ ಗಂಡನನ್ನು ಹೊಗಳಿ ತಂದೆ ತಾಯಿಗಳಿಗೆ ಪತ್ರಗಳನ್ನೂ ಬರೆಯುತ್ತಿದ್ದಳು.–ಒಮ್ಮೆ ರಾಜ ಕುಮಾರ ಮೂರನೆ ನೆಪೋಲಿಯನ್ ಸ್ಟ್ರಾಸ್‌ಬರ್ಗ್ ನಗರಕ್ಕೆ ಭೇಟಿಯಿತ್ತನು. ವಿಶ್ವವಿದ್ಯಾನಿಲಯದ ಅಧಿಕಾರಿಗಳು ತಮ್ಮ ಮುಂದಿನ ದೊರೆಗೆ ದೊಡ್ಡ ಸ್ವಾಗತ ಸಮಾರಂಭವನ್ನೇರ್ಪಡಿಸಿದ್ದರು. ಇದು ಬಹು ಅಟ್ಟಹಾಸ ಮತ್ತು ಸಂಭ್ರಮದ ಸಮಾರಂಭ. ಇದರ ಪರಿವೆಯೇ ಇಲ್ಲದೆ ಪ್ಯಾಶ್ಚರ್ ಪ್ರಯೋಗಗಳಲ್ಲೇ ದಿನವೆಲ್ಲಾ ಕಳೆದು ಸಂಜೆ ಮನೆಗೆ ಬಂದಾಗ ಜ್ಞಾಪಿಸಿಕೊಂಡನು. ಹೆಂಡತಿಯು ಕ್ಷಮೆಯನ್ನು ಕೇಳಿದನು. ಆಕೆ ಇದೊಂದನ್ನೂ ಮನಸ್ಸಿಗೇ ಹಚ್ಚಿಕೊಳ್ಳಲಿಲ್ಲ. ಆಕೆಗೆ ಬೇಕಾಗಿದ್ದುದು ತನ್ನ ಪತಿಯ ಯಶಸ್ಸು. ಬಹುಶಃ ಈಕೆ ಲೂಯಿಯ ಬಾಳ ಗೆಳತಿಯಾಗದೆ ಇದ್ದಿದ್ದರೆ ಆತನು ಭಾಗವಹಿಸಬೇಕಾಗಿದ್ದ ಅಸಂಖ್ಯಾತ ಸಭೆಗಳಿಗೆ ಹೋಗಲು ಸಾಧ್ಯವೇ ಆಗದೆ ಕೆಲಸ ಸುಸೂತ್ರವಾಗಿ ನಡೆಯುತ್ತಿರಲಿಲ್ಲ ವೆನ್ನಬಹುದು. ಸದಾ ಈ ವಿಜ್ಞಾನಿಗೆ ಬೆಂಗಾವಲಾಗಿರುತ್ತಿದ್ದಳು. ಆಕೆಯ ತ್ಯಾಗ, ಪತಿ ಸೇವೆ ಇತರರಿಗೆ ಅನುಕರಣೀಯ.

೧೮೫೪ರಲ್ಲಿ ಲಿಲ್‌ನಗರದಲ್ಲಿ ಹೊಸದಾಗಿ ಸ್ಥಾಪಿತವಾಗಿದ್ದ ವಿಜ್ಞಾನದ ಕಾಲೇಜಿನಲ್ಲಿ ಲೂಯಿ ಪ್ಯಾಶ್ಚರನನ್ನು ಪ್ರೊಫೆಸರಾಗಿ ನೇಮಕಮಾಡಿದರು. ಅಲ್ಲದೆ ವಿಜ್ಞಾನ ವಿಭಾಗದ ಡೀನ್ ಅಥವಾ ಮುಖ್ಯಸ್ಥನೂ ಆದನು. ಲಿಲ್

ನಗರ ಬೀಟ್ ವ್ಯವಸಾಯಕ್ಕೆ ಮುಖ್ಯವಾದ ಕೇಂದ್ರ. ಅಲ್ಲಿ ಅಸಂಖ್ಯಾತ ವಾದ ಮದ್ಯತಯಾರಿಕೆಯ ಸಣ್ಣ ಪುಟ್ಟ ಕಾರ್ಖಾನೆಗಳೂ ಇದ್ದವು. ಇಲ್ಲೇ ಆತನು ಹುದುಗುಗಳ ವಿಷಯವಾಗಿ ಸಂಶೋಧನೆಯನ್ನು ನಡೆಸಿದನು. ಹೀಗೆ ಮಾಡಿದಾಗ ಅವುಗಳಲ್ಲಿ ಹುದುಗಿದ್ದ ಅಣುಜೀವಿಗಳನ್ನೂ ಮೊಟ್ಟ ಮೊದಲಿಗೆ ಬಯಲು ಮಾಡಿದನು. ಬೀಟ್ ಸಕ್ಕರೆಯನ್ನು ಮದ್ಯವನ್ನಾಗಿ ಮಾರ್ಪಡಿಸುವ ಮಹಾಕಾರ್ಯ ಈ ಅತಿಸೂಕ್ಷ್ಮವಾದ, ಕಣ್ಣಿಗೆ ಅಗೋಚರ ವಾದ ಅಣುಜೀವಿಗಳಿಂದಲೇ ಎಂದಾಗ ಎಲ್ಲ ವಿಜ್ಞಾನಿಗಳೂ ಬೆಕ್ಕಸಬೆರ ಗಾದರು.

ಇಲ್ಲಿದ್ದಾಗ ಒಂದು ದಿನ ಮದ್ಯ ತಯಾರಿಕೆಯ ಕಾರ್ಖಾನೆಯೊಂದಕ್ಕೆ ಭೇಟಿಕೊಟ್ಟನು. ಅಲ್ಲಿ ತಯಾರಾಗುತ್ತಿದ್ದ ಮದ್ಯದಲ್ಲಿ ಬಹುಭಾಗ ಕೆಟ್ಟು ಹಾಳಾಗುತ್ತಿತ್ತು. ಕಾರ್ಖಾನೆಯ ಮಾಲೀಕನಿಗೆ ಭಾರಿನಷ್ಟವಾಗುತ್ತಿತ್ತು. ತನ್ನ ಗೋಳನ್ನು ಪ್ಯಾಶ್ಚರನ ಮುಂದೆ ತೋಡಿಕೊಂಡು ಸಹಾಯ ಮಾಡಬೇ ಕೆಂದು ಬೇಡಿಕೊಂಡನು. ಅಲ್ಲಿ ಮದ್ಯ ತುಂಬಿದ್ದ ಎರಡು ಕಡಾಯಿಗಳನ್ನು ತೋರಿಸಿದರು—ಒಂದರ ಮದ್ಯ ಕೆಟ್ಟು ಹೋಗಿತ್ತು, ಮತ್ತೊಂದರಲ್ಲಿದ್ದ ಮದ್ಯ ಕೆಡದೆ ರುಚಿಯಾಗಿತ್ತು. ಎರಡು ಕಡಾಯಿಗಳ ತಳದಲ್ಲಿದ್ದ ಬೀಟ್ ಗಡ್ಡೆಯ ಮುದ್ದೆಗಳನ್ನೂ ಸೀಸೆಗಳಲ್ಲಿ ತುಂಬಿಕೊಂಡನು. ತನ್ನ ಸಂಶೋಧನಾ ಲಯದಲ್ಲಿ ಇದನ್ನು ಸೂಕ್ಷ್ಮದರ್ಶಕ ಯಂತ್ರದಲ್ಲಿ ಪರೀಕ್ಷಿಸಿದಾಗ ಬಹು ಸೂಕ್ಷ್ಮವಾದ ಅಸಂಖ್ಯಾತ ದುಂಡಾದ ಕಣಗಳು ಕಾಣಬಂದವು. ಇವೇ ಸಕ್ಕರೆಯನ್ನು ಮದ್ಯರಸವನ್ನಾಗಿ ಮಾರ್ಪಡಿಸುವ ಜೀವಾಣುಗಳಾದ ಈಸ್ಟ್. ಹೀಗೆಯೇ ಕೆಟ್ಟು ಹೋದ ಮದ್ಯದ ಕಡಾಯಿಯ ವಸ್ತುವನ್ನು ಸೂಕ್ಷ್ಮದರ್ಶಿಯಲ್ಲಿ ನೋಡಿದಾಗ ಈ ಬಗೆಯ ಈಸ್ಟ್ ಜೀವಾಣುಗಳೇ ಕಂಡುಬರಲಿಲ್ಲ. ಅದರ ಬದಲು ಸೂಕ್ಷ್ಮವಾದ ಉದ್ದುದ್ದನೆಯ ಕೋಲಿನಾ ಕಾರದ ಲೆಕ್ಕವಿಲ್ಲದಷ್ಟು ಜೀವಾಣುಗಳು ಹರಿದಾಡುತ್ತಿದ್ದವು. ಇವೇ ಮದ್ಯ ಕೆಡಲು ಕಾರಣವೆಂದೂ ಗೊತ್ತಾಯಿತು. ಬಹುಶಃ ಈಸ್ಟ್ ಜೀವಾಣು ಗಳ ನಾಶಕ್ಕೂ ಇವೇ ಕಾರಣವಿರಬೇಕು ಎಂದೂ ಊಹಿಸಿದನು. ಸಂಶೋ ಧನೆ ಇದೇ ದಾರಿಯಲ್ಲಿ ಮುಂದುವರೆಯಿತು. ಮದ್ಯವನ್ನು ಹುಳಿಮಾಡುವ ಈ ಕೋಲಿನಾಕಾರದ ಜೀವಾಣುಗಳು ಕಡಾಯಿನಲ್ಲಿರುವುದಿಲ್ಲವೆಂದೂ,

ಮದ್ಯಕ್ಕೆ ಗಾಳಿಯ ಸಂಪರ್ಕ ಉಂಟಾದಾಗ ಅವು ಬಂದು ಸೇರುತ್ತವೆಂದೂ ನಿರ್ಧರವಾಯಿತು. ಹೆಚ್ಚೇಕೆ, ಎಲ್ಲ ಜೀವಾಣುಗಳೂ ವಾಯು ಮಂಡಲದಲ್ಲಿ ಅಸಂಖ್ಯಾತವಾಗಿರುತ್ತವೆಂದೂ ತಿಳಿಯಪಡಿಸಿದನು. ಇವುಗಳೇ ಅನೇಕ ಭಯಂಕರ ರೋಗಗಳಿಗೂ ಕಾರಣವಾಗಿರಬಹುದು. ಹೀಗೆ ಜೀವಾಣು ಗಳು ವಾಯು ಮಂಡಲದಲ್ಲಿರುತ್ತವೆಯೇ ಹೊರತು ಎಲ್ಲಿಂದಲೋ ಉದ್ಭವ ವಾಗುವುದಿಲ್ಲ. ಈ ವಿಷಯಗಳನ್ನು ಹೊರಪಡಿಸಿದಾಗ ಇಡೀ ವಿಜ್ಞಾನ ಪ್ರಪಂಚದಲ್ಲೇ ದೊಡ್ಡ ಆಂದೋಳನವಾಯಿತೆನ್ನಬಹುದು. ಅದುವರೆಗೂ ಪ್ರಚಾರದಲ್ಲಿದ್ದ ರೋಗಾಣುಗಳು ನಿರವಯವ ವಸ್ತುಗಳಿಂದ ಹುಟ್ಟುತ್ತ ವೆಂಬ ವಾದ ಮೂಲೆ ಗುಂಪಾಯಿತು. ಇದನ್ನೇ ಕುರಿತು ಅಲ್ಲಿಯ ಸಂಘವೊಂ ದರಲ್ಲಿ ಉಪನ್ಯಾಸಮಾಡಿದನು. ಮದ್ಯದ ತಯಾರಿಕೆಯ ವರ್ತಕರಿಗೂ ಇದನ್ನು ತಿಳಿಯಪಡಿಸಿ ಕೋಲಿನಂತಿರುವ ಅಣುಜೀವಿಗಳು ಬರದಂತೆ ಮಾಡಿದರೆ ಅಥವಾ ಅವುಗಳನ್ನು ನಾಶಮಾಡಿದರೆ ಮಾತ್ರ ಅವರ ಮದ್ಯ ಹುಳಿಬಂದು ಕೆಡವುದಿಲ್ಲವೆಂದೂ ಸೂಚಿಸಿದನು.

ಇವನ ಕೀರ್ತಿ ಹಬ್ಬಿ ಪ್ಯಾರಿಸ್‌ನಗರದ ಇಕೋಲೆ ನಾರ್ಮೆಲ್ ಕಾಲೇ ಜಿನ ಮುಖ್ಯಾಧಿಕಾರಿಯಾಗಿ ನೇಮಕವಾದನು. ತನ್ನ ಸಂಶೋಧನೆಗಳಿಗೆ ಹೆಚ್ಚು ಅನುಕೂಲವಾಗುವುದೆಂದು ನಂಬಿ ಪ್ಯಾರಿಸ್ಸಿಗೆ ಪ್ರಯಾಣಮಾಡಿದನು. ಮೊದಲಿನಂತೆ ತನ್ನ ಪ್ರಯೋಗಶಾಲೆಯನ್ನು ಅಲ್ಲಿ ಸಜ್ಜುಗೊಳಿಸಿ ಅಣು ಜೀವಿಗಳ ಮೇಲಿನ ಸಂಶೋಧನೆಗಳನ್ನುಮುಂದುವರಿಸಿದನು. ಈ ಜೀವಾಣು ಗಳಲ್ಲಿ ಕೆಲವು ನಮಗೆ ಸಹಾಯಕವಾಗಿರುವುದಾಗಿಯೂ, ಮತ್ತೆ ಕೆಲವು ಪ್ರತಿಕೂಲವಾಗಿರುವುದಾಗಿಯೂ ಇಲ್ಲಿಯ ಪ್ರಯೋಗಗಳಿಂದ ತಿಳಿದುಬಂತು. ವಿಜ್ಞಾನ ವಲಯಗಳಲ್ಲಿ ಬಹು ಪ್ರಸಿದ್ಧನಾದ ಜರ್ಮನ್ ದೇಶದ ಲೀಬಿಗ್ ಮೊದಲಾದವರು ಇವನ ಸಂಶೋಧನೆಗಳನ್ನು ಒಪ್ಪದೆ ತಿರಸ್ಕರಿಸಿದರು. ಇದರಿಂದ ಪ್ಯಾಶ್ಚರನಿಗೆ ಬಹು ಪೇಚಾಟವಾಯಿತು. ತನ್ನ ಸಂಶೋಧನೆ ಯನ್ನು ಸರಿಯಾದ ಕಾರಣಗಳೊಡನೆ ರುಜುವಾತು ಮಾಡಬೇಕೆಂದೂ ನಿರ್ಧರಿಸಿದನು. ಹಗಲಿರುಳೆನ್ನದೆ, ನಿದ್ರಾಹಾರಗಳಿಲ್ಲದೆ ಪ್ರಯೋಗ ಮುಂದು ವರೆಯಿತು. ಈಸ್ಟ್ ಮೊದಲಾದ ಜೀವಾಣುಗಳು ಬರಿಯಗಾಳಿಯ ಸಂಪರ್ಕ ದಿಂದಲೇ ಬೆಳೆಯಲು ಸಾಧ್ಯವಿಲ್ಲವೆಂದೂ, ಇವುಗಳಿಗೆ ವಾಯುಮಂಡಲ

ದಲ್ಲಿರುವ ಇತರ ಜೀವಾಣುಗಳ ಸಂಪರ್ಕವೂ ಅಗತ್ಯವೆಂದೂ ಊಹಿಸಿ, ತನ್ನ ಈ ಊಹೆಯನ್ನು ಸಮರ್ಥಿಸಲು ಮಿತ್ರನೊಬ್ಬನ ಸಲಹೆಯಂತೆ ಒಂದು ಹೊಸ ಪ್ರಯೋಗವನ್ನುನಡೆಸಿದನು. ಬಾಗಿ ಓರೆಯಾಗಿರುವ 'ಗಾಜಿನ ಪಾತ್ರೆಗಳನ್ನು ಅಣಿಮಾಡಿಯಾಯಿತು. ಎಲ್ಲದರಲ್ಲೂ ಈಸ್ಟ್ ತಿಳಿಯನ್ನು ಹಾಕಿ ಸ್ವಲ್ಪಕಾಯಿಸಿ ಒಳಗಿನ ಗಾಳಿಯನ್ನೂ ಹೊರದೂಡಿದನು. ಹೊರಗಿನ ಗಾಳಿಯನ್ನು ಶುದ್ಧಿಗೊಳಿಸಿ ಒಳಕ್ಕೆ ಹೋಗುವ ಏರ್ಪಾಟನ್ನೂ ಮಾಡಿದನು. ಒಳಗಿನ ಈಸ್ಟ್ ಕಣಗಳು ಬೆಳೆಯದೇ ಇದ್ದಷ್ಟೇ ಇದ್ದವು. ಸೀಸೆಯ ಬಾಗಿದ ಕುತ್ತಿಗೆಯಲ್ಲಿ ಹೊರಗಾಳಿಯಲ್ಲಿದ್ದ ಅಸಂಖ್ಯಾತ ಜೀವಾಣುಗಳು ಶೇಖರವಾಗಿದ್ದವು. ಇವುಗಳ ಸಂಪರ್ಕ ಉಂಟಾದರೆ ಮಾತ್ರ ಒಳಗಿನ ತಿಳಿಯಲ್ಲಿದ್ದ ಈಸ್ಟ್ ಜೀವಾಣುಗಳು ಮರಿಹಾಕುತ್ತವೆಂಬುದನ್ನು ಪ್ರಯೋಗದ ಮೂಲಕ ತೋರಿಸಿದನು ಶುಭ್ರವಾದ ಗಾಳಿಯಲ್ಲಿ ಜೀವಾಣುಗಳು ಬಹು ಕಡಮೆಯಿರುವುದೆಂದನು. ಅದನ್ನು ಸ್ಥಿರೀಕರಿಸಲು ಆಲ್ಪ್ಸ್ಪರ್ವತಗಳಿಗೇ ಹೋಗಿ, ಶಿಖರದ ಮೇಲೆ ನಿಂತು ಶುದ್ಧವಾದ ಗಾಳಿಯನ್ನು ಸಂಗ್ರಹಿಸಿ ಪರೀಕ್ಷೆ ಮಾಡಿದಾಗ ಇವನ ಊಹೆ ನಿಜವಾಯಿತು. ಎದುರಾಳಿಗಳಿಗೆ ದಿಕ್ಕೇ ತೋರಲಿಲ್ಲ. ಪ್ಯಾಶ್ಚರನಿಗೆ ಅವರೆಲ್ಲಾ ತಲೆ ಬಾಗಬೇಕಾಯಿತು.

ಹೀಗೆ ಪ್ರಕಟವಾದ ಎಲ್ಲಾ ಸಂಶೋಧನೆಗಳೂ ಪ್ಯಾಶ್ಚರನಿಗೆ ಅಪಾರ ಕೀರ್ತಿಯನ್ನು ತಂದವು. ಇವನ ಪದ್ಧತಿಯನ್ನೇ ಸುಪ್ರಸಿದ್ಧ ವೈದ್ಯನಾದ ಲಾರ್ಡ್ ಲಿಸ್ಟರ್ ಅನುಸರಿಸಿದನು. ಅಸಂಖ್ಯಾತ ರೋಗಿಗಳ ಪ್ರಾಣವನ್ನೂ ಉಳಿಸಿದನು. ಅದಕ್ಕೆಮೊದಲು ಗಾಯಗೊಂಡವರು,ಶಸ್ತ್ರಚಿಕಿತ್ಸೆಗೆ ಒಳಗಾಗುವವರು ಬದುಕುತ್ತಿದ್ದುದೇ ವಿರಳ. ವಾಯುಮಂಡಲದಲ್ಲಿದ್ದ ರೋಗಕಾರಕ ಜೀವಾಣುಗಳ ಸಂಪರ್ಕದಿಂದ ಅವರೆಲ್ಲಾ ಮೃತ್ಯುವಿನ ಪಾಲಾಗುತ್ತಿದ್ದರು. ಆದರೆ ಪ್ಯಾಶ್ಚರನ ಕ್ರಿಮಿನಾಶಕ ಪದ್ಧತಿಯಿಂದ ಅವರೆಲ್ಲಾ ಉಳಿಯುವಂತಾಯಿತು.

೧೮೬೫ರಲ್ಲಿ ಫ್ರಾನ್ಸ್‌ದೇಶದ ಮುಖ್ಯ ಕೈಗಾರಿಕೆಯಾದ ರೇಷ್ಮೆ ಕೈಗಾರಿಕೆಗೆ ಎಂದಿಲ್ಲದ ವಿಪತ್ತು ಸಂಭವಿಸಿತ್ತು. ಸಮೃದ್ಧಿಯಾಗಿ ನಲಿದಾಡುತ್ತಿದ್ದ 'ದಕ್ಷಿಣ ಫ್ರಾನ್ಸ್ ಪಾಳುನೆಲವಾಗಿ ಶ್ಮಶಾನ ಕಳೆಯನ್ನು ತಳೆದಿತ್ತು. ಇದನ್ನೇ ನಂಬಿದ್ದ ರೈತರು ಕಂಗಾಲಾಗಿದ್ದರು. ಅವರ ಸ್ಥಿತಿ

ಚಿಂತಾಜನಕವಾಗಿತ್ತು. ನುಣುಪಾದ ರೇಷ್ಮೆಯನ್ನು ಉತ್ಪತ್ತಿಮಾಡುವ ಹುಳುಗಳಿಗೆ ಯಾವುದೋ ಒಂದು ಬಗೆಯ ಭಯಂಕರ ರೋಗ ತಗುಲಿ ಸಾಯುತ್ತಿದ್ದವು. ಹೇಗಾದರೂ ಮಾಡಿ ಈ ಕೈಗಾರಿಕೆಯನ್ನು ಉಳಿಸಿ, ಜನರನ್ನು ಕಾಪಾಡಬೇಕೆಂದು ಫ್ರಾನ್ಸ್ ಸರ್ಕಾರ ಪ್ಯಾಶ್ಚರನನ್ನು ಪ್ರಾರ್ಥಿಸಿತು. ಅವನ ವಿದ್ಯಾಗುರು ಹಣ್ಣು ಹಣ್ಣು ಮುದುಕ ಡ್ಯೂಮಾಸ್ ಸಹ ಇದನ್ನೇ ತನ್ನ ಮುದ್ದಿನ ಶಿಷ್ಯ ಪ್ಯಾಶ್ಚರನಿಗೆ ತಿಳಿಸಿದನು. ಡ್ಯೂಮಾಸ್ ಎಂದರೆ ಪ್ಯಾಶ್ಚರನಿಗೆ ಅಪಾರವಾದ ಭಕ್ತಿ. ಕೂಡಲೇ ದಕ್ಷಿಣ ಪ್ರಾಂತ್ಯಕ್ಕೆ ತೆರಳಿ ರೇಷ್ಮೆ ವ್ಯವಸಾಯವನ್ನೂ, ರೇಷ್ಮೆ ಹುಳುಗಳನ್ನೂ ಚೆನ್ನಾಗಿ ಪರೀಕ್ಷೆಮಾಡಿದನು. ದಾರವನ್ನು ಉಂಟುಮಾಡುತ್ತಿದ್ದ ಹುಳುಗಳನ್ನು ಕಂಡಾಗ ಅನೇಕ ಹುಳುಗಳ ಮೇಲೆ ಕಪ್ಪುಬಣ್ಣದ ಸಣ್ಣಸಣ್ಣ ಮಚ್ಚೆಗಳು ಕಂಡುಬಂದುವು. ಬಹುಶಃ ಇದೇ ರೋಗಕ್ಕೆ ಕಾರಣವಿರಬಹುದು. ಸೂಕ್ಷ್ಮದರ್ಶಿಯಲ್ಲೂ ಪರೀಕ್ಷಿಸಿ ಈ ಕಪ್ಪುಬಣ್ಣದ ಜೀವಾಣುಗಳೇ ರೋಗವನ್ನುಂಟುಮಾಡುತ್ತವೆಂದೂ ತಿಳಿಸಿ, ಅವನ್ನು ನಾಶಮಾಡುವ ವಿಧಾನವನ್ನೂ ರೈತರಿಗೆ ತಿಳಿಸಿದನು. ಇವನ ಬುದ್ಧಿವಾದದಂತೆ ರೈತರು ನಡೆದುಕೊಂಡರು. ಮತ್ತೆ ರೇಷ್ಮೆಯ ಕೈಗಾರಿಕೆ ಪ್ರಬಲವಾಗುವ ಸೂಚನೆಗಳೇ ಕಂಡು ಬಂದವು.

ಇವನು ಈ ಸಂಶೋಧನೆಗಳಲ್ಲಿ ತೊಡಗಿದ್ದಾಗ ತಂದೆ ಜೀನ್‌ಜೋಸೆಫ್ ನಿಧನ ಹೊಂದಿದನು. ಇದಾದ ಕೊಂಚ ದಿನಗಳಲ್ಲೇ ಇವನ ಮುದ್ದಿನ ಕುವರಿ ಕ್ಯಾಮಿಲ್ ಸತ್ತುಹೋದಳು. ಈ ದುಃಖಗಳು ಇನ್ನೂ ಆರಿರಲಿಲ್ಲ. ಆವೇಳೆಗಾಗಲೆ ಇನ್ನೊಬ್ಬ ಮಗಳು ಸಿಸಿಲ್ ಟೈಫಾಯಿಡ್ ಜ್ವರಕ್ಕೆ ತುತ್ತಾದಳು. ಇನ್ನೊಂದು ಸಣ್ಣ ಮಗುವೂ ಇದೇ ವಿಷಮಶೀತಜ್ವರಕ್ಕೆ ಆಹುತಿಯಾಯಿತು. ಇಷ್ಟು ದುಃಖದಿಂದ ತಪ್ತನಾಗಿದ್ದರೂ ತಾನು ಮಾಡುತ್ತಿದ್ದ ಸಂಶೋಧನೆಗಳನ್ನು ಮಾತ್ರ ನಿಲ್ಲಿಸಲಿಲ್ಲ.

ಇವನ ರೇಷ್ಮೆ ಹುಳುಗಳ ಸಂಶೋಧನೆಯನ್ನು ಕಂಡ ಅನೇಕ ವರ್ತಕರು ತಮ್ಮಲಾಭ ನಿಂತುಹೋಗುವ ಪರಿಸ್ಥಿತಿಯನ್ನು ಎದುರಿಸಲು, ಪ್ಯಾಶ್ಚರನ ಮೇಲೆ ಇಲ್ಲ ಸಲ್ಲದ ಅಪಪ್ರಚಾರ ಮಾಡಿದರು. ಫ್ರಾನ್ಸಿನ ರೇಷ್ಮೆ ಹುಳುಗಳಿಗೆ ರೋಗಬಡಿದಾಗ ಇವರು ವಿದೇಶಗಳಿಂದ ಹುಳುಗಳ ಮೊಟ್ಟೆ

ಗಳನ್ನು ತರಿಸಿ ಅಪಾರ ಲಾಭಕ್ಕೆ ಮಾರುತ್ತಿದ್ದರು. ಈಗ ಅದಕ್ಕೆ ಉಂಟಾದ ತಡೆಯನ್ನು ಅವರು ಸಹಿಸಲು ತಯಾರಿರಲಿಲ್ಲ. ಇದೆಲ್ಲವನ್ನೂ ಕಂಡ ಲೂಯಿ ಪ್ಯಾಶ್ಚರ್ ವಿಶೇಷ ಚಿಂತಗೊಳಗಾದನು. ತನ್ನ ನಾಡಿನ ಜನರ ನೈತಿಕ ಮಟ್ಟವನ್ನು ಕಂಡು ಒಳಗೇ ಮರುಗಿದನು. ಹೀಗಾಗಿ ಅವನ ಮೆದುಳಿನ ರಕ್ತನಾಳ ಒಡೆದು, ಪ್ಯಾರ್ಶ್ವವಾಯು ರೋಗಕ್ಕೂ ತುತ್ತಾದನು. ಬದುಕು ವುದೇ ಕಷ್ಟವಾಯಿತು. ದೈವಕೃಪೆಯಿಂದ ವಾಸಿಯಾಯಿತು. ಆದರೆ ಶರೀರದ ಒಂದು ಭಾಗ ಮಾತ್ರ ಮೊದಲಿನಂತೆ ಸ್ವಾಧೀನದಲ್ಲಿರದೆ ಹೋಯಿತು. ಹೀಗೆ ಗುಣ ಕಂಡ ಕೂಡಲೆ ಎಂದಿನಂತೆ ಸಂಶೋಧನೆಗಳಲ್ಲಿ ತೊಡಗಿದನು. ೧೮೬೭ರಲ್ಲಿ ಪ್ಯಾರಿಸ್ಸಿಗೆ ಹಿಂದಿರುಗಿದಾಗ ಸಾರ್ಬಾನ್ ವಿಶ್ವವಿದ್ಯಾನಿಲಯ ದಲ್ಲಿ ರಸಾಯನಶಾಸ್ತ್ರದ ಪ್ರೊಫೆಸರ್ ಹುದ್ದೆ ಇವನಿಗಾಗಿ ಕಾದಿತ್ತು. ಇದೇ ವೇಳೆಯಲ್ಲಿ ಅತ್ಯಂತ ಪ್ರಸಿದ್ಧಿ ಪಡೆದ ಹುದುಗುಗಳ ವಿಜ್ಞಾನ ಪ್ರಬಂಧವೂ ಬೆಳಕು ಕಂಡಿತು. ಪ್ಯಾಶ್ಚರನ ಈ ರೀತಿಯ ಪ್ರಸಿದ್ಧ ಸಂಶೋಧನೆಗಳಿಂದ ಬೀಟ್ ಸಕ್ಕರೆಯಿಂದ ಮದ್ಯರಸ ತಯಾರಿಸುವ ಕೈಗಾರಿಕೆ, ದ್ರಾಕ್ಷಾರಸದ ಕೈಗಾರಿಕೆ, ರೇಷ್ಮೆ ಕೈಗಾರಿಕೆ ಇವುಗಳಿಗೆಲ್ಲಾ ಮಹದುಪಕಾರವಾಯಿತು. ಎಂದಿಗಿಂತ ಹೆಚ್ಚಾಗಿ ಇವುಗಳಿಂದ ದೇಶದ ಭಂಡಾರಕ್ಕೆ ಹಣವೂ ಸಲ್ಲುತ್ತಿತ್ತು. ಫ್ರಾನ್ಸಿನ ಜನರೆಲ್ಲಾ ಪ್ಯಾಶ್ಚರ್‌ನನ್ನು ಮಹಾ ವ್ಯಕ್ತಿ ಎಂದು ಹೊಗಳಿದರು.

ರೇಷ್ಮೆ ಹುಳುಗಳ ಸಂಶೋಧನೆಯಿಂದ ಕೆಲಸಕ್ಕೆ ಬಾರದೆಂದು ಪರಿ ಗಣಿತವಾಗಿದ್ದ ಅತಿಸೂಕ್ಷ್ಮವಾದ ಜೀವಾಣುಗಳ ಮಹತ್ ಪಾತ್ರದ ಅರಿವಾ ಯಿತು. ಬಹುಶಃ ಪಶುಗಳಲ್ಲಿ ಮತ್ತು ಮನುಷ್ಯರಲ್ಲಿ ಕಂಡುಬರುವ ಅನೇಕ ಭಯಂಕರ ರೋಗಗಳಿಗೂ ಈ ಬಗೆಯ ಅಣುಜೀವಿಗಳೇ ಕಾರಣವಿರಬಹು ದೆಂದು, ಅದನ್ನು ಆಳವಾಗಿ ಸಂಶೋಧಿಸಿ ಕಂಡುಹಿಡಿಯಬೇಕೆಂಬ ನಿರ್ಧಾ ರವೂ ಆಯಿತು. ಆಗ ಯೂರೋಪಿನ ದೇಶಗಳಲ್ಲಿ ನೆರಡಿರೋಗವೆಂಬ ಒಂದು ಅತಿ ಭಯಂಕರ ರೋಗಕ್ಕೆ ಹಸು ಕರುಗಳು, ಕುರಿಗಳು ತುತ್ತಾಗಿ ಪ್ರತಿವರ್ಷವೂ ಲೆಕ್ಕವಿಲ್ಲದಷ್ಟು ಸಾಯುತ್ತಿದ್ದವು. ವೈದ್ಯರು ಈ ರೋಗ ತಗುಲಿದ ಪಶುಗಳಿಗೆ ಮಾಡುತ್ತಿದ್ದ ಚಿಕಿತ್ಸೆ ನರಕಪ್ರಾಯವಾಗಿತ್ತು. ನೋಡಿ ದವರಿಗೆ ಈ ಚಿಕಿತ್ಸೆಗಿಂತ ಸಾವೇ ಸಾವಿರಪಾಲು ಮೇಲೆನಿಸುವಂತಿತ್ತು. ಸುಮಾರು ೧೮೭೦ನೆಯ ಇಸವಿಯ ವೇಳೆಗಾಗಲೇ ಪ್ಯಾಶ್ಚರ್ ಈ ಭಯಂಕರ

ನೆರಡಿ ರೋಗದ ಜೀವಾಣುಗಳನ್ನು ತನ್ನ ಸಂಶೋಧನೆಗಳಿಂದ ಬಯಲು ಮಾಡಿದನು.

ಹೆರಿಗೆಯ ಕಾಲದಲ್ಲಿ ಅನೇಕ ಹೆಂಗಸರು ಒಂದು ಬಗೆಯ ಜ್ವರಕ್ಕೆ ಆಹುತಿಯಾಗುತ್ತಿದ್ದರು. ವೈದ್ಯರಿಗೆ ಈ ಸಾಂಕ್ರಮಿಕ ಬಾಣಂತಿ ಜ್ವರವನ್ನು ಹೇಗೆ ತಡೆಗಟ್ಟಬೇಕೆಂಬುದೇ ಯೋಚನೆಯಾಗಿ ತತ್ತರಿಸುತ್ತಿದ್ದರು. ಪ್ಯಾಶ್ಚರ್ ಈ ಬಗೆಯ ಖಾಯಿಲೆ ದುಂಡಾದ, ಬಳೆಗಳಂತಿರುವ ಜೀವಾಣುಗಳಿಂದ ಬರುತ್ತವೆಂದೂ ಪ್ರಕಟಿಸಿದನು. ಇದನ್ನು ತಡೆಗಟ್ಟುವ ಕ್ರಮಗಳೂ ಕ್ರಮೇಣ ನಿರ್ಧಾರವಾಗಿ ಅನೇಕ ಬಾಣಂತಿಯರ ಪ್ರಾಣವೂ ಉಳಿಯಿತು. ಹೀಗೆಯೇ ೧೮೮೦ ರಲ್ಲಿ ಕೋಳಿಗಳಿಗೆ ಬರುತ್ತಿದ್ದ ಕಾಲರಾ ರೋಗವನ್ನೂ ನಿವಾರಿಸಲು ಸಂಶೋಧನೆಗಳನ್ನು ಕೈಗೊಂಡನು. ಬಹು ಕೊಂಚ ಕಾಲದಲ್ಲೇ ರೋಗ ಕಾರಕ ಜೀವಾಣುಗಳನ್ನು ಕಂಡುಹಿಡಿಯಲಾಯಿತು. ಅಲ್ಲದೆ ಅವನ್ನು ಇಲ್ಲದಂತಾಗಿಸುವ ವ್ಯಾಕ್ಸೀನ್ ಅನ್ನೂ ತನ್ನ ಪ್ರಯೋಗಶಾಲೆಯಲ್ಲೇ ತಯಾರಿಸಿದನು. ಇದನ್ನು ಕೋಳಿಗಳಿಗೆ ಚುಚ್ಚಿದಾಗ ಅವೆಲ್ಲಾ ರೋಗದಿಂದ ಪಾರಾದವು. ಕೋಳಿಕಾಲರಾ ರೋಗವೇ ಹೇಳಹೆಸರಿಲ್ಲದಂತಾಯಿತು. ಹೀಗೆ ದೇಶದ ಸಂಪತ್ತು ದೇಶದಲ್ಲೇ ಉಳಿಯಿತು, ವೃದ್ಧಿಯಾಯಿತು. ಹಣಕಾಸಿನ ಪರಿಣತರು ಲೆಕ್ಕಾಚಾರಮಾಡಿ ಪ್ಯಾಶ್ಚರನ ಈ ಸಂಶೋಧನೆಗಳಿಂದ ಬರೀ ಕೋಳಿಗಳ ಮೂಲಕ ದೇಶಕ್ಕೆ ಸಂದ ಆದಾಯ ೧೮೭೦ ನೇ ವರ್ಷದ ಯುದ್ಧದಲ್ಲಿ ಫ್ರಾನ್ಸ್ ಜರ್ಮನಿಗೆ ಒಪ್ಪಿಸಿದ ಕಪ್ಪದ ಹಣವನ್ನೂ ಮೀರಿಸುತ್ತದೆ ಎಂದು ಸೂಚಿಸಿದರು.

ಇದರ ಜತೆಯಲ್ಲೇ ದನಗಳಲ್ಲಿ ಕಂಡುಬರುತ್ತಿದ್ದ ನೆರಡಿ ರೋಗವನ್ನು ತಡೆಗಟ್ಟುವ ವ್ಯಾಕ್ಸೀನ್ ಸಹ ತಯಾರಾಯಿತು. ಇವನ ಶಿಷ್ಯರು, ರೋ ಮತ್ತು ಚೇಂಬರ್ ಲೆಂಡ್ ಬಹುಮಟ್ಟಿಗೆ ಪ್ಯಾಶ್ಚರನ ಸಂಶೋಧನೆಗಳಲ್ಲಿ ಸಹಾಯಕರಾದರು. ಫ್ರಾನ್ಸಿನ ಪಶುವೈದ್ಯರು ಇದನ್ನು ಸುಲಭವಾಗಿ ನಂಬದೆ ಅಪಪ್ರಚಾರಕ್ಕೆ ತೊಡಗಿದರು. ಪ್ಯಾಶ್ಚರನ ಜಯವನ್ನು ಕಂಡು ಕರುಬಿದ ಇವರು ಅವನಿಗೆ ಸವಾಲನ್ನೂ ಹಾಕಿ, ಪ್ರಯೋಗಗಳ ಮೂಲಕ ಪ್ಯಾಶ್ಚರ್ ತನ್ನ ರೋಗನಿರೋಧಕ ವ್ಯಾಕ್ಸೀನ್ ಶಕ್ತಿಯನ್ನು ತೋರಿಸಬೇಕೆಂದೂ ತಿಳಿಸಿದರು. ಇದಕ್ಕೆ ಉತ್ತರವಾಗಿಯೇ ೧೮೮೧ ನೆಯ

ಜೂನ್ ತಿಂಗಳಿನಲ್ಲಿ ಮೆಲುನ್ ನಗರದ ಪಿಲ್ಲಿ-ಲು-ಫ್ಲೋರ್ತ್ ವ್ಯವಸಾಯ ಕ್ಷೇತ್ರದಲ್ಲಿ ಕುರಿಗಳಿಗೆ ಮತ್ತು ಕೆಲವು ಹಸುಗಳಿಗೆ ಮೊದಲು ರೋಗ ಬರಿಸುವ ಜೀವಾಣುಗಳ ವ್ಯಾಕ್ಸೀನ್ ಅನ್ನು ಚುಚ್ಚಲಾಯಿತು. ಆಮೇಲೆ ಇವುಗಳಲ್ಲಿ ಅರ್ಧಕ್ಕೆ ಮಾತ್ರ ರೋಗನಿರೋಧಕ ಜೀವಾಣುಗಳ ವ್ಯಾಕ್ಸೀನ್ ಅನ್ನು ಚುಚ್ಚಲಾಯಿತು. ಕೆಲವು ದಿನಗಳ ಮೇಲೆ ಅವನ್ನು ಪರೀಕ್ಷಿಸಿದಾಗ ರೋಗ ನಿರೋಧಕ ಇಂಜೆಕ್ಷನ್ ಪಡೆದಿದ್ದ ಕುರಿಗಳು, ಹಸು ಬದುಕಿಕೊಂಡವು. ಉಳಿದವು ಸತ್ತವು. ಪ್ಯಾಶ್ಚರನ ಕೀರ್ತಿ ಎಂದಿಗಿಂತ ಇಮ್ಮಡಿಯಾಯಿತು. ಪ್ರಪಂಚದ ಮೂಲೆ ಮೂಲೆಗೂ ಹರಡಿತು. ಫ್ರಾನ್ಸ್ ಸರ್ಕಾರ ದೊಡ್ಡ ಸಾರ್ವಜನಿಕ ಸನ್ಮಾನ ಸಮಾರಂಭವೊಂದನ್ನೇರ್ಪಡಿಸಿ, ತನ್ನ ರಾಷ್ಟ್ರದ ಅತ್ಯಂತ ಹೆಚ್ಚಿನ ಗೌರವವಾದ "ಗ್ರಾಂಡ್ ಕಾರ್ಡಾನ್ ಆಫ್ ದಿ ಲೀಜನ್ ಆಫ್ ಆನರ್" ಎಂಬ ಬಿರುದನ್ನು ಪ್ಯಾಶ್ಚರನಿಗೆ ಅರ್ಪಿಸಿತು. ಅಲ್ಲದೆ ಲಂಡನ್ ನಗರದಲ್ಲಿ ಸಮಾವೇಶಗೊಂಡಿದ್ದ ಅಂತರ ರಾಷ್ಟ್ರೀಯ ವಿಜ್ಞಾನ ಸಮ್ಮೇಳನದಲ್ಲೂ ಅದ್ಭುತ ಸ್ವಾಗತ ನೀಡಿ ಗೌರವಿಸಲಾಯಿತು. ಇಡೀ ಮಾನವ ವರ್ಗದ ರಕ್ಷಕನೆಂದೂ ಹೊಗಳಲಾಯಿತು.

ಈ ವೇಳೆಯಲ್ಲೇ ಫ್ರಾನ್ಸಿನ ಹೆಸರಾಂತ ವಿದ್ವಾಂಸರ ಸಂಸ್ಥೆಯಾದ "ಅಕೆಡಮಿ"ಯ ಗೌರವ ಸದಸ್ಯನನ್ನಾಗಿ ಪ್ಯಾಶ್ಚರನನ್ನು ಚುನಾಯಿಸಲಾಯಿತು. ಇದೊಂದು ಅಪೂರ್ವವಾದ ಗೌರವ. ಸುಪ್ರಸಿದ್ಧ ಫ್ರೆಂಚ್ ಸಾಹಿತಿ ಅಲೆಕ್ಸಾಂಡರ್ ಡ್ಯೂಮಾಸ್ ಈ ಸಮಾರಂಭದಲ್ಲಿ ಭಾಷಣ ಮಾಡಿ ಲೂಯಿ ಪ್ಯಾಶ್ಚರನನ್ನು ಹೃತ್ಪೂರ್ವಕವಾಗಿ ಅಭಿನಂದಿಸಿದನು. ಇದಲ್ಲದೆ ಇವನ ಸಂಶೋಧನೆಗಳಿಂದ ಉಪಕಾರಹೊಂದಿದ ನಾನಾ ಊರಿನ ಜನರು ಇವನನ್ನು ತಮ್ಮಲ್ಲಿಗೆ ಬರಮಾಡಿಕೊಂಡು ಅತ್ಯಂತ ವೈಭವಯುತವಾದ ರೀತಿಯಲ್ಲಿ ಸತ್ಕರಿಸಿದರು. ಇಷ್ಟಾದರೂ ಪ್ಯಾಶ್ಚರ್ ಉಬ್ಬಿಹೋಗಿ ದುರಹಂಕಾರ ಪಡಲಿಲ್ಲ. ಎಂದಿನಂತೆಯೇ ಸರಳ ಸಭ್ಭಾವದವನಾಗಿಯೇ ಇದ್ದನು. ಇವನಿಗೆ ದೇವರಲ್ಲಿ ಅಪಾರ ಭಕ್ತಿ. ಎಲ್ಲವೂ ಅವನ ಕೃಪೆಯೆಂದೇ ಭಾವಿಸಿದ್ದನು. ಮುದುಕನಾಗಿ ಶಕ್ತಿ ಬಹುಮಟ್ಟಿಗೆ ಕುಗ್ಗಿಹೋಗಿದ್ದರೂ ವಿಜ್ಞಾನ ಸಂಶೋಧನೆಗಳಲ್ಲಿದ್ದ ಆಸಕ್ತಿಮಾತ್ರ ತಗ್ಗಲಿಲ್ಲ. ಎಂದಿನಂತೆಯೇ ಮುಂದುವರಿಯುತ್ತಿತ್ತು. ರೋಗದಿಂದ ನರಳುತ್ತಿದ್ದ ಎಳೆಯ ಮಕ್ಕಳನ್ನು ಕಂಡಾಗಲಂತೂ

ವಿಪರೀತ ವ್ಯಥೆಪಡುತ್ತಿದ್ದನು.

ಆ ಕಾಲದಲ್ಲಿ ಯೂರೋಪಿನ ನಾನಾ ದೇಶಗಳಲ್ಲಿ ಹುಚ್ಚು ನಾಯಿಯ, ಹುಚ್ಚು ತೋಳಗಳ ಹಾವಳಿ ವಿಪರೀತವಾಗಿತ್ತು. ಇವುಗಳಿಂದ ಕಡಿಸಿ ಕೊಂಡ ಜನರು ಸಾಯುವುದೇ ಆಗಿತ್ತು. ಅವರು ಬದುಕುವ ಸೂಚನೆಗಳೇ ಕಂಡುಬರುತ್ತಿರಲಿಲ್ಲ. ವೈದ್ಯರೂ ಇದನ್ನು ಗುಣ ಪಡಿಸಲು ಅಸಮರ್ಥ ರಾಗಿದ್ದರು, ಪ್ರತಿವರ್ಷವೂ ಸಹಸ್ರಾರು ಜನ ಹುಚ್ಚು ನಾಯಿಗಳಿಗೆ ಆಹುತಿ ಯಾಗುತ್ತಿದ್ದರು. ಪ್ಯಾಶ್ಚರ್ ಇದಕ್ಕೆ ಸರಿಯಾದ ಚಿಕಿತ್ಸೆಯನ್ನು ಕಂಡು ಹಿಡಿಯಲು ಸಂಶೋಧನೆಗಳನ್ನು ಪ್ರಾರಂಭಿಸಿದನು. ತನ್ನ ಸಂಶೋಧನಾ ಲಯದಲ್ಲಿ ಅನೇಕ ಹುಚ್ಚುನಾಯಿಗಳನ್ನಿಟ್ಟುಕೊಂಡು, ತಾನೇ ಸ್ವತಃ ಅವು ಗಳ ದವಡೆಯಿಂದ ತೊಟ್ಟಿಕ್ಕುತ್ತಿದ್ದ ಜೊಲ್ಲನ್ನುಗಾಜಿನ ಕೊಳವೆಗಳಲ್ಲಿ ಹೀರಿ ಸಂಶೋಧನೆಗಾಗಿ ಸಂಗ್ರಹಿಸುತ್ತಿದ್ದನೆಂದರೆ ನಮಗೆ ಈಗಲೂ ಮೈನವಿರೇಳು ತ್ತದೆ. ಆದರೆ ಪ್ಯಾಶ್ಚರನಿಗೆ ತನ್ನಜೀವದ ಮೇಲೆ ಆಸೆಯೇ ಇಲ್ಲ. ಸದಾ ಇತ ರರಿಗಾಗಾಗಿಯೇ ತನ್ನಪ್ರಾಣವನ್ನೇ ಮುಡುಪಾಗಿಟ್ಟದ್ದವನು. ಕೊನೆಗೆ ಆ ಜೊಲ್ಲಿನಲ್ಲಿ ಹುಚ್ಚು ನಾಯಿ ಕಡಿತದಿಂದುಂಟಾಗುವ ಜಲರೋಗದ ಜೀವಾಣು ಗಳನ್ನೂ ಕಂಡುಹಿಡಿದನು. ಈ ರೋಗವನ್ನು ತಡೆಗಟ್ಟುವ ವ್ಯಾಕ್ಸೀನ್ ಸಹ ತಯಾರಾಯಿ;ತು. ನಾಯಿ, ಇಲಿ, ಮೊಲಗಳಮೇಲೆ ಇದನ್ನು ಪ್ರಯೋಗಿಸಿ ದರು. ಉತ್ತಮ ಫಲಿತಾಂಶಗಳೂ ಕಂಡುಬಂದವು. ವಿಶ್ವದ ನಾನಾ ಮೂಲೆಗಳಿಂದ ಈ ಅಮೃತವನ್ನು ಕಂಡುಹಿಡಿದ ಪ್ಯಾಶ್ಚರನಿಗೆ ಅಭಿನಂದನಾ ಪತ್ರಗಳ ಸುರಿಮಳೆಯೇ ಆಯಿತು. ಅನೇಕರು ಈ ಹೊಸ ವ್ಯಾಕ್ಸೀನಗಾ ಗಿಯೂ ಬೇಡಿ ಪತ್ರ ಬರೆದರು.

ಇದರಿಂದ ಪ್ಯಾಶ್ಚರ್ ಧರ್ಮ ಸಂಕಟಕ್ಕೆ ಸಿಲುಕಿದಂತಾಯಿತು. ನಾಯಿ, ಮೊಲಗಳ ಮೇಲೇನೋ ಔಷಧಿ ಪರಿಣಾಮಕಾರಿಯಾಗಿದೆ. ಆದರೆ ಮನುಷ್ಯರಮೇಲೋ? ಉತ್ತರ ಬಾರವೆ ಸುಮ್ಮನಾಗಿದ್ದನು. ಪ್ರಯೋಗ ನಡೆಸಲು ಹಲವಾರು ಸಂದರ್ಭಗಳು ಬಂದರೂ ಹಿಂಜರಿದು, ಕೊನೆಗೆ ತನ್ನ ದೇಹದ ಮೇಲೆ ಇದನ್ನು ಪ್ರಯೋಗಿಸಿಕೊಳ್ಳುವ ನಿರ್ಧಾರವೂ ಆಯಿತು. ದೈವವಶಾತ್ ಆ ವೇಳೆಯಲ್ಲಿ ಜೋಸೆಫ್ ಮೈಸ್ಟರ್ ಎಂಬ ಹುಚ್ಚುನಾಯಿ ಕಡಿದ ಬಾಲಕನೊಬ್ಬನನ್ನು ಅವರ ತಾಯಿ ಪ್ಯಾಶ್ಚರನ ಬಳಿಗೆ ಚಿಕಿತ್ಸೆಗಾಗಿ

ಕರೆತಂದಳು, ಚಿಕಿತ್ಸೆಮಾಡುವಂತೆ ಬೇಡಿದಳು. ಪ್ಯಾಶ್ಚರ್ ಮೊದಲು ಹಿಂಜರಿದರೂ, ದೇವರಮೇಲೆ ಭಾರಹಾಕಿ ಧೈರ್ಯಗೊಂಡು ೧೮೮೬ ನೇ ಜುಲೈ ೬ನೇ ತಾರೀಕು ಮೊಟ್ಟಮೊದಲಿಗೆ ಸಹೋದರ ಮಾನವನೊಬ್ಬನಿಗೆ ಜಲರೋಗವನ್ನು ತಡೆಗಟ್ಟುವ ವ್ಯಾಕ್ಸೀನನ್ನು ಚುಚ್ಚಿದನು. ಸುಮಾರು ಹದಿನಾಲ್ಕು ಬಾರಿ ಇನ್‌ಜೆಕ್ಷನ್ ಕೊಡಲಾಯಿತು. ರೋಗ ಸಂಪೂರ್ಣ ಗುಣವಾಗಿ ಬಾಲಕ ಜೋಸೆಫ್ ನಲಿಯುತ್ತಾ ಊರಿಗೆ ಮರಳಿದನು. ಅವನ ತಾಯಿಯ ಮತ್ತು ಚಿಕಿತ್ಸೆಮಾಡಿದ ಪ್ಯಾಶ್ಚರನ ಆನಂದ ಮೇರೆಮೀರಿತು. ಈ ಸಂತಸದ ಸುದ್ದಿ ದೇಶದಲ್ಲೆಲ್ಲಾ ಹಬ್ಬಿ ಜನ ಹರ್ಷಪಟ್ಟರು. ಪ್ಯಾಶ್ಚರ್ ಮಹಾ ಪುರುಷನಾದನು. ಅನೇಕರಿಗೆ ಪವಾಡ ಪುರುಷನೂ ಆದನು.

ಮತ್ತೆ ವಿಶ್ವದ ನಾನಾ ಮೂಲೆಗಳಿಂದ ಜನ ಬಂದು ಪ್ಯಾಶ್ಚರನನ್ನು ಕರೆದುಕೊಂಡು ಹೋಗಿ ಹಾಡಿ, ಹೊಗಳಿ ಸನ್ಮಾನಿಸಿದರು. ಎಡಿಂಬರೋ ವಿಶ್ವವಿದ್ಯಾನಿಲಯದ ಮೂರನೆಯ ಶತಮಾನೋತ್ಸವದಲ್ಲಿ ಬ್ರಿಟನ್ನಿನ ಜನರಿತ್ತ ಗೌರವ, ರಷ್ಯದ ಜಾರ್ಜ್ ಚಕ್ರವರ್ತಿಯಿತ್ತ ಸನ್ಮಾನ—ಹೀಗೆ ಒಂದೇ, ಎರಡೇ ನೂರಾರು ಸನ್ಮಾನಗಳು ಮುದುಕ ಪ್ಯಾಶ್ಚರಿನಿಗೆ. ೧೮೯೨ರಲ್ಲಿ ಅವನ ಎಪ್ಪತ್ತನೆಯ ಹುಟ್ಟು ಹಬ್ಬವನ್ನು ಪ್ಯಾರಿಸ್ಸಿನ ಸಾರ್‌ಬಾನ್ ವಿಶ್ವವಿದ್ಯಾಲಯ ವೈಭವದಿಂದ ನೆರವೇರಿಸಿ, ಪ್ಯಾಶ್ಚರನಿಗೆ ಚಿನ್ನದ ಪದಕವನ್ನಿತ್ತು ಸನ್ಮಾನಿಸಿತು. ಫ್ರಾನ್ಸಿನ ಅಧ್ಯಕ್ಷನೇ ಅಂದಿನ ಸಮಾರಂಭದ ಅಧ್ಯಕ್ಷನಾಗಿದ್ದನು. ಪ್ಯಾಶ್ಚರ್ ಪುಟ್ಟ ಭಾಷಣಮಾಡಿ ಜನತೆಯನ್ನು ವಂದಿಸಿದನು.

ಹೀಗೆ ಮಾನವ ವರ್ಗದ ಉಪಕಾರಿಯಾಗಿ ಬಾಳಿದ ಪ್ಯಾಶ್ಚರನ ಬಾಳು ೧೮೯೫ನೇ ಸೆಪ್ಟೆಂಬರ್ ೨೭ನೇ ತಾರೀಕು ಭಗವಂತನ ಸಾನ್ನಿಧ್ಯವನ್ನು ಸೇರಿತು. ಪ್ಯಾಶ್ಚರ್ ಅಮರ ಜೀವಿಯಾದನು.

# ಮೇಡಂ ಕ್ಯೂರಿ

ಜಗತ್ಪ್ರಸಿದ್ಧ ವಿಜ್ಞಾನಿಗಳಲ್ಲಿ ಅಗ್ರಗಣ್ಯಳಾದ ಮೇಡಂಕ್ಯೂರಿಯ ತಾಯ್ನಾಡು ಪೋಲೆಂಡ್ ದೇಶ. ಈಕೆ ಜನಿಸಿದ ಹತ್ತೊಂಬತ್ತನೆಯ ಶತಮಾನದಲ್ಲಿ ಆ ದೇಶದಲ್ಲಿ ರಾಜಕೀಯ ಆಂದೋಳನ ನಡೆಯುತ್ತಿತ್ತು. ದೇಶ ಭಕ್ತರಾದ ಪೋಲೆಂಡಿನ ಜನರು ತಮ್ಮ ಆಳರಸರಾದ ರಷ್ಯನರ ವಿರುದ್ಧ ದೇಶದ ಮೂಲೆ ಮೂಲೆಗಳಲ್ಲಿ ದಂಗೆ ಏಳುತ್ತಿದ್ದರು. ಬಲಿಷ್ಠ ಜನಾಂಗವಾದ ರಷ್ಯನರು ಈ ಸ್ವಾತಂತ್ರ್ಯ ಹೋರಾಟವನ್ನು ಸದೆ ಬಡಿದು ಹುಟ್ಟಡಗಿಸಿದ ಕಾರಣ ಬುದ್ಧಿವಂತರಾದ ಅನೇಕ ಮಂದಿ ಪೋಲೆಂಡ್ ಜನರು ನಶಿಸಿಹೋಗುತ್ತಿದ್ದ ರಾಜಕೀಯ ಚಳುವಳಿಯನ್ನು ಒಂದು ವಿಶಿಷ್ಟವಾದ ರೀತಿಯಲ್ಲಿ, ಶಾಂತಿಯುತ ಮಾರ್ಗದಲ್ಲಿ ಮುಂದುವರೆಸಿದರು.

ಪೋಲೆಂಡಿನ ರಾಜಧಾನಿ ವಾರ್ಸಾ. ಅಲ್ಲಿ ವ್ಲಾಡಿಸ್ಲಾವ್ ಮತ್ತು ಮೇಡಂ ಸ್ಲೊಡೆವ್‌ಸ್ಕಿ ದಂಪತಿಗಳು ವಿದ್ಯಾರಂಗದಲ್ಲಿ ತಮ್ಮ ಅಮೂಲ್ಯವಾದ ಸೇವೆಯನ್ನು ಸಲ್ಲಿಸುತ್ತಿದ್ದರು. ವ್ಲಾಡಿಸ್ಲಾವ್ ರಷ್ಯಾ ದೇಶದ ಪೀಟರ್ಸ್‌ಬರ್ಗ್ ವಿಶ್ವವಿದ್ಯಾನಿಲಯದಲ್ಲಿ ಉನ್ನತ ವಿದ್ಯಾಭ್ಯಾಸ ಮಾಡಿ ತನ್ನ ಸ್ವಂತ ಊರಾದ ವಾರ್ಸಾಕ್ಕೆ ಹಿಂತಿರುಗಿ ಬೋಧಕನಾಗಿದ್ದನು. ಈತನ ಹೆಂಡತಿಯಾದ ಸ್ಲೊಡೆವ್‌ಸ್ಕಿ ಗಂಡನಂತೆಯೇ ಹೆಣ್ಣುಮಕ್ಕಳ ಶಾಲೆಯೊಂದರ ಮುಖ್ಯಸ್ಥೆ. ಇಬ್ಬರೂ ತುಂಬ ಸರಳ ಜೀವಿಗಳು. ಸಮಾಜದಲ್ಲಿನ ತಮ್ಮ ಸೇವೆ ಮತ್ತು ವಿದ್ಯಾರಂಗದಲ್ಲಿನ ಚಟುವಟಿಕೆಗಳ ಮೂಲಕ ಅತ್ಯಂತ ಜನಪ್ರಿಯರಾಗಿದ್ದರು. ಮೇಡಂ ಸ್ಲೊಡೆವ್‌ಸ್ಕಿ ತುಂಬಾ ಚೆಲುವೆಯೂ ಹೌದು. ಇಂಪಾಗಿ 'ಪಿಯಾನೊ' ಬಾರಿಸುತ್ತ ಮಧುರವಾಗಿ ಹಾಡುತ್ತಿದ್ದಳು. ಇವರಿಗೆ ನಾಲ್ಕು ಹೆಣ್ಣುಮಕ್ಕಳು ಮತ್ತು ಒಬ್ಬ ಮಗ. ಮಕ್ಕಳಲ್ಲೆಲ್ಲಾ ಕಿರಿಯವಳೇ ಮೇಡಂ ಕ್ಯೂರಿ. ಈಕೆಯನ್ನು ಮನೆಯಲ್ಲಿ 'ಮನ್ಯೂಸಾ', 'ಮೇನ್ಯಾ' ಎಂಬ ಮುದ್ದು ಹೆಸರಿನಿಂದ ಪ್ರೀತಿಸುತ್ತಿದ್ದರು. ಮೇನ್ಯಾಳ ಅಕ್ಕಂದಿರು ಸೋಫಿ, ಬ್ರೋನ್ಯಾ ಮತ್ತು ಹೆಲಾ.

ಅಣ್ಣನ ಹೆಸರು ಜೋಸೆಫ್. ಇದರಲ್ಲೆಲ್ಲಾ ಹಿರಿಯವಳೆಂದರೆ ಸೋಫಿ. ಮನೆಯವರು ಅವಳನ್ನು ಮುದ್ದಿನಿಂದ ಜೋಸ್ಯೆಯಾ ಎಂದೂ ಕರೆಯುತ್ತಿದ್ದರು.

ಮುದ್ದು ಕುವರಿ ಮೇನ್ಯಾ, ಸ್ಲೊಡೊವ್‌ಸ್ಕಿ ದಂಪತಿಗಳಿಗೆ ೧೮೬೭ ನೇ ವರ್ಷದ ನವಂಬರ್ ತಿಂಗಳು ೭ ನೆ ತಾರೀಕು ಜನಿಸಿದಳು. ಮೇನ್ಯಾ ಬೆಳೆದಂತೆಲ್ಲಾ ತನ್ನ ಚೆಲ್ಲಾಟಗಳಿಂದ ಮನೆಯ ಪ್ರೀತಿಯ ಮಗುವಾದಳು. ಮಗುವಿಗೆ ಸುಮಾರು ಒಂದು ವರ್ಷ ವಯಸ್ಸಾಗಿದ್ದಾಗ ಮೇಡಂ ಸ್ಲೊಡೊವ್‌ಸ್ಕಿ ತನ್ನ ಅಧ್ಯಾಪಕ ವೃತ್ತಿಯಿಂದ ವಿಶ್ರಾಂತಳಾದಳು. ಮಕ್ಕಳ ಲಾಲನೆ ಪಾಲನೆಯೇ ಅವಳಿಗೆ ಅಚ್ಚು ಮೆಚ್ಚಾಯಿತು. ವ್ಲಾಡಿಸ್ಲಾವ್‌ಗೆ ಉದ್ಯೋಗದಲ್ಲಿ ಉನ್ನತ ಪದವಿ ದೊರೆತು ಸಂಸಾರ ಸೌಖ್ಯವಾಗಿ ನಡೆಯುತ್ತಿತ್ತು.

ಮೇನ್ಯಾ ಬಹು ಚುರುಕಾದ ಹುಡುಗಿ. ಹೆಚ್ಚೇಕೆ, ಸ್ಲೊಡೊವ್‌ಸ್ಕಿ ಮನೆಯ ಮಕ್ಕಳೆಲ್ಲಾ ಬುದ್ಧಿವಂತರೇ. ಬ್ರೊನ್ಯ ಮತ್ತು ಮೇನ್ಯಾ ಅಕ್ಕ ತಂಗಿಯರು ಅನೇಕಬಾರಿ ಜೊತೆಗೂಡಿ ಪಾಠ ಓದುತ್ತಿದ್ದರು. ಅಕ್ಕ ಬ್ರೊನ್ಯಳಿಗೆ ಓದುವುದೆಂದರೆ ಅಷ್ಟುಕಷ್ಟ. ಹೀಗಾಗಿ ಮೇನ್ಯಳಿಗೆ ತಾನು ಉಪಾಧ್ಯಾಯಿನಿಯಾಗಿ ಪಾಠ ಹೇಳಿಕೊಡುತ್ತಾ ತನ್ನ ಓದನ್ನು ಮುಂದುವರಿಸುತ್ತಿದ್ದಳು. ಒಂದು ಬಾರಿ ತಂದೆ ಪಾಠವನ್ನು ಕೇಳಿದಾಗ ದೊಡ್ಡ ಹುಡುಗಿ ಬ್ರೊನ್ಯ ಸರಿಯಾಗಿ ಒಪ್ಪಿಸಲಾರದೆ ತಡವರಿಸುತ್ತಿದ್ದಳು. ಅಲ್ಲೇ ಕುಳಿತಿದ್ದ ಕಿರಿಯ ಮೇನ್ಯಾ ಆ ಕ್ಷಣವೇ ಅದೇ ಪಾಠವನ್ನು ತಪ್ಪಿಲ್ಲದಂತೆ ಸುಲಭವಾಗಿ ಓದಿ ಮುಗಿಸಿ ತಂದೆ ತಾಯಿಗಳ ಮೆಚ್ಚುಗೆಯನ್ನು ಪಡೆದಳು. ಅಷ್ಟು ಚುರುಕಾದ ಮುದ್ದುಗುವರಿ.

ತಾಯಿಗಂತೂ ಕಿರಿಯ ಹುಡುಗಿ ಮೇನ್ಯಾ ತುಂಬಾ ಅಚ್ಚು ಮೆಚ್ಚು, ಮುದ್ದಿನಕಣಿ. ಹಿರಿಯಕ್ಕ ಜೋಸ್ಯೆಯ್ಯಳಿಗಂತೂ ಇವಳನ್ನು ಕಂಡರೆ ಅಪಾರವಾದ ಪ್ರೀತಿ. ಸದಾ ತನ್ನ ಜತೆಯಲ್ಲಿ ಆಡಿಸಿಕೊಳ್ಳುತ್ತಾ ರಮ್ಯವಾದ ಕತೆಗಳನ್ನು ಹೇಳುತ್ತಿದ್ದಳು. ಅನೇಕಬಾರಿ ತಾನೆ ಸ್ವಂತವಾಗಿ ಕವನಗಳನ್ನು ಕಟ್ಟಿ ಇಂಪಾಗಿ ಹಾಡುತ್ತಿದ್ದಳು. ತಾಯಿ ಸ್ಲೊಡೊವ್‌ಸ್ಕಿಗೆ ಕ್ಷಯರೋಗದ ಸೂಚನೆಗಳು ಕಾಣಿಸಿಕೊಂಡಾಗ ಮಕ್ಕಳನ್ನು ಅಷ್ಟಾಗಿ ತನ್ನ ಬಳಿಗೆ ಸೇರುಗೊಡುತ್ತಿರಲಿಲ್ಲ. ಹೀಗಾಗಿ ಕಿರಿಯ ಮೇನ್ಯಾಳಂತೂ ಹಿರಿಯಕ್ಕ

ನನ್ನು ಬಿಟ್ಟು ಕದಲುತ್ತಲೇ ಇರಲಿಲ್ಲ.

ತಂದೆ ಸ್ಲೊಡೊವ್‌ಸ್ಕಿ ಶಾಲೆಯಲ್ಲಿ ಭೌತಶಾಸ್ತ್ರದ ಪಾಠಗಳನ್ನು ಹೇಳಿಕೊಡುತ್ತಿದ್ದನು. ತನ್ನ ಪಾಠಪ್ರವಚನಗಳಿಗೆ ಸಂಬಂಧಿಸಿದ ಬ್ಯಾರೋಮೀಟರ್, ಸೂಕ್ಷ್ಮವಾದ ಗಾಜಿನ ಕೊಳವೆಗಳು, ಥರ್ಮಾಮೀಟರ್ ಮುಂತಾದ ಅನೇಕ ಸಲಕರಣೆಗಳನ್ನು ಮನೆಯ ಒಂದು ಗಾಜಿನ ಬೀರುವಿನಲ್ಲಿ ಅಣಿಯಾಗಿ ಪೇರಿಸಿದ್ದನು. ಐದುವರ್ಷ ವಯಸ್ಸಿನ ಕಿರಿಯ ಮೇನ್ಯಳಿಗಂತೂ ಈ ಬೀರುವನ್ನು ವೀಕ್ಷಿಸುವುದೇ ಒಂದು ದೊಡ್ಡ ಹಬ್ಬ. ಅನೇಕ ಬಾರಿ ತನ್ನ ಪುಟ್ಟ ತುದಿಗಾಲಿನಲ್ಲಿ ನಿಂತು ನುಣುಪಾದ ಕತ್ತನ್ನು ಮೇಲಕ್ಕೆತ್ತಿ ಒಳಗಿದ್ದ ಸುಂದರವಾದ ಸಾಮಾನುಗಳನ್ನು ಕುತೂಹಲಿಯಾಗಿ ನೋಡುವುದೆಂದರೆ ಅವಳಿಗೆ ತುಂಬಾ ಸಂತೋಷ. ಒಂದು ದಿನ ತಂದೆ ಈ ಸುಂದರವಾದ ಕೊಳವೆಗಳು ಭೌತಶಾಸ್ತ್ರದ ಸಲಕರಣೆಗಳೆಂದಾಗ ಅವಳಿಗೆ ಆದ ಹಿಗ್ಗು ಅಪಾರ. ಅನೇಕ ವೇಳೆ ಈ ಹೆಸರನ್ನೇ ರಾಗವಾಗಿ ತಾನೇ ತಾನಾಗಿ ಹಾಡಿಕೊಳ್ಳುತ್ತಾ ಹಿಗ್ಗುತ್ತಿದ್ದಳು.

ಈ ವೇಳೆಯಲ್ಲಿ ಮೇನ್ಯಾಳ ತಾಯಿಯ ಕ್ಷಯರೋಗ ಪ್ರಬಲಿಸಿತು. ಹಾಸಿಗೆ ಹಿಡಿದು ಮನೆಯ ಕೋಣೆಯೊಂದನ್ನು ಸೇರಿದಳು. ತಂದೆಗೂ ಯಾವುದೋ ಒಂದು ಉದ್ಯಮದಲ್ಲಿ ಸಾವಿರಾರು ರೂಬಲ್‌ಗಳಷ್ಟು ಹಣ ನಷ್ಟವಾಗಿ ಕಳೆಗುಂದಿ ಹೋದನು. ಅಕ್ಕ ಜೊಸ್ಯೆಯ 'ಟೈಫಾಯಿಡ್' ಜ್ವರದಿಂದ ನರಳಿ ಸತ್ತುಹೋದಳು. ಈ ಕಷ್ಟಗಳಲ್ಲಿ ಎಳೆಯ ವಯಸ್ಸಿನ ಮೇನ್ಯಾಳ ಮೇಲೆ ಹೆಚ್ಚಿನ ಪರಿಣಾಮವನ್ನುಂಟುಮಾಡಿದವು. ಅನೇಕ ಬಾರಿ ದುಃಖ ಹೆಚ್ಚಾಗಿ, ಮೂಕವೇದನೆಯಿಂದ ನರಳುತ್ತಿದ್ದಳು. ತನ್ನ ಮಮತೆಯ ತಾಯಿಯನ್ನಾದರೂ ಉಳಿಸಿಕೊಡೆಂದು ದೇವರಲ್ಲಿ ದೈನ್ಯದಿಂದ ಮೊರೆಯಿಡುತ್ತಿದ್ದಳು. ಇಷ್ಟು ಕಷ್ಟಗಳ ನಡುವೆ ಸಿಕ್ಕಿಕೊಂಡ ಪುಟ್ಟ ಮೇನ್ಯಳಿಗೆ ಶಾಲೆಗೆ ಹೋಗಿಬರುತ್ತಿದ್ದುದೊಂದೆ ಬಹು ಸಮಾಧಾನಕರವಾಗಿತ್ತು, ಬೆಂದ ಹೃದಯಕ್ಕೆ ಶಾಂತಿಯನ್ನು ನೀಡುತ್ತಿತ್ತು. ಶಾಲೆಯಲ್ಲಿ ಎಲ್ಲದರಲ್ಲೂ ಮೇನ್ಯಳೇ ಮೊದಲನೆಯವಳು. ಬಹು ಜಾಣೆ, ಬುದ್ಧಿವಂತೆ.

ಒಂದು ಮಧ್ಯಾಹ್ನ ಶಾಲೆಯ ಉಪಾಧ್ಯಾಯಿನಿ ಟುಪಲ್‌ಸ್ಕ, ಪೋಲೆಂಡಿನ ದೇಶಭಕ್ತರ ಕಥೆಗಳನ್ನು ರಸವತ್ತಾಗಿ ಚಿಕ್ಕಮಕ್ಕಳಿಗೆ

ತಾಯ್ನುಡಿಯಾದ ಪೋಲೀಷ್ ಭಾಷೆಯಲ್ಲಿ ಹೇಳಿ ಬಣ್ಣಿಸುತ್ತಿದ್ದಳು. ಎಳೆಯ ಮಕ್ಕಳಲ್ಲಿ ದೇಶಾಭಿಮಾನ ಉಕ್ಕೇರುತ್ತಿತ್ತು. ಸರ್ಕಾರದ ಆಜ್ಞೆಯಂತೆ ಹೀಗೆ ಮಾಡಲು ಸಾಧ್ಯವಿರಲಿಲ್ಲ. ಶಾಲೆಗಳಲ್ಲೆಲ್ಲಾ ರಷ್ಯನ್ ಭಾಷೆಯಲ್ಲೇ ಪಾಠಗಳು ನಡೆಯಬೇಕೆಂಬ ಆಜ್ಞೆ; ರಷ್ಯದ ದೊರೆಗಳ ಚರಿತ್ರೆಯನ್ನೇ ಎಳೆಯರು ಓದಬೇಕೆಂಬ ಕಟ್ಟಾಜ್ಞೆ. ಆದರೆ ಆದಿನ ಇತಿಹಾಸದ ಅಧ್ಯಾಪಕಿ ಮೇಡಂ ಟುಪಲ್‌ಸ್ಕಳಿಗೆ ಎಂದಿಲ್ಲದ ದೇಶಾಭಿಮಾನ ಉಕ್ಕಿಬಂದು ಸರಕಾರದ ಆಜ್ಞೆಯನ್ನು ಮೂಲೆಗೊತ್ತರಿಸಿದಳು. ಮಕ್ಕಳೆಲ್ಲಾ, ತಮ್ಮ ಪೋಲೆಂಡಿನ ದೊರೆಯ ವಿಷಯವಾಗಿ ಧೀರಕಂಠದಿಂದ ಮಾತನಾಡುತ್ತಿದ್ದಾಗ ಇದ್ದಕ್ಕಿದ್ದಂತೆ, ರಷ್ಯನ್ ಇನ್‌ಸ್ಪೆಕ್ಟರ ಆಗಮನವನ್ನು ಸೂಚಿಸುವ ಗಂಟೆ ಬಾರಿಸಿತು. ಉಪಾಧ್ಯಾಯಿನಿ ಇದನ್ನು ಕೇಳಿ ಥರಥರನೆ ನಡುಗಿದಳು. ತನ್ನ ಮೇಜಿನ ಮೇಲೆ ಹರಡಿದ್ದ ಪೋಲೀಷ್ ಇತಿಹಾಸದ ಪುಸ್ತಕಗಳನ್ನೆಲ್ಲಾ ಗುಡ್ಡೆ ಮಾಡಿ ಆ ತಕ್ಷಣವೇ ಸಣ್ಣ ಮಕ್ಕಳ ಕೈಯಲ್ಲಿ ಮತ್ತೊಂದೆಡೆಗೆ ಕಳುಹಿಸಿದಳು. ಮಕ್ಕಳೆಲ್ಲಾ ನಿಶ್ಯಬ್ದರಾಗಿ ಶಿಸ್ತಿನಿಂದ ಕೂಡಿದರು. ಕೊಂಚಹೊತ್ತಿನಲ್ಲೇ ರಷ್ಯನ್ ಇನ್‌ಸ್ಪೆಕ್ಟರ್ ಆಗಿದ್ದ ಹಾರ್ನ್‌ಬರ್ಗ್ ತರಗತಿಯೊಳಗೆ ಕಾಲಿಟ್ಟನು. ಅವನು ಬರುವ ವೇಳೆಗಾಗಲೇ ವಿದ್ಯಾರ್ಥಿಗಳು ತಮ್ಮ ಅಂದಿನ ಪಾಠವಾದ ಹೊಲಿಗೆ ಕೆಲಸದಲ್ಲಿ ತಲ್ಲೀನರಾಗಿದ್ದರು. ಉಪಾಧ್ಯಾಯಿನಿಯ ಮೇಜಿನಮೇಲೆ ದಪ್ಪನಾದ ರಷ್ಯನ್ ಪುಸ್ತಕವೊಂದು ಅಣಿಯಾಗಿತ್ತು. ಆದರೂ ಅವನಿಗೆ ಅನುಮಾನ. ಉಪಾಧ್ಯಾಯಿನಿಗೆ ಅನೇಕ ಪ್ರಶ್ನೆಗಳನ್ನು ಹಾಕಿದನು. ಸರಿಯುತ್ತರವೇ ದೊರೆಯಿತು. ಮೇಜನ್ನೆಲ್ಲಾ ಹುಡುಕಾಡಿದನು. ಏನೂ ದೊರೆಯದೆ ಸುಮ್ಮನಾದನು. ಇದಾದಮೇಲೆ ವಿದ್ಯಾರ್ಥಿಗಳನ್ನು ಪರೀಕ್ಷಿಸಲು ಸಿದ್ಧನಾದನು. ಮುಂದಿನ ಸಾಲಿನಲ್ಲೇ ಕುಳಿತಿದ್ದ ಮೇನ್ಯಳನ್ನು ಕೂಗಿದನು. ಮೇನ್ಯ ಎದ್ದು ನಿಂತಳು. ರಷ್ಯನ್ ಭಾಷೆಯಲ್ಲಿ ಪ್ರಾರ್ಥನೆಯೂ ಆಯಿತು. ರಷ್ಯದ ರಾಜರ ಹೆಸರನ್ನೆಲ್ಲಾ ಕೂಡಲೆ ಒಪ್ಪಿಸಿದಳು. ಇನ್‌ಸ್ಪೆಕ್ಟರಿಗೆ ಸಂತೋಷವಾಯಿತು. ಪುಟ್ಟ ಹುಡುಗಿಯ ಸ್ಪಷ್ಟ ರಷ್ಯನ್ ಉಚ್ಚಾರಣೆ, ಜ್ಞಾಪಕ ಶಕ್ತಿ ಇವನ್ನು ಬಹುವಾಗಿ ಮೆಚ್ಚಿಕೊಂಡು, ತೃಪ್ತನಾಗಿ ಕೋಣೆಯನ್ನು ಬಿಟ್ಟು ಹೊರಗೆ ಹೊರಟನು. ಅವನು ಹೋದೊಡನೆಯೆ ಮೇಡಂ

ಟುಪಲ್‌ಸ್ಕ ಮೇನ್ಯಳನ್ನು ಅಪ್ಪಿ ಮುದ್ದಾಡಿ ಅಂದಿನ ಗೌರವವನ್ನು ಉಳಿಸಿದ್ದಕ್ಕಾಗಿ ಕೊಂಡಾಡಿದಳು. ಹೀಗೆ ಅನೇಕ ಸಂದರ್ಭಗಳಲ್ಲಿ ಅಂದಿನ ರಾಜಕೀಯ ಸನ್ನಿವೇಶಗಳ ಪರಿಚಯವೂ ಮುದ್ದು ಮೇನ್ಯಳಿಗಾಗುತ್ತಿತ್ತು. ತನ್ನ ತಾಯ್ನಾಡಿನ ದಾಸ್ಯ ಅವಳ ಮನಸ್ಸಿನಲ್ಲಿ ಅಳಿಯಲಾರದ ಅಚ್ಚನ್ನುಒತ್ತಿತ್ತು.

ಕಷ್ಟಗಳಿಗೆ ಸಿಲುಕಿದ್ದ ತಂದೆ ದೊಡ್ಡ ಸಂಸಾರವನ್ನು ನಿರ್ವಹಿಸಲು ಬಹು ಶ್ರಮಪಡಬೇಕಾಯಿತು. ದಿನೇ ದಿನೇ ತನ್ನ ಮಡದಿಯ ರೋಗ ಪ್ರಬಲಿಸುವ ಸೂಚನೆಗಳೇ ಕಂಡುಬರುತ್ತಿದ್ದವು. ತನ್ನ ಆದಾಯವನ್ನು ಹೆಚ್ಚಿಸಿಕೊಳ್ಳಲು ಮನೆಯಲ್ಲೇ ಕೆಲವು ಹುಡುಗರಿಗೆ " ಬೋರ್ಡಿಂಗ್ ಹೋಂ " ವ್ಯವಸ್ಥೆಯನ್ನು ಕೈಗೊಂಡನು. ಇವರ ಗಲಭೆ ಮನೆಯಲ್ಲಿ ವಿಪರೀತವಾಗಿ ಮೇನ್ಯಳಿಗೆ ಓದುವುದಕ್ಕೆ ವಿರಾಮವೆ ಸಿಗುತ್ತಿರಲಿಲ್ಲ. ಜೊತೆಗೆ ತಾಯಿಯ ನರಳಾಟ ಕರುಳನ್ನು ಹಿಂಡುತ್ತಿತ್ತು. ಹೀಗಿದ್ದರೂ ಮೇನ್ಯಳು ಓದಲು ಕುಳಿತಳೆಂದರೆ ಇವೆಲ್ಲಾ ಮರೆತು ಹೋಗುತ್ತಿತ್ತು. ಪಾಠ ಓದುವಾಗ ಅದರಲ್ಲೇ ತಲ್ಲೀನಳಾಗುತ್ತಿದ್ದಳು. ಅಷ್ಟು ಏಕಾಗ್ರಚಿತ್ತತೆ. ಹೀಗೆ ಓದುತ್ತಿರುವಾಗ ಒಮ್ಮೆ ಇವಳ ಅಕ್ಕಂದಿರು ಅಲುಗಾಡದೆ ಓದುತ್ತಾ ಕುಳಿತಿದ್ದ ಮೇನ್ಯಳ ಸುತ್ತ ಮನೆಯ ಕುರ್ಚಿಗಳನ್ನೆಲ್ಲಾ ಪೇರಿಸಿ ಗೋಪುರವನ್ನೇ ಕಟ್ಟಿದರು. ಅರ್ಧಗಂಟೆಯಾದರೂ ಓದುತ್ತಿದ್ದ ಮೇನ್ಯ ಅಲುಗಾಡಲೆ ಇಲ್ಲ. ತಾನಾಯಿತು ಅವಳ ಪಾಠವಾಯಿತು. ಅಕ್ಕಂದಿರ ಚೇಷ್ಟೆಯ ಅರಿವೇ ಆಗಲಿಲ್ಲ. ಪಾಠ ಮುಗಿಯಿತು. ಪುಸ್ತಕ ಮುಚ್ಚಿ ತಲೆಯೆತ್ತಿದಾಗ ಕುರ್ಚಿಯ ಗೋಪುರ ಧಡಧಡನೆ ಉರುಳಿಬಿತ್ತು. ಮೇನ್ಯ ಏನೂ ತಿಳಿಯದವಳಂತೆ ಹೊರಗೆ ಹೊರಟಳು. ಅಕ್ಕಂದಿರ ವಿನೋದದಲ್ಲಿ ಪಾಲುಗಾತಿಯಾಗಲಿಲ್ಲ.

ಕ್ಷಯರೋಗಕ್ಕೆ ತುತ್ತಾಗಿದ್ದ ಮುದ್ದಿನ ತಾಯಿ ೧೮೭೮ನೆ ಇಸವಿ ಮೇ ೯ನೆ ತಾರೀಕು ಕಾಲವಾದಳು. ಮೇನ್ಯಳ ಎಳೆಯ ಹೃದಯದ ಮೇಲೆ ಈ ಸಾವು ದೊಡ್ಡ ಬರೆಯನ್ನೇ ಹಾಕಿತು. ಕೆಲವು ವರ್ಷಗಳ ಹಿಂದೆ ತಾನೆ ಪ್ರೀತಿಯ ಅಕ್ಕನನ್ನು ಕಳೆದುಕೊಂಡಿದ್ದ ಮೇನ್ಯ ದುಃಖದಿಂದ ತತ್ತರಿಸಿ ಹೋದಳು.

ಮೇನ್ಯ, ಟುಪಲ್‌ಸ್ಕ ನಡೆಸುತ್ತಿದ್ದ ಶಾಲೆಯ ಎಲ್ಲಾ ತರಗತಿಗಳಲ್ಲೂ

ಉತ್ತಮದರ್ಜೆಯಲ್ಲೇ ಉತ್ತೀರ್ಣಗಳಾಗಿ ಸರ್ಕಾರಿ ಶಾಲೆಯೊಂದನ್ನು ಸೇರಿದಳು. ಅಲ್ಲಿನ ಅಧ್ಯಾಪಕರೆಲ್ಲಾ ಹದಿನಾರಾಣೆ ರಷ್ಯನರು. ಮುಖ್ಯಾಧಿಕಾರಿ ಮೇಯರ್‌ಳಿಗೂ, ಮೇನ್ಯಳಿಗೂ ಹೆಚ್ಚಿನದ್ವೇಷ. ತರಗತಿಯಲ್ಲಿ ಸಣ್ಣಪುಟ್ಟ ತಪ್ಪುಗಳಿಗೆಲ್ಲಾ ಮೇನ್ಯಳನ್ನು ನಿಂದಿಸುತ್ತಿದ್ದಳು. ಆಗ ನಡೆದ ರಷ್ಯಾದೊರೆಯ ಕೊಲೆಯನ್ನು ಕೇಳಿ ಸಂತೋಷಗೊಂಡು ಮೇನ್ಯಾ ತನ್ನ ಸಂಗಾತಿಗಳೊಡನೆ ತರಗತಿಯಲ್ಲೇ ಕುಣಿದಾಡಿದಳು. ಅಧ್ಯಾಪಕಿ ಮೇಯರ್‌ಳಿಗೆ ಈ ಸಂಗತಿ ತಿಳಿದು ಬಹುವಾಗಿ ಶಿಕ್ಷಿಸಿದಳು. ಈ ಸರ್ಕಾರಿಶಾಲೆಯಲ್ಲಿ ಪೋಲೀಷ್ ಹುಡುಗಿಯರ ಜೊತೆಗೆ ಇತರ ದೇಶದ ಹುಡುಗಿಯರೂ ಓದುತ್ತಿದ್ದರು. ತರಗತಿಯ ಒಳಗಡೆ ಮಾತ್ರ ಎಲ್ಲಾ ಹುಡುಗಿಯರೂ ಒಂದೇ. ಹೊರಗೆ ಬಂದ ಕೂಡಲೇ ಪೋಲೀಷ್ ಹುಡುಗಿಯರು ಮಾತ್ರ ತಮ್ಮದೇ ಆದ ಒಂದು ಗುಂಪನ್ನು ಕಟ್ಟಿ ಮನೆಗೆ ಹೋಗುವ ವಾಡಿಕೆ. ರಷ್ಯನ್ ಹುಡುಗಿಯರನ್ನು ಕಂಡರಂತೂ ಇವರಿಗೆ ಬದ್ಧದ್ವೇಷ. ರಷ್ಯನ್ ಉಪಾಧ್ಯಾಯರನ್ನು ಕಂಡರೆ ಗೇಲಿ. ಮನೆಯ ದಾರಿಯಲ್ಲಿದ್ದ ಸ್ಯಾಕ್ಸನಿ ಚೌಕದಲ್ಲಿ ರಷ್ಯಾ ರಾಜನಿಷ್ಠರಾಗಿ ದಂಗೆಯಲ್ಲಿ ಮಡಿದ ಪೋಲೆಂಡಿನ ಜನರ ಸ್ಮಾರಕವೊಂದಿತ್ತು. ಮೇನ್ಯಾಳ ಗುಂಪಿನ ಹುಡುಗಿಯರು ಪ್ರತಿದಿನವೂ ಈ ಸ್ಮಾರಕದ ಮೇಲೆ ಮನಸ್ಸಿನ ದ್ವೇಷವನ್ನೆಲ್ಲಾ ಒಟ್ಟುಗೂಡಿಸಿಕೊಂಡು ಉಗುಳುತ್ತಿದ್ದರು. ಮರೆತು ಮುಂದೆ ಹೋದರೆ, ಹಿಂತಿರುಗಿ ಬಂದಾದರೂ ಉಗುಳಿ ಹೋಗುತ್ತಿದ್ದರು.

ರಷ್ಯನರ ವಿಚಾರದಲ್ಲಿ ಮೇನ್ಯಳಿಗೆ ಇಷ್ಟು ಹೆಚ್ಚಿನ ದ್ವೇಷವಿದ್ದರೂ ಅವರು ಬೋಧಿಸುತ್ತಿದ್ದ ಪಾಠಗಳಲ್ಲಿ, ವಿಷಯಗಳಲ್ಲಿ ಅಗಾಧವಾದ ಆಸಕ್ತಿ. ಶಾಲೆಯನ್ನು ಕಂಡರೆ ಅಪಾರವಾದ ಪ್ರೀತಿ. ಅನೇಕ ವೇಳೆ ತನ್ನ ಸಂಕುಚಿತ ಭಾವನೆಗಳಿಗೆ ತಾನೇ ನಾಚುತ್ತಿದ್ದಳು. ಈ ರಷ್ಯನ್ ಶಾಲೆಯಲ್ಲಿ ಮೇನ್ಯಳ ಓದು ಮುಗಿಯುತ್ತಾ ಬಂತು. ಕೊನೆಯ ತರಗತಿಯ ಪರೀಕ್ಷೆಯಲ್ಲಿ ಶ್ರೇಷ್ಠದರ್ಜೆಯಲ್ಲಿ ಉತ್ತೀರ್ಣಳಾಗಿ ಚಿನ್ನದ ಪದಕವನ್ನು ಬಹುಮಾನವಾಗಿ ಪಡೆದಳು. ಇದಾದಮೇಲೆ ತಂದೆಯ ಅಭಿಲಾಷೆಯಂತೆ ತನ್ನ ನೆಂಟರಿದ್ದ ಹಳ್ಳಿಗೆ ಹೋಗಿ ಕೆಲವು ಕಾಲ ವಿಶ್ರಾಂತಿಯನ್ನು ಪಡೆದಳು. ಶರೀರದ ಆರೋಗ್ಯವೂ ಬಹುಮಟ್ಟಿಗೆ ಸುಧಾರಿಸಿತು.

ಅಲ್ಲಿಂದ ವಾರ್ಸಾವಿಗೆ ಹಿಂತಿರುಗಿದಳು. ಸುಮ್ಮನೆ ಕುಳಿತು ಕಾಲ ಹರಣ ಮಾಡಲು ಮನಸ್ಸು ಒಪ್ಪದೆ ಸಂಸಾರದ ನಿರ್ವಹಣೆಗೆ ದುಡಿಯಲು ಪ್ರಾರಂಭಿಸಿದಳು. ಸದ್ಯದಲ್ಲೇ ತಂದೆಯೂ ಕೆಲಸದಿಂದ ವಿಶ್ರಾಂತನಾಗುವುದರಲ್ಲಿದ್ದನು. ಮನೆಯ ಹಣಕಾಸಿನ ಸ್ಥಿತಿಯು ಅಷ್ಟು ಸಮರ್ಪಕವಾಗಿರಲಿಲ್ಲ. ಅಣ್ಣ ಜೋಸೆಫ್ ವೈದ್ಯಕೀಯ ಪರೀಕ್ಷೆಗೆ ಓದುತ್ತಿದ್ದನು. ಮೇನ್ಯಾ ಮನೆಗಳಿಗೆ ಹೋಗಿ ಪಾಠ ಹೇಳಿಕೊಡುವ ಉದ್ಯೋಗವನ್ನು ಪ್ರಾರಂಭಿಸಿದಳು. ಆದಾಯ ಅಷ್ಟೇನೂ ಕೈತುಂಬುತ್ತಿರಲಿಲ್ಲ. ಇದು ಸಾಲದೆ ಕೆಲವು ಮನೆಗಳಲ್ಲಿ ಬಹು ಹೊತ್ತು ಕಾಯಿಸಿ ಕಾಲವನ್ನು ವೃಥಾ ಕಳೆಯುತ್ತಿದ್ದರು. ಇನ್ನು ಕೆಲವು ಕಡೆ ಹಣವಂತರ ಮನೆಗಳಲ್ಲಿ ಇವಳನ್ನು ಕಂಡರೆ ಅಶ್ರದ್ಧೆ. ಸಾಲದುದಕ್ಕೆ ದಡ್ಡರಾದ ಹುಡುಗರು. ಈ ಎಲ್ಲಾ ಕಟುವಾದ ಅನುಭವಗಳನ್ನು ಮೇನ್ಯಾ ಕಂಡುಕೊಳ್ಳಬೇಕಾಯಿತು.

ಇವಳಂತೆ ಅಕ್ಕ ಬ್ರೋನ್ಯಳೂ ಸಹ ಉಪಾಧ್ಯಾಯಳಾಗಿ ಅಲ್ಪಸ್ವಲ್ಪ ಸಂಪಾದಿಸುತ್ತಿದ್ದಳು. ಪ್ಯಾರಿಸ್ ಪಟ್ಟಣಕ್ಕೆ ಹೋಗಿ ಪದವೀಧರಳಾಗಬೇಕೆಂಬ ಆಸೆ ಅವಳಲ್ಲಿ ಬಲವಾಗಿ ಬೇರೂರಿತ್ತು. ಆದರೆ ತನ್ನ ಆಸೆ ಕೈಗೂಡಲು ಹಣವಿರದ ಕೊರತೆ ಅವಳನ್ನು ಕೊರೆಯುತ್ತಿತ್ತು. ಇದರ ವಾಸನೆಯನ್ನು ಕಂಡುಕೊಂಡ ತಂಗಿ ಮೇನ್ಯಾ ತಾನು 'ಗವರ್ನೆಸ್' ಆಗಿ ದುಡಿದು ಅಕ್ಕನ ವಿದ್ಯಾರ್ಜನೆಗೆ ಹಣ ಒದಗಿಸುವುದಾಗಿ ಹೇಳಿದಳು. ಅಲ್ಲದೆ ಅಕ್ಕ ವೈದ್ಯಳಾದ ಮೇಲೆ ಇದೇ ರೀತಿ ತನ್ನ ವಿದ್ಯಾರ್ಜನೆಗೂ ಸಹಾಯ ಮಾಡಬೇಕೆಂದಳು. ಇದನ್ನು ಕೇಳಿ, ತಂಗಿಯ ಅಪಾರ ತ್ಯಾಗವನ್ನು ನೆನೆದು ಬ್ರೋನ್ಯಳ ಕಣ್ಣಿನಲ್ಲಿ ನೀರು ಧಾರಾಕಾರವಾಗಿ ಸುರಿದು ಬಂತು. ಮುದ್ದಿನ ತಂಗಿಯನ್ನು ಅಪ್ಪಿಕೊಂಡಳು.

ಆದರೆ ಬ್ರೋನ್ಯಳ ಈ ಏರ್ಪಾಡಿಗೆ ಕೂಡಲೇ ಒಪ್ಪದೆ ತನಗಿಂತ ತಂಗಿಯೇ ಬುದ್ಧಿಶಾಲಿಯೆಂದೂ, ಅವಳೇ ಮೊದಲು ಓದಬೇಕೆಂದೂ ಪ್ರತಿಸಲಹೆಮಾಡಿದಳು. ಅದಕ್ಕೆ ಮೇನ್ಯಾ ದೊಡ್ಡವಳಾದ ಅಕ್ಕನೇ ಮೊದಲು ಓದಬೇಕೆಂದು ವಾದಿಸಿ, ಕೊನೆಗೆ ಅಕ್ಕನನ್ನು ಒಪ್ಪಿಸಿದಳು. ಬ್ರೋನ್ಯ ಪ್ಯಾರಿಸ್ಸಿಗೆ ಹೋಗುವ ದಿನವೂ ನಿರ್ಧಾರವಾಯಿತು. ಮೇನ್ಯಾ ಅಕ್ಕನಿಗಾಗಿ ತನ್ನ ಹಂಬಲವನ್ನೆಲ್ಲಾ ಅಡಗಿಸಿ'ಗವರ್ನೆಸ್' ಆಗಿ ಕೆಲಸಮಾಡಲು ಮನೆ ಬಿಟ್ಟಳು.

ವಾರ್ಸಾ ಪಟ್ಟಣದಲ್ಲಿದ್ದ ವಕೀಲನ ಮನೆಯಲ್ಲಿ ಊಳಿಗಕ್ಕೆ ಸೇರಿದುದೂ ಆಯಿತು. ಆ ಮನೆಯವರು ಶ್ರೀಮಂತರಾದರೂ ಕೀಳು ಸ್ವಭಾವದವರು. ಆದುದರಿಂದ ಬೇಗನೆ ಆ ಕೆಲಸವನ್ನು ಬಿಡಬೇಕಾಯಿತು. ವಾರ್ಸಾವಿನಲ್ಲಿ ಬೇರೆ ಸರಿಯಾದ ಕೆಲಸ ದೊರೆಯದೆ ಮುದುಕ ತಂದೆಯನ್ನು ಬಿಟ್ಟು ಹಳ್ಳಿಯಲ್ಲಿ ನೆಲಸಿದ್ದ ಶ್ರೀಮಂತರ ಮನೆಯ ಕೆಲಸಕ್ಕಾಗಿ ಹೊರಟಳು. ಈ ಮನೆಯವರು ತುಂಬ ಒಳ್ಳೆಯವರು. ಕ್ರಮೇಣ ಹಿರಿಯ ಹುಡುಗಿ ಬ್ರೊಂಕಾ ಮತ್ತು ಮೇನ್ಯಾ ಅಚ್ಚುಮೆಚ್ಚಿನ ಓರಗೆಯವರಾದರು. ಸದಾ ಒಟ್ಟಿಗೇ ಇರುತ್ತಿದ್ದರು. ಇವರಿಬ್ಬರೂ ಸೇರಿ ತಮ್ಮ ವಿರಾಮದ ವೇಳೆಯಲ್ಲಿ ಹಳ್ಳಿಯಲ್ಲಿ ಅವಿದ್ಯಾವಂತ ಹುಡುಗರಿಗೆ ತಮ್ಮ ಮಾತೃಭಾಷೆಯನ್ನು ಓದಲು ಮತ್ತು ಬರೆಯಲು ಕಲಿಸಿಕೊಟ್ಟರು. ರಷ್ಯನ್ ಸರ್ಕಾರಕ್ಕೆ ಈ ಸುದ್ದಿ ತಿಳಿದಿದ್ದರೆ ಮೇನ್ಯಾ ಸೈಬೀರಿಯಾದ ಶೀತಪ್ರದೇಶಗಳಿಗೆ ಸೆರೆಯಾಳಾಗಿ ಗಡಿಪಾರಾಗುತ್ತಿದ್ದಳು! ಈ ಶಿಕ್ಷೆಯನ್ನು ಲೆಕ್ಕಿಸದಷ್ಟು ದೇಶಾಭಿಮಾನ ಮೇನ್ಯಳಿಗೆ.

ಈ ಮನೆಯಲ್ಲೂ ಬಹಳ ಕಾರ್ಯವಿರುತ್ತಿತ್ತು. ಕೆಲಸಮಾಡುವಾಗ ಅನೇಕ ಬಾರಿ ತನ್ನ ಮುದಿ ತಂದೆಯ ನೆನಪಾಗುವುದು. ಒಮ್ಮೊಮ್ಮೆ ದೂರದ ಪ್ಯಾರಿಸ್ ಪಟ್ಟಣದಲ್ಲಿ ಓದುತ್ತಿದ್ದ ಅಕ್ಕನ ಜ್ಞಾಪಕವಾಗುವುದು. ತನ್ನ ಓರಗೆಯ ಇತರರು ವಿಶ್ವವಿದ್ಯಾನಿಲಯಗಳಲ್ಲಿ ಓದುತ್ತಿರುವುದರ ಅರಿವಾದಾಗ ಹೃದಯದ ಕಳವಳ ಹೆಚ್ಚುತ್ತಿತ್ತು. ಹೀಗೆ ಒತ್ತಿಬರುತ್ತಿದ್ದ ಹಲವಾರು ಚಿಂತೆಗಳಿಂದ ಮೇನ್ಯ ಕುಸಿದು ಕುಗ್ಗುತ್ತಿದ್ದಳು. ಆದರೂ ಕಷ್ಟಗಳಲ್ಲಿ ತೊಳಲುತ್ತಾ ಅಭ್ಯಸಿಸುತ್ತಿದ್ದ ಸಹೋದರಿಗೆ ನೆರವಾಗಲೆಂಬ ಉದ್ದಿಶ್ಯದಿಂದ ಈ ಎಲ್ಲಾ ತೊಳಲಾಟವನ್ನು ಸಾಧ್ಯವಾದಷ್ಟು ಮರೆಯುತ್ತಿದ್ದಳು. ಆಗಾಗ್ಗೆ ಅಕ್ಕ ಬ್ರೋನ್ಯಳಿಗೆ, ಅಣ್ಣ ಜೋಸೆಫನಿಗೆ ಬರೆದ ಕಾಗದಗಳಲ್ಲಿ ತನ್ನ ದುಃಖವನ್ನು ತೋಡಿಕೊಂಡು ಭಾರವಾದ ಮನಸ್ಸನ್ನು ಹಗುರಮಾಡಿಕೊಳ್ಳುತ್ತಿದ್ದಳು. ವಿರಾಮ ದೊರೆತವೇಳೆಯಲ್ಲಿ ಗಣಿತ, ಭೌತ, ರಸಾಯನ ವಿಜ್ಞಾನಕ್ಕೆ ಸಂಬಂಧಿಸಿದ ಕೃತಿಗಳನ್ನು ಓದಿ ಮನನಮಾಡಿಕೊಳ್ಳುತ್ತಿದ್ದಳು. ಓದುವಾಗ ಕಂಡುಬರುವ ತೊಡಕುಗಳನ್ನು ತಂದೆಗೆ ಬರೆದು ಪರಿಹಾರ ಮಾಡಿಕೊಳ್ಳುತ್ತಿದ್ದಳು. ಈ ಕಾಲದಲ್ಲೇ ಕೈಗೆ ಸಿಕ್ಕಿದ ಅನೇಕ ಗ್ರಂಥಗಳನ್ನು ಓದಿ ಜ್ಞಾನಾರ್ಜನೆ ಮಾಡಿದಳು. ಗಣಿತ ಮತ್ತು

ಭೌತ ವಿಜ್ಞಾನದ ಪುಸ್ತಕಗಳ ಮೇಲೆ ಇವಳಿಗೆ ಹೆಚ್ಚಿನ ಮಮತೆ.

ಈ ಹಳ್ಳಿಯಲ್ಲಿ ಸುಮಾರು ಮೂರುವರ್ಷ 'ಗವರ್ನೆಸ್' ಕೆಲಸವನ್ನು ಮಾಡಿ, ವಾರ್ಸಾವಿನಲ್ಲಿದ್ದ ತಂದೆಯ ಬಳಿಗೆ ಹಿಂದಿರುಗಿದಳು. ಈ ವೇಳೆಗೆ ವಿಶ್ರಾಂತನಾಗಿದ್ದ ತಂದೆ ಖಾಸಗಿ ಶಾಲೆಯೊಂದರಲ್ಲಿ ಮತ್ತೆ ಕೆಲಸಕ್ಕೆ ಸೇರಿದ್ದನು. ಅಕ್ಕನ ವಿದ್ಯೆಯೂ ಕೊನೆಮುಟ್ಟುವುದರಲ್ಲಿತ್ತು. ಅವಳಂತೆಯೆ ವೈದ್ಯಕೀಯ ಪರೀಕ್ಷೆಗೆ ಓದುತ್ತಿದ್ದ ಕ್ಯಾಸಿಮಿರ್‌ಡ್ಲುಸ್ಕಿ ಎಂಬ ಯುವಕನೊಡನೆ ಅವಳ ವಿವಾಹವೂ ಗೊತ್ತಾಗಿ, ಅವಳ ಸ್ಥಿತಿ ಹೆಚ್ಚು ಅನುಕೂಲವಾಯಿತು. ಹೀಗೆ ಸುಧಾರಿತ ಸ್ಥಿತಿಯಲ್ಲಿದ್ದ ಅಕ್ಕ ಬ್ರೋನ್ಯ, ತಂಗಿ ಪ್ಯಾರಿಸ್ಸಿಗೆ ಬಂದು ತನ್ನ ಮನೆಯಲ್ಲಿಯೇ ಇದ್ದು ವಿದ್ಯೆಯನ್ನು ಮುಂದುವರಿಸಬಹುದೆಂದು ಕಾಗದ ಬರೆದಳು. ಮೇನ್ಯ ತನ್ನ ಧ್ಯೇಯ ಕೈಗೂಡುವ ಈ ಸಂದರ್ಭವನ್ನು ನೆನೆದು ಆನಂದದಿಂದ ಕುಣಿದಾಡಿದಳು. ಪ್ಯಾರಿಸ್ ನಗರವನ್ನು ತಲುಪಿ ಅಕ್ಕನ ಮನೆಯನ್ನು ಸೇರಿದಳು. ಅಕ್ಕನಿಗೆ ಆಗ ಉಕ್ತಿ ಹೊರಡದೆ, ಆನಂದದ ಪ್ರತೀಕವಾಗಿ ಬಾಷ್ಪಗಳು ಸುರಿದವು. ತೀರ ಅಪರಿಚಿತನಾದ ಭಾವ ಕ್ಯಾಸಿಮಿರ್ ಡ್ಲುಸ್ಕಿ ಸಹ ನಾದಿನಿಯನ್ನು ಬಹು ವಿಶ್ವಾಸದಿಂದ ಕಾಣುತ್ತಿದ್ದನು.

ಬಂದ ಸ್ವಲ್ಪದಿನಗಳಲ್ಲೇ ಮೇನ್ಯಾ, ಪ್ಯಾರಿಸ್ ನಗರದ ಸಾರ್ಬನ್ ವಿಶ್ವವಿದ್ಯಾನಿಲಯವನ್ನು ಸೇರಿದಳು. ಆಗ ಫ್ರೆಂಚ್ ಪದ್ಧತಿಗನುಗುಣವಾಗಿ ತನ್ನ ಹೆಸರನ್ನು ಮೇರಿಸ್ಕ್ಲೊಡೋವ್‌ಸ್ಕಿ ಎಂದು ಬದಲಾಯಿಸಿಕೊಂಡಳು. ಕಾಲೇಜಿನಲ್ಲಿ ಇವಳಿಗೆ ಬಹಳ ಸ್ನೇಹಿತರಿರಲಿಲ್ಲ. ಅವಳೂ ಸಹ ಇತರ ವಿದ್ಯಾರ್ಥಿಗಳೊಡನೆ ಅಷ್ಟಾಗಿ ಬೆರೆಯುತ್ತಿರಲಿಲ್ಲ. ಭೌತ ವಿಜ್ಞಾನದ ಪಾಠಗಳೆಂದರೆ ಮೇರಿಗೆ ಬಹಳ ಮೆಚ್ಚು. ತರಗತಿಯಲ್ಲಿ ಎಂದೂ ಮೊದಲನೆಯ ಸಾಲಿನಲ್ಲಿ ಕೂಡುತ್ತಿದ್ದ ಈ ಬಡಹುಡುಗಿಯನ್ನು ಅನೇಕ ವಿದ್ಯಾರ್ಥಿಗಳು ಕುತೂಹಲ ದೃಷ್ಟಿಯಿಂದ ನೋಡುತ್ತಿದ್ದುದುಂಟು.

ಆಗ ಮೇರಿಯ ದೃಷ್ಟಿಯೆಲ್ಲಾ ಪಾಠಗಳಲ್ಲಿ, ಪಾಠಗಳನ್ನು ಬೋಧಿಸುತ್ತಿದ್ದ ಅಧ್ಯಾಪಕರಲ್ಲಿ ನೆಟ್ಟುಹೋಗುತ್ತಿತ್ತು. ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾದ ಲಿಪ್‌ಮನ್ ಮತ್ತು ಪಾಲ್‌ಅಪೆಲ್‌ರ ಪಾಠಗಳೆಂದರೆ ಮೇರಿಗೆ

ಬಹು ಇಷ್ಟ. ಪಾಲ್ ಅಪೆಲ್ ಬಹು ವಿಖ್ಯಾತನಾದ ಗಣಿತ ವಿಜ್ಞಾನಿ. ಅವನ ಭಾಷಣವನ್ನು ಕೇಳುವುದೆಂದರೆ ಮೇನ್ಯಳಿಗೆ ಎಲ್ಲಿಲ್ಲದ ಉತ್ಸಾಹ ಕ್ರಮೇಣ ಭೌತವಿಜ್ಞಾನವೆಂದರೆ ಇವಳಿಗೆ ಪಂಚಪ್ರಾಣವಾಯಿತು.

ದಿನಕಳೆದಂತೆ ತನ್ನ ತರಗತಿಯ ಅನೇಕ ವಿದ್ಯಾರ್ಥಿಗಳ ಪರಿಚಯವೂ ಆಯಿತು. ಇಲ್ಲೂ ಸಹ ಪೋಲಿಷ್ ವಿದ್ಯಾರ್ಥಿಗಳದೇ ಒಂದು ಸಂಘವಾಯಿತು. ಅನೇಕ ಬಾರಿ ಈ ತಂಡದವರು ಅಭಿನಯಿಸುತ್ತಿದ್ದ ಪೋಲಿಷ್ ನಾಟಕಗಳಲ್ಲಿ ಮೇರಿ ಹಲವಾರು ಪಾತ್ರಗಳನ್ನು ವಹಿಸುತ್ತಿದ್ದಳು. ಈ ಸುದ್ದಿ ತನ್ನ ತಂದೆಯ ಕಿವಿಯನ್ನು ಮುಟ್ಟಿ, ಆತ ಇನ್ನು ಮುಂದೆ ಮೇರಿ ಈ ಹವ್ಯಾಸಗಳನ್ನೆಲ್ಲಾ ಬದಿಗಿಟ್ಟು ಹೆಚ್ಚು ಶ್ರದ್ಧೆಯಿಂದ ವಿದ್ಯಾರ್ಜನೆ ಮಾಡಬೇಕಾಗಿ ಮೇರಿಗೆ ಕಾಗದ ಬರೆದನು. ಮೇರಿಯು ಸಹ ತನ್ನ ತಪ್ಪನ್ನು ಕಂಡುಕೊಂಡು ತನ್ನ ನಡವಳಿಕೆಯನ್ನು ತಿದ್ದಿಕೊಂಡಳು. ಓದಿನ ಕಡೆ ಗಮನ ಹೆಚ್ಚಾಯಿತು.

ಅಕ್ಕನ ಮನೆಯಲ್ಲಿ ತನಗೆ ಸೌಲಭ್ಯ ದೊರೆತಿದ್ದರೂ, ಅವಳ ವ್ಯಾಸಂಗಕ್ಕೆ ಅಷ್ಟು ಅನುಕೂಲವಾದ ವಾತಾವರಣವಿರಲಿಲ್ಲ. ವಿನೋದ ಪ್ರಿಯನಾದ ಭಾವನ ಹಾವಳಿ, ಮನೆಗೆ ಬಂದು ಹೋಗುತ್ತಿದ್ದ ಅಸಂಖ್ಯಾತ ರೋಗಿಗಳ ಗಲಭೆ, ಸಾಲದುದಕ್ಕೆ ದಿನವೂ ದೂರದಲ್ಲಿದ್ದ ಕಾಲೇಜನ್ನು ತಲಪುವುದಕ್ಕೆ ಹೆಚ್ಚಿನ ಹಣವೂ ವ್ಯಯವಾಗುತ್ತಿತ್ತು. ಇವನ್ನೆಲ್ಲಾ ತಪ್ಪಿಸಲು ಮೇರಿ ಕಾಲೇಜಿಗೆ ಅತಿ ಸನಿಹದಲ್ಲಿದ್ದ " ಲ್ಯಾಟಿನ್ ಕ್ವಾರ್ಟರ್ಸ್ "ನಲ್ಲಿ ವಾಸಿಸಬೇಕೇಂದು ನಿರ್ಧರಿಸಿಕೊಂಡಳು. ಈ ಸಂಗತಿ ಅಕ್ಕ ಭಾವನಿಗೆ ತಿಳಿದಾಗ ಅವರು ಸಮ್ಮತಿಸಲಿಲ್ಲ. ಕೊನೆಗೂ ಮೇರಿಯೇ ಗೆದ್ದಳು. ಅಕ್ಕ–ಭಾವ, ಮೇರಿಯನ್ನು ಹೊಸ ನಿವಾಸಕ್ಕೆ ಮುಟ್ಟಿಸಿಯೂ ಬಂದರು.

ಮೇರಿ ಈ ವಿದ್ಯಾರ್ಥಿನಿಲಯದಲ್ಲಿ ಸುಮಾರು ಮೂರು ವರ್ಷಗಳ ಕಾಲ ತಂಗಿದ್ದಳು. ಕೇವಲ ನಲವತ್ತು ರೂಬಲ್‌ಗಳಲ್ಲೇ ಬಹುಕಷ್ಟಪಟ್ಟು ವ್ಯಾಸಂಗ ಮಾಡುತ್ತಿದ್ದಳು. ಈ ವಿದ್ಯಾರ್ಥಿನಿಲಯ ಆರು ಅಂತಸ್ತಿನ ಭವ್ಯವಾದ ಹರ್ಮ್ಯ. ಇದರ ಕೊನೆಯ ಅಂತಸ್ತಿನಲ್ಲಿದ್ದ—ಯಾರಿಗೂ ಬೇಡವಾಗಿದ್ದ ಸಣ್ಣ ಕೋಣೆಯೊಂದನ್ನು ಕಡಿಮೆ ಬಾಡಿಗೆಗೆ ಆರಿಸಿ

ಕೊಂಡಳು. ಪ್ಯಾರಿಸ್ಸಿನಲ್ಲಿ ಚಳಿ ಸ್ವಲ್ಪ ಹೆಚ್ಚು. ಈ ಕೊಠಡಿಯಲ್ಲಿ ಬೆಂಕಿ ಉರಿಸಿ, ಶಾಖ ಪಡೆಯಲೂ ಜಾಗವಿರಲಿಲ್ಲ. ಹೀಗಾದರೂ ಚಳಿಯನ್ನು ಲೆಕ್ಕಕ್ಕೆ ತೆಗೆದುಕೊಳ್ಳಲಿಲ್ಲ. ನೀರಿನ ಅನುಕೂಲವೂ ಇಲ್ಲ. ಅಲ್ಲದೆ ಕಾಲೇಜಿಗೆ ಪ್ರತಿದಿನವೂ ನಡೆದೇ ಹೋಗುತ್ತಿದ್ದಳು. ಇದರಿಂದ ಬಸ್ಸಿಗೆ ಕೊಡುತ್ತಿದ್ದ ಹಣವೂ ಮಿಕ್ಕುತ್ತಿತ್ತು. ಆಹಾರದಲ್ಲೂ ಬಹಳ ಮಿತಿ; ಅನೇಕ ಸಲ ಕೇವಲ ರೊಟ್ಟಿ ಮತ್ತು ಟೀಯಲ್ಲಿಯೇ ತೃಪ್ತಿಪಡಬೇಕಾಗಿತ್ತು. ಸ್ವಭಾವತಃ ಸೊಗಸುಗಾತಿಯಲ್ಲದ ಮೇರಿ, ವಾರ್ಸಾದಿಂದ ತಂದಿದ್ದ ಒರಟು ಹತ್ತಿಯ ಬಟ್ಟೆಗಳನ್ನೇ ಉಡುತ್ತಿದ್ದಳು. ಮಧ್ಯರಾತ್ರಿಯಾದರೂ ಅನೇಕ ಸಲ ಪುಸ್ತಕ ಭಂಡಾರ ಅಥವ ತನ್ನ ಕಿರುಕೋಣೆಯ ದೀಪದ ಬಳಿ ಓದುತ್ತಲೇ ಕುಳಿತುಕೊಳ್ಳುತ್ತಿದ್ದಳು.

ಹೀಗೆ ಕಷ್ಟಪಟ್ಟು ವಿದ್ಯಾರ್ಜನೆ ಸಾಗಿಸಿದ ಮೇರಿ, ೧೮೯೩ ರಲ್ಲಿ ಭೌತವಿಜ್ಞಾನ ಮತ್ತು ಅದರ ಮೂರನೆಯ ವರ್ಷ, ಗಣಿತ ವಿಜ್ಞಾನದಲ್ಲಿ ಉನ್ನತವಾದ ಮಾಸ್ಟರ್ ಪದವಿಯನ್ನು ಸಂಪಾದಿಸಿದಳು. ಇದನ್ನು ಕೇಳಿದ ಮುದಿ ತಂದೆ, ಅಕ್ಕ–ಭಾವರಿಗೆ ಆದ ಸಂತೋಷ ಅಷ್ಟಿಷ್ಟಲ್ಲ. ಆದರೆ ಅವಿಶ್ರಾಂತವಾದ ಓದಿನಿಂದಲೂ, ಸರಿಯಾದ ದೇಹಪೋಷಣೆ ಆರೈಕೆಯಿಲ್ಲದೆಯೂ ಸೊರಗಿ ಕೃಶಾಂಗಿಯಾಗಿದ್ದ ಮೇರಿಯನ್ನು ಕಂಡು ಬಹುವಾಗಿ ಮರುಗಿದರು. ಅನೇಕವೇಳೆ ನಿಶ್ಶಕ್ತಿಯಿಂದ ಜ್ಞಾನಶೂನ್ಯಳಾದುದೂ ಉಂಟು; ಇಷ್ಟಾದರೂ ಓದಿನ ಬಗ್ಗೆ ತನಗಿದ್ದ ಅಪಾರ ಶ್ರದ್ಧೆ ಕುಗ್ಗಿರಲಿಲ್ಲ. ಭಾವ ಕ್ಯಾಸಿಮಿರ್ ಇದನ್ನು ತಿಳಿದು, "ಲ್ಯಾಟಿನ್ ಕ್ವಾರ್ಟರ್ಸ್" ಗೆ ಧಾವಿಸಿ, ಮೇರಿಯ ಮೇಲೆ ರೇಗಾಡಿ, ಅವಳನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಚೆನ್ನಾಗಿ ಆರೈಕೆ ಮಾಡಿದ ನಂತರ, ವಾಪಸು ಕಳುಹಿಸಿದನು.

ಓದಿನ ಜೊತೆಗೆ ಮೇರಿ ಪ್ರಯೋಗ ಶಾಲೆಯಲ್ಲಿ, ತನ್ನ ಪ್ರಾಧ್ಯಾಪಕರೊಡನೆ ಅನೇಕ ಸಂಶೋಧನೆಗಳನ್ನೂ, ಪ್ರಯೋಗಗಳನ್ನೂ ಮಾಡಲು ಪ್ರಾರಂಭಿಸಿದಳು; ಉತ್ತಮ ಪ್ರಯೋಗಗಳನ್ನು ನಡೆಸಿ ಕೀರ್ತಿಯನ್ನು ಸಂಪಾದಿಸಿದಳು. ಆ ವರ್ಷದ ಪರೀಕ್ಷೆಯಲ್ಲೂ ಸಹ ಮೊದಲನೆಯವಳಾಗಿ ಉತ್ತೀರ್ಣಳಾದಳು. ಈ ಆನಂದದಲ್ಲಿ, ತನ್ನ ಊರಿಗೆ ಹೋಗಿ ಮೂರು

ತಿಂಗಳುಗಳ ಕಾಲವನ್ನು ಅಕ್ಕ, ಅಣ್ಣ ಮತ್ತು ಮುದಿ ತಂದೆಯೊಡನೆ ಕಳೆದಳು.

ಬರಬರುತ್ತ ಸಂಸಾರದ ಸ್ಥಿತಿ ಅಷ್ಟಾಗಿ ಸುಧಾರಿತವಾಗಿರಲಿಲ್ಲ; ಹಣ-ಕಾಸಿನ ಮುಗ್ಗಟ್ಟು ಎಂದಿನಂತೆಯೇ ಇತ್ತು. ಮುಂದಿನ ವಿದ್ಯೆಯು ನಿಂತು ಹೋಗುವುದೋ, ಏನೋ ಎಂಬ ಶಂಕೆಯೂ ಮೂಡಿತು. ಆಗ ಅನಿರೀಕ್ಷಿತ-ವಾಗಿ, ಡ್ರೈಡಿನ್‌ಸ್ಕಿ ಎಂಬ ವಿದ್ವಾಂಸಳು ಈಕೆಯ ಪ್ರತಿಭೆಗನುಗುಣವಾಗಿದ್ದ ಭವ್ಯವಾದ ಭವಿಷ್ಯವನ್ನು ಮನಗಂಡು, ಅಲೆಕ್ಸಾಂಡ್ರಾವಿಚ್ ವೇತನವನ್ನು ದೊರಕಿಸಿಕೊಟ್ಟಳು. ಮುಂದೆ ತಾನು ಸಂಪಾದಿಸಲು ಪ್ರಾರಂಭಿಸಿದ ಕೂಡಲೇ ಮೇರಿ ಈ ವೇತನದ ಆರುನೂರು ರೂಬೇಲ್‌ಗಳನ್ನು ಕೂಡಿಟ್ಟು ಮತ್ತೊಬ್ಬ ಬಡ ವಿದ್ಯಾರ್ಥಿನಿಗೆ ಸಹಾಯವಾಗಲೆಂದು ವಾಪಸು ಕಳುಹಿಸಿ-ದಳು; ಈ ಕಾರ್ಯವನ್ನು ಎಲ್ಲರೂ ಬಹುವಾಗಿ ಶ್ಲಾಘಿಸಿದರು.

ಮೇರಿಯ ಸಂಶೋಧನೆಗಳು ಬಹು ಒಪ್ಪವಾದ ರೀತಿಯಲ್ಲಿ ಮುಂದು-ವರೆಯುತ್ತಿದ್ದವು. ಮೇರಿಯ ಈ ಪ್ರತಿಭೆಗೆ ಅನೇಕ ಪ್ರಾಧ್ಯಾಪಕರು ಅಚ್ಚರಿಗೊಂಡಿದ್ದರು. ಮೇರಿಯೂ ಸಹ, ತಾನು, ಮೇಧಾವಿಗಳಾದ, ಜಗತ್ಪ್ರಖ್ಯಾತರಾದ ಅನೇಕ ವಿಜ್ಞಾನಿಗಳ ಶ್ರೇಣಿಯನ್ನು ಸೇರುವ ಭವಿ-ಷ್ಯದ ವಿಷಯದಲ್ಲಿ ಬಹು ದೃಢಮನಸ್ಕಳಾಗಿದ್ದಳು. ವಯೋಧರ್ಮಕ್ಕನುಗುಣವಾದ ಮದುವೆ, ಪ್ರೇಮಗಳೆಂದರೆ ಆಗ ಮೇರಿಗೆ ಅಷ್ಟಾಗಿ ಹಿಡಿಸುತ್ತಿರಲಿಲ್ಲ. ಅವಳ ಗುರಿಯೆಲ್ಲಾ ವಿಜ್ಞಾನ; ಅದರಲ್ಲೂ ತನಗೆ ಅತ್ಯಂತಪ್ರಿಯ-ವಾಗಿದ್ದ ಭೌತ ಮತ್ತು ಗಣಿತ ವಿಜ್ಞಾನಗಳಲ್ಲಿ. ಇಂತಹ ಸಮಯದಲ್ಲಿ ವಿಖ್ಯಾತ ವಿಜ್ಞಾನಿಯಾದ ಪಿಯರ್ ಕ್ಯೂರಿಯ ಪರಿಚಯವಾಯಿತು.

ಪಿಯರ್ ಕ್ಯೂರಿ, ಫ್ರಾನ್ಸಿನ ಹೆಸರಾಂತ ವಿಜ್ಞಾನಿಗಳ ಮನೆತನದಲ್ಲಿ ಹುಟ್ಟಿದವನು. ತನ್ನ ೧೮ ನೆಯ ವಯಸ್ಸಿನಲ್ಲೇ ಅಪ್ರತಿಮವಾದ ಬುದ್ಧಿಶಕ್ತಿಯಿಂದ ಭೌತವಿಜ್ಞಾನದಲ್ಲಿ ಮಾಸ್ಟರ್ ಪದವಿಯನ್ನು ಪಡೆದು ವಿಜ್ಞಾನ ವಲಯಗಳಲ್ಲಿ ಜಯಭೇರಿಯನ್ನು ಮೊಳಗಿಸಿದ್ದನು. ಪ್ಯಾರಿಸ್ ಶಾಲೆ-ಯೊಂದರಲ್ಲಿ ಭೌತ ಮತ್ತು ರಸಾಯನ ವಿಜ್ಞಾನ ಶಾಖೆಗಳ ಪ್ರಾಧ್ಯಾಪಕನಾಗಿದ್ದ ಪಿಯರ್ ಕ್ಯೂರಿಗೆ ಸಂಶೋಧನೆಗಳೆಂದರೆ ಪಂಚಪ್ರಾಣ. ಆಗ ಇಂಗ್ಲೆಂಡಿನ ಅತ್ಯಂತ ಪ್ರಸಿದ್ಧ ವಿಜ್ಞಾನಿಯಾದ ಲಾರ್ಡ್ ಕೆಲ್ವಿನ್ ಈತನ

ಅಪ್ರತಿಮ ಪ್ರತಿಭೆಗೆ ಮಾರು ಹೋಗಿ ಬಹು ಗೌರವಿಸುತ್ತಿದ್ದನು.

ಫ್ರೀಬರ್ಗ್ ವಿಶ್ವವಿದ್ಯಾನಿಲಯದಲ್ಲಿ ಕೋವಲ್‌ಸ್ಕಿ ಎಂಬ ಪೋಲಿಷ್ ಪ್ರಾಧ್ಯಾಪಕರಿದ್ದರು. ಅವರೊಮ್ಮೆ ಪ್ಯಾರಿಸ್ಸಿಗೆ ಬಂದಿದ್ದಾಗ ಮೇರಿ, ಅವರನ್ನು ಭೇಟಿಮಾಡಿ ತಾನು ವಿವಿಧ ಬಗೆಯ ಉಕ್ಕುಗಳ ಆಕರ್ಷಣ ಶಕ್ತಿಯ ವಿಷಯವಾಗಿ ಸಂಶೋಧನೆ ನಡೆಸುತ್ತಿರುವುದಾಗಿಯೂ, ತನಗೆ ಒಂದು ಉತ್ತಮ ಸಂಶೋಧನಾಲಯದಲ್ಲಿ ಪ್ರವೇಶ ದೊರಕಿಸಿಕೊಡಬೇಕೆಂದು ಪ್ರಾರ್ಥಿಸಿದಳು. ಕೂಡಲೇ ಕೋವಲ್‌ಸ್ಕಿ, ಪಿಯರ್‌ಕ್ಯೂರಿಯ ಸಂಶೋಧನಾಲಯವನ್ನು ಸೂಚಿಸಿದನು. ಅಲ್ಲದೆ ಒಂದು ಸಂಜೆ ಸಂತೋಷಕೂಟವನ್ನು ಏರ್ಪಡಿಸಿ ಮೇರಿ ಮತ್ತು ಕ್ಯೂರಿ-ಇಬ್ಬರನ್ನೂ ಬರಮಾಡಿಕೊಂಡು ಪರಸ್ಪರ ಪರಿಚಯಮಾಡಿಸಿದನು. ಅಲ್ಲಿ ಶಾಂತನಾದ, ಸದಾ ಯೋಚನಾಪೂರ್ಣನಾದ, ಗಂಭೀರನಾದ ಕ್ಯೂರಿಯನ್ನು ಕಂಡು ಮೇರಿ ಬಹುವಾಗಿ ಮೆಚ್ಚಿಕೊಂಡಳು ಬಹಳ ಹೊತ್ತು ಇರ್ವರೂ ವಿಜ್ಞಾನ ಸಂಶೋಧನೆಯನ್ನು ತಮ್ಮ ತಮ್ಮಲ್ಲೇ ಚರ್ಚೆಮಾಡಿಕೊಂಡರು. ಮಾತು ಮುಂದುವರಿದಂತೆ ಪಿಯರ್ ಕ್ಯೂರಿ ತನ್ನೊಡನೆ ಚರ್ಚಿಸುತ್ತಿದ್ದ ಮೇರಿಯ ಸರಳ ಸೌಂದರ್ಯವನ್ನು ಕಂಡು ಮಾರು ಹೋದನು. ಹೀಗಾಗಿ ಪರಿಚಯ ಹೆಚ್ಚಿಸಿಕೊಂಡು ಗೆಳೆತನ ಬೆಳೆಸಬೇಕೆಂಬ ಹಂಬಲ ಹೆಚ್ಚಾಯಿತು. ದಿನಕಳೆದಂತೆ ಈ ಆಸೆ ಹೆಚ್ಚಾಗಿ ಸಲಿಗೆ ಪ್ರಬಲವಾಗಿ ಇಬ್ಬರ ಹೃದಯಗಳೂ ಬೆರೆತು ಒಂದಾದವು. ಮುಂದೆ ೧೮೯೫ನೆ ತಾರೀಕು ಪಿಯರ್‌ಕ್ಯೂರಿಗೂ, ಮೇರಿಸ್ಲೊಡೊವ್‌ಸ್ಕಿಗೂ ವಿವಾಹವಾಯಿತು– ಆಡಂಬರವಿಲ್ಲದ ವಿಲಕ್ಷಣವಾದ ಸರಳ ರೀತಿಯಲ್ಲಿ. ಬೆಲೆ ಬಾಳುವ ಮದುವೆಯ ಉಡುಪಿಲ್ಲ; ಊಟವಿಲ್ಲ, ಚಿನ್ನದುಂಗುರವೂ ಇಲ್ಲ. ಎರಡು ಕಡೆಯವರೂ ಸೇರಿ ಸಂತೋಷದಿಂದ ನಲಿದಾಡಿ ಮದು ಮಕ್ಕಳನ್ನು ಹರಿಸಿದರು.

ದಂಪತಿಗಳಿಬ್ಬರೂ ಬಹಳ ಆನಂದದಿಂದ ಕಾಲ ಕಳೆಯುತ್ತಿದ್ದರು. ಆಗಾಗ್ಗೆ ಬೈಸಿಕಲ್‌ಗಳಮೇಲೆ ಸುತ್ತಮುತ್ತಲ ರಮ್ಯವಾದ ಬೆಟ್ಟಗಾಡುಗಳಲ್ಲಿ ಸ್ವೇಚ್ಛೆಯಾಗಿ ಅಲೆದಾಡುತ್ತಾ ಬರುತ್ತಿದ್ದರು. ಇದು ಬಿಟ್ಟರೆ ಪ್ಯಾರಿಸಿನಲ್ಲಿದ್ದಾಗ ಹೆಚ್ಚಿನ ರೀತಿಯ ಸಂಶೋಧನೆಗಳ ವಿಚಾರವಾಗಿ ಯೋಚಿಸುತ್ತಿದ್ದರು. ಈ ಸಮಯದಲ್ಲೇ ಮೇರಿ ತನ್ನ ವಿಶೇಷ ರೀತಿಯ ವ್ಯಾಸಂಗದಿಂದ "ಫೆಲೋಷಿಪ್" ಪರೀಕ್ಷೆಯಲ್ಲಿ ಮೊದಲನೆಯವಳಾಗಿ ತೇರ್ಗಡೆ ಹೊಂದಿ

-ದಳು. ಇಬ್ಬರ ಸಂಸಾರವು ಅಚ್ಚುಕಟ್ಟಾಗಿ ಸಾಗಿತ್ತು.

ಅದೇ ವರ್ಷ ಸೆಪ್ಟೆಂಬರ್ ಹನ್ನೆರಡನೆಯ ತಾರೀಕು ಮೇರಿ ಹೆಣ್ಣು ಮಗುವೊಂದನ್ನು ಪ್ರಸವಿಸಿದಳು. ಮನೆಮಂದಿಗೆಲ್ಲಾ ಬಹಳ ಹರ್ಷ ವಾಯಿತು. ಮಗುವಿಗೆ ಐರಿನ್ ಎಂದು ಹೆಸರಿಟ್ಟರು. ಇದಾದ ಮೂರು —ನಾಲ್ಕು ತಿಂಗಳಿನ ನಂತರ ಮೇರಿ ತನ್ನ ಉಕ್ಕಿನ ಆಕರ್ಷಣಶಕ್ತಿಯ ಸಂಶೋಧನೆಗಳನ್ನು ಮುಗಿಸಿ, ಅದೇ ವಿಷಯದಲ್ಲಿ ಉತ್ತಮಕೃತಿಯನ್ನು ಪ್ರಕಟಿಸಿದಳು. ಸತತವಾದ ಸಂಶೋಧನೆಗಳಿಂದ ಮೇರಿಯ ಆರೋಗ್ಯ ಕೊಂಚಕಾಲ ಕೆಟ್ಟು, ವಿಶ್ರಾಂತಿಯನ್ನನುಭವಿಸಿದಳು. ತನ್ನ ಪ್ರಯೋಗಶಾಲೆ ಯಲ್ಲಿ ಎಷ್ಟೇ ಕಾರ್ಯವಿದ್ದರೂ ತಾನೇ ಸ್ವತಃ ಮಗುವಿನ ಆರೈಕೆಯನ್ನು ನಡೆಸುತ್ತಿದ್ದಳು. ಮಗುವೆಂದರೆ ಅಷ್ಟು ಪ್ರೀತಿ ಮೇರಿಗೆ.

ಕೆಲವು ದಿನಗಳ ನಂತರ ಮತ್ತೆ ಸಂಶೋಧನೆಗಳನ್ನು ಮುಂದುವರಿ ಸುವ ಯೋಚನೆಯಲ್ಲಿ ತೊಡಗಿದಳು. ಈ ಬಾರಿ ಉನ್ನತ ರೀತಿಯಲ್ಲಿ ಸಂಶೋಧನೆಗಳನ್ನು ನಡೆಸಿ "ಡಾಕ್ಟರೇಟ್" ಸಂಪಾದಿಸಲು ತನ್ನ ಪತಿ ಪಿಯರ್ ಕ್ಯೂರಿಯೊಂದಿಗೆ ಸಮಾಲೋಚಿಸಿದಳು ಆಗತಾನೆ ಹೆನ್ರಿ ಬೆಕ್ವೆ ರೆಲ್ ಎಂಬ ಭೌತವಿಜ್ಞಾನಿ, "ಯುರೇನಿಯಂ ಖನಿಜಗಳು ಒಂದು ಬಗೆಯ ಅಸಾಧಾರಣಶಕ್ತಿಯ ಕಿರಣಗಳನ್ನು ಹೊರಚೆಲ್ಲುತ್ತವೆ; ಈ ಕಿರಣಗಳನ್ನು ಛಾಯಾಗ್ರಾಹಕ ತಟ್ಟೆ (Photographic plate) ಯ ಸಹಾಯದಿಂದ ಸುಲಭವಾಗಿ ಗುರುತಿಸಬಹುದು" ಎಂಬ ಕುತೂಹಲಕಾರಿಯಾದ ಅಂಶ ವನ್ನು ಪ್ರಕಟಿಸಿ ವಿಜ್ಞಾನಕ್ಷೇತ್ರದಲ್ಲಿ ಅಚ್ಚರಿಯನ್ನುಂಟುಮಾಡಿದ್ದನು. ಆದರೆ ಈ ಬಗೆಯ ಕಿರಣಗಳು ಹೇಗೆ ಉತ್ಪತ್ತಿಯಾಗುತ್ತವೆ ಎಂಬುದನ್ನು ಬಿಡಿಸ ಲಾರದವನಾಗಿದ್ದನು. ಮೇರಿಗೆ ಇದೊಂದು ಅತ್ಯಂತ ಉತ್ತಮರೀತಿಯ ತೊಡಕಿನ ಪ್ರಶ್ನೆಯೆಂದೂ, ಇದನ್ನು ವೈಜ್ಞಾನಿಕ ರೀತಿಯಲ್ಲಿ ಬಿಡಿಸಲೇ ಬೇಕೆಂದೂ ತನ್ನ ಸಂಶೋಧನೆಗೆ ಆರಿಸಿಕೊಂಡಳು. ಕ್ರಮೇಣ ಒಂದು ಖನಿಜದಲ್ಲಿ ಗುಪ್ತವಾಗಿರುವ ಯುರೇನಿಯಂ ಪ್ರಮಾಣವನ್ನು ಅನು ಸರಿಸಿ ಹೆಚ್ಚು ಹೆಚ್ಚು ಕಿರಣಗಳು ಉಂಟಾಗುತ್ತವೆ ಎಂಬ ಅಂಶವನ್ನು ಹೊರಗೆಡವಿದಳು. ಅಲ್ಲದೆ ಯುರೇನಿಯಂ ಧಾತುವಿನಂತೆ ಥೋರಿಯಂ ಸಹ ಈ ಅಸಾಧಾರಣವಾದ ವಿದ್ಯುತ್ ವಿಕಿರಣಾಶಕ್ತಿ (Radioactivity)

ಯನ್ನು ಹೊಂದಿದೆ; ಹೀಗೆಯೇ ಈ ಬಗೆಯ ಕಿರಣಗಳನ್ನು ಹೊರಚೆಲುವ ಶಕ್ತಿ ಇನ್ನೂ ಅನೇಕ ಖನಿಜಗಳಲ್ಲಿ ಕಂಡುಬರುವುದೆಂದು ಪ್ರಕಟಿಸಿದಳು.

ತಾನು ಸಂಶೋಧನೆಗಳನ್ನು ಮುಂದುವರೆಸುತ್ತಿರುವಾಗ ಯುರೇನಿಯಂ ಮತ್ತು ಥೋರಿಯಂಗಳಿಗಿಂತ, ಪಿಚ್‌ಬ್ಲೆಂಡ್ ಎಂಬ ಖನಿಜದಲ್ಲಿ (ಅದುರಿನಲ್ಲಿ) ಈ ಶಕ್ತಿ ಅತ್ಯಂತ ಉನ್ನತ ಪ್ರಮಾಣದಲ್ಲಿರುವುದೆಂದೂ, ಆದುದರಿಂದ ಈ ಅದುರಿನಲ್ಲಿ ಅತ್ಯಂತ ಹೆಚ್ಚಿನ ರೀತಿಯ ವಿದ್ಯುತ್ ವಿಕಿರಣಾಶಕ್ತಿಯುಳ್ಳ ಧಾತುವಿರಲೇಬೇಕೆಂದೂ ಮನಗಂಡಳು. ಪಿಚ್‌ಬ್ಲೆಂಡ್ ಅದುರನ್ನು ಒಪ್ಪ ಮಾಡಲು ತೊಡಗಿದಳು. ಈ ವೇಳೆಗಾಗಲೇ ಪಿಚ್‌ಬ್ಲೆಂಡಿನ ಸಂಯೋಜನೆ ಎಲ್ಲರಿಗೂ ತಿಳಿದಿತ್ತು—ಬಹುಶಃ ಈಗ ತೋರಿಬರುತ್ತಿರುವ ವಿಚಿತ್ರಧಾತು ಅತ್ಯಲ್ಪವಾಗಿದ್ದು ಅವರ ದೃಷ್ಟಿಗೆ ಗೋಚರವಾಗದೆ ಇರಬಹುದು; ಅದನ್ನು ತಾನು ನಿರ್ಧರಿಸಲೇಬೇಕೆಂದು ತೀರ್ಮಾನಿಸಿದಳು. ೧೮೯೮ನೇ ವರ್ಷದಲ್ಲಿ ಈ ಅಂಶಗಳನ್ನೆಲ್ಲಾ ಅಡಕಮಾಡಿ ಪ್ರಾಧ್ಯಾಪಕ ಲಿಪ್‌ಮನ್ ಅವರೊಡಗೂಡಿ ದೊಡ್ಡ ಲೇಖನವೊಂದನ್ನು ಪ್ರಕಟಿಸಿದಳು.

ಈ ಲೇಖನ ಪಿಯರ್ ಕ್ಯೂರಿಯ ಚಿತ್ತವನ್ನೂ ಸೆರೆಹಿಡಿಯಿತು. ಆಗ ನಡೆಸುತ್ತಿದ್ದ ಮತ್ತೊಂದು ವಿಷಯಕ್ಕೆ ಸಂಬಂಧಿಸಿದ ಸಂಶೋಧನೆಗಳನ್ನು ಅಷ್ಟಕ್ಕೇ ನಿಲ್ಲಿಸಿ ಮೇರಿಯೊಡನೆ ಬಂದು ಸೇರಿದನು. ಸುಮಾರು ಎಂಟು ಒಂಬತ್ತು ವರ್ಷಗಳು ಪಿಚ್‌ಬ್ಲೆಂಡಿನ ವಿದ್ಯುತ್ ವಿಕಿರಣಾಶಕ್ತಿಯ ವಿಚಾರವಾಗಿ ಇಬ್ಬರೂ ಒಟ್ಟಿಗೆ ಸಂಶೋಧನೆಗಳನ್ನು ನಡೆಸಿದರು. ಮೊದಲು ಪಿಚ್‌ಬ್ಲೆಂಡ್ ಅದುರನ್ನು ರಸಾಯನಿಕವಾಗಿ ವಿಭಾಗಿಸಿ (Chemical analysis) ಪ್ರತಿಭಾಗದ ವಿಕಿರಣಾಶಕ್ತಿಯನ್ನೂ ನಿರ್ಧರಿಸಿದರು. ಹೀಗೆ ಮಾಡಿದಾಗ ಎರಡು ಭಾಗಗಳಲ್ಲಿ ಈ ಕ್ರಿಯೆ ಹೆಚ್ಚುಮಟ್ಟದಲ್ಲಿರುವುದು ಕಂಡುಬಂತು. ಇವುಗಳಲ್ಲಿ ಒಂದನ್ನು ತನ್ನ ನಚ್ಚಿಯ ಮಾತೃಭೂಮಿಯಾದ ಪೋಲೆಂಡಿನ ನೆನಪಿಗಾಗಿ "ಪೊಲೋನಿಯಂ" ಎಂದು ಕರೆದಳು. ಇದನ್ನು ಪ್ರಕಟಿಸಿದಾಗ ನೂರಾರು ವಿಜ್ಞಾನಿಗಳು ಮೇರಿಯ ಸಂಶೋಧನೆಗಳನ್ನು ಮುಕ್ತಕಂಠದಿಂದ ಹೊಗಳಿದರು. ವಿಜ್ಞಾನ ವಲಯಗಳಲ್ಲಿ ಇದು ದೊಡ್ಡ ವಿಸ್ಮಯವನ್ನೇ ಉಂಟುಮಾಡಿತು.

ಇಷ್ಟಾದರೂ, ಈ ಧಾತುವನ್ನು ಪಿಚ್‌ಬ್ಲೆಂಡಿನಿಂದ ಬೇರ್ಪಡಿಸಿರಲಿಲ್ಲ.

ಇದು ಆದ ಹೊರತು ವಿಜ್ಞಾನಿಗಳು ಇವರ ಸಂಶೋಧನೆಗಳನ್ನು ನಂಬಲು ಸಿದ್ಧವಾಗಿರಲಿಲ್ಲ. ವಿಚಿತ್ರ ಶಕ್ತಿಯುಳ್ಳ ರೇಡಿಯಂ ಧಾತುವನ್ನು ಬೇರ್ಪಡಿಸಲು ಟನ್‌ಗಟ್ಟಲೆ ಪಿಚ್‌ಬ್ಲೆಂಡ್ ಅದುರು ಬೇಕಾಯಿತು. ಆ ಸಮಯದಲ್ಲಿ ಆಸ್ಟ್ರಿಯರ್ಾ ಸರಕಾರ ಒಂದು ಟನ್ನಿನಷ್ಟು ಉತ್ತಮವಾದ ಪಿಚ್‌ಬ್ಲೆಂಡಿನ ಅದುರನ್ನು ಕ್ಯೂರಿ ದಂಪತಿಗಳಿಗೆ ಬಹುಮಾನಿಸಿ ಪ್ರೋತ್ಸಾಹಿಸಿತು. ಇವರು ಸಂಶೋಧನೆ ನಡೆಸುತ್ತಿದ್ದ ಕೋಣೆಗೆ "ಪ್ರಯೋಗಶಾಲೆ" ಎಂದು ಕರೆದರೆ ಆ ಹೆಸರಿಗೇ ನಾಚಿಕೆಯಾದೀತು. ಸೊಟ್ಟ ಸೊಟ್ಟಾದನೆಲ; ಒಳಗೆ ಒಡಕು ಮುರುಕಾದ ಕುರ್ಚಿ, ಮೇಜುಗಳು, ಸರಿಯಾಗಿ ಬೆಳಕುಬರದೆ ಇದ್ದ ಈ ಕೋಣೆಯಲ್ಲೇ ಅವರ ಸಂಶೋಧನೆಗಳು ನಡೆದವು. ಹೀಗಿದ್ದರೂ ಯಾರಿಗೂ ಬೇಡವಾಗಿದ್ದ ಈ ಗುಹೆಯಲ್ಲೇ ಕ್ಯೂರಿ ದಂಪತಿಗಳ ಉಗ್ರತಪಸ್ಸು ಅವ್ಯಾಹತವಾಗಿ ಸುಮಾರು ನಾಲ್ಕು ವರ್ಷಗಳ ಕಾಲನಡೆಯಿತು; ಈ ಕತ್ತಲ ಕೊಠಡಿಯೇ ವಿಜ್ಞಾನಕ್ಕೆ ಅಪೂರ್ವವಾದ, ತೇಜೋಮಯವಾದ ಬೆಳಕನ್ನು ನೀಡಿತು.

ದಿನಕಳೆದಂತೆಲ್ಲಾ ಅನೇಕ ಹೊಸ ಹೊಸ ವಿಚಾರಗಳು ಬಯಲಾಗುತ್ತಿದ್ದುವು. ಆಂಡ್ರಿ ಡಿ ಬೈರನ್ ಎಂಬ ಹೆಸರಾಂತ ರಸಾಯನ ವಿಜ್ಞಾನಿಯೊಡನೆ, ಇವರು ಸೇರಿ ಆಕ್ಟಿನಿಯಂ ಎಂಬ ಮತ್ತೊಂದು ಹೊಸ ಧಾತುವನ್ನು ಪ್ರಕಟಪಡಿಸಿದರು. ಉತ್ತಮ ರೀತಿಯ ಪ್ರಯೋಗ ಸಾಧನೆಗಳಿಲ್ಲವೆ ಅನೇಕಸಲ ಕೆಲಸವೇ ಕೆಟ್ಟುಹೋಗಿ ಮನಸ್ಸಿಗೆ ವಿಪರೀತ ಬೇಸರವಾಗುತ್ತಿತ್ತು. ಆದರೂ ಮೇರಿ ಇವೆಲ್ಲವನ್ನು ಗಣನೆಗೆ ತಂದುಕೊಳ್ಳದೆ ದೃಢ ಮನಸ್ಸಿನಿಂದ ಮುಂದುವರಿಯುತ್ತಿದ್ದಳು.

ವಿಜ್ಞಾನ ಪ್ರಪಂಚಕ್ಕೆ ಅದೊಂದು ಮಹಾದಿನ. ಮೇಡಂ ಕ್ಯೂರಿಯ ಉಗ್ರಸಾಧನೆ ಕೊನೆಮುಟ್ಟಿ ಫಲವಿತ್ತ ದಿನ. ವೈಜ್ಞಾನಿಕ ತಪಸ್ಸು ಕೊನೆಗೊಂಡು ವರ ಮೂಡಿದ ದಿನ. ಅದು ೧೯೦೨ ನೇ ಇಸವಿಯ ಒಂದು ರಾತ್ರಿ; ಗಡಿಯಾರ ಒಂಬತ್ತನ್ನು ಬಾರಿಸಿತು; ಕ್ಯೂರಿ ದಂಪತಿಗಳ ಮನಸ್ಸಿಗೆ ಶಾಂತಿಯೇ ಇಲ್ಲ. ಊಟವಾದಮೇಲೆ ಕುತೂಹಲಿಗಳಾಗಿ ತಮ್ಮ ಸಂಶೋಧನಾಲಯದತ್ತ ದಡಬಡನೆ ಸಾಗಿದರು; ಆ ಕಗ್ಗತ್ತಲಿನಲ್ಲಿ ಬಾಗಿಲುತೆರೆದು ಒಳಹೊಕ್ಕರು. ಮೇಜಿನಮೇಲಿಟ್ಟಿದ್ದ ಗಾಜಿನ ಪಾತ್ರೆಯಲ್ಲಿ

ಅದೇ ತಾನೆ ಬೇರ್ಪಡಿಸಿದ್ದ ರೇಡಿಯಂ ಕಣಗಳು ನಕ್ಷತ್ರಗಳಂತೆ ಮಿನು ಗುತ್ತಾ ನಗುತ್ತಿದ್ದವು. ಆ ದಂಪತಿಗಳಿಗೆ ಆದ ಆಹ್ಲಾದ ಅಷ್ಟಿಷ್ಟಲ್ಲ. ಹೀಗೆ ಮೇರಿ ಒಂದು ಡೆಸಿಗ್ರಾಮ್ ತೂಕದಷ್ಟು ಪರಿಶುದ್ಧವಾದ ರೇಡಿಯಂ ಅನ್ನು ಪಿಚ್‌ಬ್ಲೆಂಡಿನಿಂದ ಬೇರ್ಪಡಿಸಿದಳು. ಸಂಶೋಧನೆಯಲ್ಲಿ ಜಯ ಶಾಲಿಯಾದಳು; ಅಸಾಧ್ಯದ ಮೊಗ್ಗು ವಿಕಸಿಸಿ, ಸಾಧ್ಯದ ಕೋಮಲಪುಷ್ಪ ವರಳಿತು.

ಹೀಗೆ ಹೊರಬಿದ್ದ ರೇಡಿಯಂ ವಿಜ್ಞಾನ ಕ್ಷೇತ್ರದಲ್ಲಿ ದೊಡ್ಡ ಕ್ರಾಂತಿ ಯನ್ನೇ ಉಂಟುಮಾಡಿತು. ಭೌತಶಾಸ್ತ್ರ ಮತ್ತು ರಸಾಯನಶಾಸ್ತ್ರಗಳ ಅನೇಕ ಮೂಲತತ್ತ್ವ (ಸಿದ್ಧಾಂತ)ಗಳೇ ತಲೆಕೆಳಗಾದವು. ಒಂದು ವಸ್ತು ವಿನ ಅಣುಗಳನ್ನು ವಿಭಜಿಸುವುದು ಮತ್ತು ರೂಪಾಂತರಗೊಳಿಸುವುದು ಅಸಾಧ್ಯವೆಂದು ಸಾರಿದ್ದ ಲೋಕಪ್ರಿಯವಾದ ಸಿದ್ಧಾಂತಗಳು ಸುಳ್ಳಾದವು. ಮೇರಿ ಕಂಡು ಹಿಡಿದ ರೇಡಿಯಂ ಧಾತುವಿನ ಅಣುಗಳು ಸತತವಾದ ವಿಭಜ ನೆಗೆ ಒಳಗಾಗಿ ಹೀಲಿಯಂ ಕಣಗಳನ್ನೂ, ಅಪಾರವಾದ ಶಾಖ ಅಥವ ಶಕ್ತಿಯನ್ನೂ ಹೊರಸೂಸುತ್ತಿತ್ತು; ಕಟ್ಟ ಕಡೆಗೆ ಮೂಲಧಾತು ಯುರೇ ನಿಯಂ, ಸೀಸ (Atomic Lead)ವಾಗಿ ಮಾರ್ಪಡುತ್ತಿತ್ತು—ಇದೇ ವಿದ್ಯುತ್ ವಿಕಿರಣಾಕ್ರಿಯೆ ಅಥವ "ರೇಡಿಯೋ ಆಕ್ಟಿವಿಟಿ." ಈ ಬಗೆಯ ಧಾತುಗಳಿಗೆ ಸ್ವಯಂಪ್ರಕಾಶ ಶಕ್ತಿಯುಂಟು; ಕತ್ತಲಲ್ಲಿ ಬೆಳಕನ್ನು ಬೀರು ತ್ತವೆ. ಅಲ್ಲದೆ ಇವು ತಮ್ಮ ಸಂಪರ್ಕವುಂಟಾದ ಇತರ ಪದಾರ್ಥಗಳಲ್ಲಿ— ಮರಮುಟ್ಟುಗಳು, ಸಸ್ಯಗಳು, ಪ್ರಾಣಿಗಳು, ಮನುಷ್ಯರು—ಎಲ್ಲರಲ್ಲೂ ಈ ಶಕ್ತಿಯನ್ನು ಹರಡುತ್ತವೆ. ಇದರ ಉಪಯೋಗದಿಂದ ಈಗ ಅಣುಸ್ಫೋಟಕ (Atom-bomb) ಮತ್ತು ಜಲಜನಕ ಸ್ಫೋಟಕ (Hydrogen bomb) ಎಂಬ ಮಾರಣಾಸ್ತ್ರಗಳು ತಯಾರಾಗಿವೆ. ಸದ್ಯಕ್ಕೆ ಈ ಅಣುಶಕ್ತಿಯನ್ನು ಉಪಯೋಗಿಸಿಕೊಂಡು ಜನಹಿತವಾದ ಕಾರ್ಯಗಳನ್ನು ಮಾಡುವ ಯೋಜನೆ ಗಳಲ್ಲಿ ಇಂದಿನ ಅನೇಕ ವಿಜ್ಞಾನಿಗಳು ತೊಡಗಿದ್ದಾರೆ. ಮೇರಿಯ ಸಂಶೋಧ ನಾಲಯದಲ್ಲಿದ್ದ ಕುರ್ಚಿ, ಮೇಜು, ಸಲಕರಣೆ, ಪುಸ್ತಕ, ಬಟ್ಟೆಬರೆ, ಕೊನೆಗೆ ಅಲ್ಲಿ ಬಿದ್ದಿದ್ದ ಕಸಕಡ್ಡಿ, ಧೂಳು ಸಹ ಈ ಬಗೆಯ ವಿಚಿತ್ರಶಕ್ತಿ ಯನ್ನು ತೋರ್ಪಡಿಸುತ್ತಿದ್ದವು. ಹೆಚ್ಚಿನ ಕಿರಣಗಳು ಪಿಯರ್‌ನ ಶರೀರದ

ಮೇಲೆ ಬಿದ್ದಾಗ ಆ ಭಾಗ ಸುಟ್ಟುಹೋಯಿತು. ಇದನ್ನೇ ಮನಗಂಡು ಪಿಯರ್ ಕ್ಯೂರಿ ಅನೇಕ ಪ್ರಯೋಗಗಳನ್ನು ನಡೆಸಿ 'ಕ್ಯಾನ್ಸರ್' ರೋಗ ವನ್ನು ರೇಡಿಯಂ ಸಹಾಯದಿಂದ ತಡೆಗಟ್ಟಬಹುದೆಂದು ಪ್ರಕಟಿಸಿದನು. ವೈದ್ಯಕ್ಷೇತ್ರಗಳಲ್ಲಿ ಇದರಿಂದಾಗುತ್ತಿರುವ ಉಪಕಾರ ಬಹಳ ಹೆಚ್ಚಿನದು. ಇದನ್ನು ಕ್ಯೂರಿಯ ಗೌರವಾರ್ಥವಾಗಿ "ಕ್ಯೂರಿ ಥೆರಾಪಿ" ಎಂದು ಕರೆಯುತ್ತಾರೆ. ಈ ಬಗೆಯ ರೇಡಿಯಂ ಬಹು ಬೆಲೆಯುಳ್ಳ ಅಮೂಲ್ಯ ವಸ್ತು.

ಹೀಗೆ ಕಂಡುಹಿಡಿದ ರೇಡಿಯಂನಿಂದ ಕ್ಯೂರಿ ದಂಪತಿಗಳ ಕೀರ್ತಿ ಪ್ರಪಂಚದ ಎಲ್ಲೆಡೆಗಳಲ್ಲೂ ಹಬ್ಬಿತು; ಆಚಂದ್ರಾರ್ಕವಾಯಿತು. ೧೯೦೩ ನೆಯ ವರ್ಷದಲ್ಲಿ ಇಂಗ್ಲೆಂಡಿನ ಪ್ರಸಿದ್ಧ ವಿಜ್ಞಾನ ಸಂಸ್ಥೆಯಾದ "ರಾಯಲ್ ಇನ್ಸ್ಟಿಟ್ಯೂಷನ್" ಇವರನ್ನು ಆಹ್ವಾನಿಸಿ ವಿಶೇಷವಾಗಿ ಗೌರವಿಸಿ, ಇವರ ಅದ್ಭುತ ರೀತಿಯ ಶೋಧನೆಗಾಗಿ "ಡೇವಿ" ಪದಕವನ್ನು ಅರ್ಪಿಸಿತು. ನಂತರ, ಇಡಿ ಜಗತ್ತಿನಲ್ಲಿ ಅತ್ಯಂತ ದೊಡ್ಡದಾದ ಬಹುಮಾನ "ನೊಬೆಲ್ ಪಾರಿತೋಷಕ" (Noble Prize)ವನ್ನು, ಸ್ವೀಡನ್ ಸರಕಾರ ಈ ದಂಪತಿ ಗಳಿಗೆ ಕೊಟ್ಟು ಗೌರವಿಸಿತು. ಈ ಬಹುಮಾನ ದೊರಕಿದುದೇ ತಡ, ಪ್ರಪಂಚದ ಎಲ್ಲಾ ಪತ್ರಿಕೆಗಳೂ ಇವರನ್ನು ಹಾಡಿ ಹೊಗಳಿ ಇವರ ಭಾವ ಚಿತ್ರಗಳನ್ನು ಪ್ರಕಟಿಸಿ ಗೌರವಿಸಿದವು; ಈ ಹೊಗಳಿಕೆಯಿಂದ ತಪ್ಪಿಸಿ ಕೊಂಡು ಹಾಯಾಗಿರುವುದೇ ಈ ದಂಪತಿಗಳಿಗೆ ಕಷ್ಟವಾಯಿತು. ಕ್ಯೂರಿ ದಂಪತಿಗಳು ಎಂದಿನಂತೆ ಸರಳವಾಗಿ, ಯಾವ ಬಗೆಯ ಗೌರವಕ್ಕೂ ಒಳಗಾಗದೆ ತಮ್ಮ ಕಾರ್ಯಗಳನ್ನು ಮುಂದುವರಿಸುತ್ತಿದ್ದರು. ತಮಗೆ ಸಂದಗೌರವವೆಲ್ಲಾ ವಿಜ್ಞಾನಕ್ಕೇ ಸೇರಿದುದು ಎಂಬ ಉದಾತ್ತ ಭಾವನೆ ಯನ್ನು ಪ್ರಕಟಿಸಿದರು.

ಇಷ್ಟಾದರೂ, ಕ್ಯೂರಿ ಸಂಸಾರದ ಹಣಕಾಸಿನ ಸ್ಥಿತಿ ಅಷ್ಟು ಉತ್ತಮ ವಾಗಲಿಲ್ಲ. ಸಾಲದುದಕ್ಕೆ ಆರೋಗ್ಯ ಬೇರೆ ಕೆಟ್ಟು ಹಾಸಿಗೆ ಹಿಡಿದರು. ಆದರೆ ೧೯೦೪ನೆ ಡಿಸೆಂಬರ್ ೬ನೆ ತಾರೀಕು ಮೇರಿಗೆ ಮತ್ತೊಂದು ಮಗು ವಾಗಿ ಮನೆಯಲ್ಲಿ ಸುಖಸಂತೋಷಗಳು ತಲೆದೋರಿದವು. ಈ ಮಗುವನ್ನು

ಕ್ಯೂರಿ ದಂಪತಿಗಳು ಈವ್ ಎಂಬ ಪ್ರೀತಿಯ ನಾಮದಿಂದ ಕೂಗಿದರು; ಪಿಯರ್‌ನ ಕಾಯಿಲೆಯೂ ಗುಣವಾಯಿತು. ದಂಪತಿಗಳಿಬ್ಬರೂ ಸ್ವೀಡನ್ನಿಗೆ ಹೋಗಿ ಭಾಷಣಗಳನ್ನು ಮಾಡಿ ವಿಶೇಷ ಗೌರವಿತರಾದರು.

ಇದಾದಮೇಲೆ ಪ್ಯಾರಿಸ್ ವಿಶ್ವವಿದ್ಯಾನಿಲಯದ ಅಕೆಡೆಮಿಯ ಸದಸ್ಯನಾಗಿ ಪಿಯರ್ ಕ್ಯೂರಿ ಚುನಾಯಿತನಾದನು; ಭೌತಶಾಸ್ತ್ರದ ಪ್ರಾಧ್ಯಾಪಕ ಪದವಿಯನ್ನೂ ಅಲಂಕರಿಸಿದನು. ಸಾರ್ಬನ್ ಸಮೀಪದಲ್ಲೇ ಅತ್ಯಾಧುನಿಕ ಸಲಕರಣೆಗಳಿಂದ ಸುಸಜ್ಜಿತವಾದ ಪ್ರಯೋಗಶಾಲೆಯೊಂದನ್ನು ನಿರ್ಮಿಸಲು ತೊಡಗಿದನು. ಮೇರಿ ಈ ಪ್ರಯೋಗಶಾಲೆಯ ಮುಖ್ಯಾಧಿಕಾರಿಯಾದಳು. ತನ್ನದೇ ಆದ ಪ್ರಯೋಗಶಾಲೆಯ ನಿರ್ಮಾಣದಲ್ಲಿ ತೊಡಗಿದ್ದ ಪಿಯರ್ ಕ್ಯೂರಿ ೧೯೦೬ ನೆ ಏಪ್ರಿಲ್ ೧೯ ರ ಬೆಳಿಗ್ಗೆ ಪ್ಯಾರಿಸ್ ನಗರದ ರಸ್ತೆಯಲ್ಲಿ ಅಪಘಾತಕ್ಕೀಡಾಗಿ ಮರಣಹೊಂದಿದನು. ಆಗತಾನೆ ಸುಖಮಯವಾಗುತ್ತಿದ್ದ ಮೇರಿಯ ಸುಂದರ ಬಾಳಿನಲ್ಲಿ ಕತ್ತಲೆ ಕವಿದಂತಾಯಿತು; ದುಃಖ ದುಸ್ಸಹವಾಯಿತು; ಬಾಳಿನ ವೇದನೆ ಅತಿಯಾಯಿತು. ನೂರಾರು ಸಂಘ ಸಂಸ್ಥೆಗಳಿಂದ, ಹೆಸರಾಂತ ವ್ಯಕ್ತಿಗಳಿಂದ ಅನುತಾಪ ಸಂದೇಶಗಳು ಬಂದು ಮೇರಿಯ ದುಃಖವನ್ನು ಪಾಲ್ಗೊಂಡುವು. ಫ್ರೆಂಚ್ ಸರಕಾರ ತನ್ನ ಅನುತಾಪವನ್ನು ಸೂಚಿಸಿ ವೇತನವನ್ನು ದಯಪಾಲಿಸುವುದಾಗಿ ತಿಳಿಸಿತು; ಸ್ಥಿತಪ್ರಜ್ಞಳಾದ ಈ ದಿಟ್ಟ ಹೆಂಗಸು ಅದನ್ನು ಒಲ್ಲದೆ ಎಂದಿನಂತೆ ಕಾರ್ಯೋನ್ಮುಖಳಾದಳು.

ಅರ್ಧಕ್ಕೆ ನಿಂತುಹೋಗಿದ್ದ ಸಂಶೋಧನಾಲಯದ ಕಾರ್ಯವನ್ನು ವಿಶ್ವವಿದ್ಯಾನಿಲಯದವರು ಮೇರಿಗೆ ವಹಿಸಿದರು; ಅಲ್ಲದೆ ವರ್ಷಕ್ಕೆ ಹತ್ತು ಸಾವಿರ ಫ್ರಾಂಕುಗಳ ಗೌರವ ವೇತನವನ್ನು ನೀಡುವುದಾಗಿಯೂ ತಿಳಿಸಿದಗು. ಈಕೆಯ ಉಪನ್ಯಾಸವೆಂದರೆ ಸಂಶೋಧನಾಲಯದಲ್ಲಿ ವಿದ್ಯಾರ್ಥಿಗಳು ಕಿಕ್ಕಿರಿದು ನೆರೆಯುತ್ತಿದ್ದರು. ಅವರಲ್ಲಿ ಎಲ್ಲಿಲ್ಲದ ಅಪೂರ್ವ ಉತ್ಸಾಹ ತಲೆದೋರುತ್ತಿತ್ತು. ಮೇರಿಯ ಸಂಶೋಧನೆಗಳೂ ಎಂದಿನಂತೆ ಉನ್ನತಮಟ್ಟದಲ್ಲಿ ಮುಂದುವರಿಯುತ್ತಿದ್ದವು. ಹೀಗೆ ಸಂಶೋಧಕಳಾಗಿ, ವಿಜ್ಞಾನ ಕೇಂದ್ರದ ಮುಖ್ಯಾಧಿಕಾರಿಯಾಗಿ ಪ್ರಾಧ್ಯಾಪಕಿಯಾಗಿ – ಸರ್ವ ಕೆಲಸವನ್ನೂ ಸಮರ್ಪಕವಾಗಿ ನಿರ್ವಹಿಸುತ್ತಿದ್ದಳು. ೧೯೧೦ರಲ್ಲಿ ತನ್ನ ಉಪನ್ಯಾಸಗಳ

ನ್ನೆಲ್ಲಾ ಒಟ್ಟುಗೂಡಿಸಿ ಸುಮಾರು ೧೦೦೦ ಪುಟಗಳುಳ್ಳ ದೊಡ್ಡ ಗ್ರಂಥವನ್ನೇ ಪ್ರಕಟಿಸಿದಳು; ವಿಜ್ಞಾನವಲಯಗಳಲ್ಲಿ ಈಕೆಗೆ ಇದರಿಂದ ದೊರೆತ ಗೌರವ ವರ್ಣಿಸಲಸಾಧ್ಯವಾದುದು. ವಿಜ್ಞಾನ ಜಗತ್ತಿಗೆ ಈ ಉತ್ಕೃತಿ ಒಂದು ಅದ್ವಿತೀಯ ಕಾಣಿಕೆ ಎಂದರೆ ಅತಿಶಯೋಕ್ತಿಯಾಗಲಾರದು.

ಸಂಶೋಧನಾಲಯದಲ್ಲಿ ಹಲವಾರು ಉತ್ತಮ ವಿದ್ಯಾರ್ಥಿಗಳು ಪ್ರಯೋಗಗಳನ್ನು ಈಕೆಯ ನೇತೃತ್ವದಲ್ಲಿ ಸಮರ್ಪಕವಾಗಿ ನಡೆಸುತ್ತಿದ್ದರು. ಮೇರಿಯೂ ಸಹ ಈ ಸಮಯದಲ್ಲಿ, ಅತ್ಯಂತ ಶುದ್ಧವಾದ ರೇಡಿಯಂ ಅನ್ನು ಬೇರ್ಪಡಿಸಿದ್ದಳು. ಅವರೆವಿಗೂ ಅದರ ಗುಣಗಳನ್ನೇ ಹೊಂದಿದ್ದ ರೇಡಿಯಂ ಲವಣಗಳು ಮಾತ್ರ ತಿಳಿದು ಬಂದಿದ್ದವು; ಮತ್ತೆ ಅದು ಹೊರಸೂಸುವ ಕಿರಣಗಳ ಅಳತೆಯಿಂದ ಅದರ ತೂಕವನ್ನು ಕಂಡುಹಿಡಿಯುವ ಹೊಸ ಸಾಧನವನ್ನು ತಯಾರಿಸಿದಳು; ಕೀರ್ತಿ ಹಿಂದಿಗಿಂತ ಎಷ್ಟೋ ಪಾಲು ಹೆಚ್ಚಾಗಿ ಹಬ್ಬಿತು. ನೂರಾರು ಗೌರವಗಳೂ, ಪ್ರಶಸ್ತಿಗಳೂ ನಾನಾ ಕಡೆಗಳಿಂದ ಬಂದವು. ೧೯೧೧ ನೆ ವರ್ಷದಲ್ಲಿ ಸ್ವೀಡನ್ ಸರಕಾರ ಮತ್ತೆ ನೊಬೆಲ್ ಪಾರಿತೋಷಕವನ್ನಿತ್ತು ಗೌರವಿಸಿತು. ಇಂತಹ ಹಿರಿಯ ಬಹುಮಾನವನ್ನು ಎರಡು ಸಲ ಪಡೆದವರೇ ವಿರಳ.

ಮೇಡಂ ಕ್ಯೂರಿಗೆ ದಿನದಿನವೂ ಸಲ್ಲುತ್ತಿದ್ದ ಗೌರವ, ಆದರಗಳನ್ನು ಕಂಡ ಅನೇಕ ಜನ ಸಹಿಸಲಾರದಾದರು; ಪತ್ರಿಕೆಯಲ್ಲಿ ಅವಳನ್ನು ಅವ ಹೇಳನಮಾಡಿದರು. ಆಕೆ ಫ್ರಾನ್ಸಿನವಳಲ್ಲವೆಂದೂ, ಪರಕೀಯಳೆಂದೂ ಜರಿದರು. ಆದರೂ ಮೇರಿ ಧೈರ್ಯಗೆಡಲಿಲ್ಲ. ಇದೇ ವೇಳೆಯಲ್ಲಿ ಪೋಲೆಂಡಿನ ಹಲವು ಮುಖಂಡರು ಆಕೆಯನ್ನು ಭೇಟಿಮಾಡಿ ತಮ್ಮ ದೇಶಕ್ಕೆ ಬಂದು ನೆಲೆಸಬೇಕೆಂದೂ, ತಾವು ಆಕೆಯ ವಿಜ್ಞಾನಸಂಶೋಧನೆಗಳಿಗೆ ಬೆಂಬಲ ನೀಡುವುದಾಗಿಯೂ ಪ್ರಾರ್ಥಿಸಿದರು. ಕುಗ್ಗಿಹೋಗಿದ್ದ ಮೇರಿಗೆ ಇದರಿಂದ ಬಹಳ ಹರ್ಷವಾಯಿತು. ಆದರೂ ಫ್ರಾನ್ಸ್ ದೇಶವನ್ನು ಬಿಡುವ ಯೋಚನೆಯನ್ನು ದೂರಮಾಡಿದಳು. ತನ್ನ ಪ್ರೀತಿಯ ಪತಿ ಪಿಯರ್ ಕ್ಯೂರಿ ಪ್ರಾರಂಭಿಸಿದ್ದ ಸಂಶೋಧನಾಲಯವನ್ನು ಪೂರ್ಣಗೊಳಿಸುವುದು ತನ್ನ ಪವಿತ್ರ ಕರ್ತವ್ಯವೆಂದಳು.

ತನ್ನ ತಾಯ್ನಾಡಿನ ಜನರ ಕರೆಯನ್ನು ಮನ್ನಿಸಿ ಮೇರಿ ಪೋಲೆಂಡಿಗೆ

೧೯೧೩ನೆ ವರ್ಷದಲ್ಲಿ ತೆರಳಿ ಅಚ್ಚುಕಟ್ಟಾದ ಪ್ರಯೋಗಶಾಲೆಯೊಂದರ ಪ್ರಾರಂಭೋತ್ಸವನ್ನು ನೆರವೇರಿಸಿದಳು. ಅಲ್ಲಿ ಆಕೆ ಕಳೆದ ದಿನಗಳು ಬಹಳ ಹರ್ಷದಾಯಕವಾಗಿದ್ದವು. ಬೇಸಿಗೆಯಲ್ಲಿ ತನ್ನ ಮಕ್ಕಳು ಮತ್ತು ಪ್ರಸಿದ್ಧ ವಿಜ್ಞಾನಿ ಮಹರ್ಷಿ ಐನ್‌ಸ್ಟೈನ್—ಇವರೊಡಗೂಡಿ ಕಾಲುನಡಿಗೆಯಲ್ಲೇ ಫ್ರಾನ್ಸಿಗೆ ಹೊರಟಳು. ಈ ಪ್ರಯಾಣ, ನಿಸರ್ಗದ ಮಡಿಲಲ್ಲಿ ಅತ್ಯಂತ ಆಹ್ಲಾದಕರವಾಗಿತ್ತು. ಪ್ಯಾಸ್ಟರ್ ವಿಜ್ಞಾನಸಂಸ್ಥೆಯವರು ಮೇರಿಗಾಗಿ ಪ್ರಯೋಗಶಾಲೆಯೊಂದನ್ನು ಕಟ್ಟಿಕೊಡಲು ಮುಂದೆ ಬಂದರು. ಆಗ ಎಚ್ಚೆತ್ತ ಫ್ರಾನ್ಸ್ ವಿಶ್ವವಿದ್ಯಾನಿಲಯದ ಅಧಿಕಾರಿಗಳು ತಾವೇ ಆ ಸಂಶೋಧನಾಲಯವನ್ನು ಕಟ್ಟಿ, ಅದರಲ್ಲಿ ಎರಡು ಭಾಗ ಮಾಡಿ, ರೇಡಿಯಂ ಚಟುವಟಿಕೆಯ ವಿಭಾಗದ ಮುಖ್ಯಾಧಿಕಾರಿಯಾಗಿ ಮೇಡಂ ಕ್ಯೂರಿಯನ್ನು ನಿಯಮಿಸಿ ಗೌರವಿಸಿದರು. ಈ ಸಂಶೋಧನಾಲಯ ಕಟ್ಟುತ್ತಿರುವಾಗ ಮೇರಿಗೆ ಎಲ್ಲಿಲ್ಲದ ಉತ್ಸಾಹ; ಮಧ್ಯೆ ತನ್ನ ಪ್ರಿಯ ಪತಿಯ ನೆನಪಿನಿಂದ ಹೃದಯದಲ್ಲಿ ನೂರು ಸ್ಫೋಟಕಗಳನ್ನು ಸಿಡಿಸಿದ ಬಾಧೆಯಾಗುತ್ತಿತ್ತು. ಅಂತೂ ಕಡೆಗೆ ೧೯೧೪ನೆ ಜುಲೈ ಹೊತ್ತಿಗೆ ಹೊಸ ಕಟ್ಟಡ ನಿರ್ಮಾಣವಾಯಿತು. ಪಿಯರ್ ಕ್ಯೂರಿಯ ಸ್ಮಾರಕವಾದ ಈ ಸಂಶೋಧನಾಲಯ ಪ್ರಪಂಚದಲ್ಲೆಲ್ಲಾ ಇಂದಿಗೂ ಬಹಳ ಹೆಸರುವಾಸಿಯಾದುದು.

ಈ ಸಮಯದಲ್ಲೆ ಪ್ರಪಂಚದ ಮೊದಲನೆಯ ಮಹಾಯುದ್ಧ ಪ್ರಾರಂಭವಾಯಿತು. ಬಲಿಷ್ಠ ಜರ್ಮನರು ಫ್ರಾನ್ಸನ್ನು ಮುತ್ತಿದರು. ಎಂತಹ ವಿಷಮ ಸಂದರ್ಭ ಬಂದರೂ ಮೇರಿ ಫ್ರಾನ್ಸನ್ನೂ, ತನ್ನ ಪ್ರಯೋಗಶಾಲೆಯನ್ನೂ ಬಿಟ್ಟು ಕದಲಲಿಲ್ಲ. ತನ್ನ ಪ್ರೀತಿಯ ಮಕ್ಕಳಾದ ಐರಿನ್ ಮತ್ತು ಈವ್—ಇವರನ್ನು ಸುರಕ್ಷಿತವಾದ ಸ್ಥಳಕ್ಕೆ ಕಳುಹಿಸಿದಳು. ಒಂದು ಸಲವಂತೂ ತನ್ನ ಸಂಶೋಧನಾಲಯದಲ್ಲಿದ್ದ ಸುಮಾರು ಹತ್ತುಲಕ್ಷ ಫ್ರಾಂಕ್ ಬೆಲೆಬಾಳುವ ರೇಡಿಯಂ ಲೋಹವನ್ನು ಜೋಪಾನಮಾಡಲು ಬೋರ್ಡೋವಿಗೆ ತೆರಳಿ ಅಲ್ಲಿಯ ಬ್ಯಾಂಕಿನಲ್ಲಿ ಸುರಕ್ಷಿತವಾಗಿಟ್ಟು ಬಂದಳು; ಮನಸ್ಸಿಗೆ ತುಂಬಾ ಸಮಾಧಾನವಾಯಿತು. ಆ ನಂತರ ಹೇಗಾದರೂ ಯುದ್ಧದಲ್ಲಿ ಜನಸೇವೆ, ದೇಶಸೇವೆ ಮಾಡಬೇಕೆಂದು ನಿರ್ಧರಿಸಿ ವೈದ್ಯಕೀಯ ದಳವೊಂದನ್ನು ಅಣಿಮಾಡಿದಳು. ದೇಶದ ಮಹಿಳಾ ಸಂಸ್ಥೆಯೊಂದರ ನೆರವು ಪಡೆದು ಉತ್ತಮ

"ಎಕ್ಸ್‌ರೇ" ಸಲಕರಣೆಗಳಿಂದ ಸಜ್ಜಿತವಾದ "ರೇಡಿಯೊಲಾಜಿಕಲ್ ಕಾರ್" ಒಂದನ್ನು ನಿರ್ಮಿಸಿ ಇದನ್ನು ದೇಶದ ನಾನಾ ಕಡೆಗಳಲ್ಲಿದ್ದ ಆಸ್ಪತ್ರೆಗಳಿಗೆ ಕೊಂಡೊಯ್ದು ಸಹಾಯ ಮಾಡಿದಳು. ಇದಕ್ಕೆ ಮೊದಲು ಯುದ್ಧದಲ್ಲಿ ಗಾಯಗೊಂಡ ಸೈನಿಕರ ಮೈಯ್ಯಲ್ಲಿ ಸೇರಿಹೋಗಿದ್ದ ಗುಂಡನ್ನಾಗಲೀ, ಷೆಲ್ ಚೂರುಗಳನ್ನಾಗಲೀ ಹೊರತೆಗೆಯಲು ವೈದ್ಯರು ಬಹಳ ಹೆಣಗಾಡಬೇಕಿತ್ತು. ಆದರೆ ಮೇರಿಯ ಹೊಸ ಸಾಧನದಿಂದ ವೈದ್ಯರ ಶ್ರಮ ಬಹುಮಟ್ಟಿಗೆ ಕಡಿಮೆಯಾಗಿ ಸಹಸ್ರಾರು ಗಾಯಗೊಂಡ ಸೈನಿಕರು ಬದುಕಿಕೊಂಡರು. ಶಸ್ತ್ರ ಚಿಕಿತ್ಸೆ ಸುಲಭವಾಯಿತು. ಮುಂದೆ ಸುಮಾರು ಇಪ್ಪತ್ತು–ಮೂವತ್ತು ಮೋಟರ್ ಕಾರ್‌ಗಳನ್ನು "ರೇಡಿಯೋಲಾಜಿಕಲ್ ಕಾರ್"ಗಳಾಗಿ ಮಾರ್ಪಡಿಸಿ ಬಹು ಸಹಾಯಮಾಡಿದಳು. ಇದಲ್ಲದೆ ಸುಮಾರು ಇನ್ನೂರು ಆಸ್ಪತ್ರೆಗಳಲ್ಲಿ "ಎಕ್ಸ್‌ರೇ" ಸಲಕರಣೆಗಳನ್ನು ಜೋಡಿಸಿಕೊಟ್ಟು ಲಕ್ಷಾಂತರ ಸೈನಿಕರ ಪ್ರಾಣದಾನಮಾಡಿದಳು. ಈ ಬಗೆಯ ಮೋಟಾರ್‌ಕಾರುಗಳನ್ನು ಸೈನಿಕರು ಮಮತೆಯಿಂದ "ಪುಟ್ಟ ಕ್ಯೂರಿ" ಎಂದು ಕರೆಯುತ್ತಿದ್ದರು. ಒಮ್ಮೆ ಯುದ್ಧರಂಗದಲ್ಲಿ ಸಂಚರಿಸುತ್ತಿದ್ದಾಗ ಅಪಘಾತಕ್ಕೀಡಾಗಿ ದೈವಾನುಗ್ರಹದಿಂದ ಪಾರಾದಳು. ತನ್ನಲ್ಲಿದ್ದ ನೋಬೆಲ್ ಬಹುಮಾನದ ಹಣವನ್ನೂ, ಅಲ್ಪಸ್ವಲ್ಪ ಚಿನ್ನವನ್ನೂ ಫ್ರಾನ್ಸ್ ಸರಕಾರಕ್ಕೆ ನೀಡಿ ಯುದ್ಧದ ಸಾಲಪತ್ರಗಳನ್ನು ಪಡೆದಳು. ಘೋರಯುದ್ಧದಲ್ಲಿ ನಿಂತು ಜಯದಲ್ಲಿ ಫ್ರಾನ್ಸ್ ಪಾಲುಗೊಂಡಾಗ ಮೇರಿಗಾದ ಸಂತೋಷ ವರ್ಣಿಸಲಸದಳ.

ಶಾಂತಿ ನೆಲಸಿದ ಮೇಲೆ ಎಂದಿನಂತೆ ಅವಳ ದೃಷ್ಟಿ ಸಂಶೋಧನೆಗಳ ಕಡೆಗೆ ಸಾಗಿತು. ಹಿರಿಯ ಮಗಳು ಐರಿನ್ ತಾಯಿಯ ಭೌತವಿಜ್ಞಾನ ಸಂಶೋಧನೆಗಳಲ್ಲಿ ಉತ್ಸಾಹದಿಂದ ಪಾಲುಗೊಳ್ಳುತ್ತಿದ್ದಳು. ಅಮೆರಿಕಾ ದೇಶವನ್ನು ಭೇಟಿ ಮಾಡುವಂತೆ ಅನೇಕ ಆಹ್ವಾನಗಳು ಬರತೊಡಗಿದವು. ನ್ಯೂಯಾರ್ಕಿನ ಹೆಸರಾಂತ ಪತ್ರಿಕೆಯೊಂದರ ಸಂಪಾದಕಿ ಮೆಲೊನಿ ತಾನೇ ಸ್ವತಃ ಮೇಡಂ ಕ್ಯೂರಿಯನ್ನು ಭೇಟಿ ಮಾಡಿ ಆಹ್ವಾನಿಸಿದಳು. ಅಲ್ಲದೆ ಒಂದು ಲಕ್ಷ ಡಾಲರ್ ನಿಧಿಯೊಂದನ್ನು ಏರ್ಪಡಿಸಿ, ಒಂದು ಗ್ರಾಮ್ ರೇಡಿಯಂ ಲೋಹವನ್ನು ಕೊಂಡು ಸತ್ಕಾರ ಸಭೆಯೊಂದರಲ್ಲಿ ಸಮರ್ಪಿಸಬೇಕೆಂದು ನಿರ್ಧರಿಸಿದಳು. ೧೯೨೧ ನೆ ಏಪ್ರಿಲ್ ತಿಂಗಳಲ್ಲಿ ಮೇರಿ

ಅಮೇರಿಕಾಕ್ಕೆ ಪ್ರಯಾಣ ಬೆಳೆಸಿದಳು. ಅಲ್ಲಿ ಅವಳಿಗೆ ಅಭೂತಪೂರ್ವ ಸ್ವಾಗತ ದೊರೆಯಿತು. ಅಮೇರಿಕಾದ ಅನೇಕ ವಿಶ್ವವಿದ್ಯಾನಿಲಯಗಳು, ನಗರ ಸಭೆಗಳು, ಸಂಸ್ಥೆಗಳು ಈಕೆಯನ್ನು ಗೌರವಿಸಿದವು. ಇಡೀ ಅಮೇರಿಕಾ ದೇಶವೇ ಸ್ವಾಗತ ನೀಡಿತೆಂದರೆ ಉತ್ಪ್ರೇಕ್ಷೆಯಾಗಲಾರದು. ಮೇ ತಿಂಗಳಿನ ೨೦ ನೆ ತಾರೀಕು "ವೈಟ್ ಹಾಲಿ" ನಲ್ಲಿ ದೊಡ್ಡ ಸಮಾರಂಭವೇರ್ಪಟ್ಟಿತು. ಅಂದು ಸಂಯುಕ್ತ ಸಂಸ್ಥಾನದ ಅಧ್ಯಕ್ಷ ಹಾರ್ಡಿಂಗ್ ಕಿಕ್ಕಿರಿದ ಸಭೆಯಲ್ಲಿ ರೇಡಿಯಂ ಅನ್ನು ಈಕೆಗೆ ಅರ್ಪಿಸಿ ಗೌರವಿಸಿದನು. ಕೆಲವು ಮಾಸಗಳು ದೇಶದ ನಾನಾ ಕಡೆ ಸುತ್ತಾಡಿ, ಅಮೇರಿಕಾದ ಗೌರವವನ್ನು ಸಂಪಾದಿಸಿ ಜೂನ್ ತಿಂಗಳಲ್ಲಿ ಫ್ರಾನ್ಸಿಗೆ ಹಿಂತಿರುಗಿದಳು. ಯೂರೋಪಿನ ನಾನಾ ದೇಶಗಳಲ್ಲಿ ಮೇರಿಯ ಕೀರ್ತಿಯು ಇಮ್ಮಡಿಸಿತು. ೧೯೨೩ ರಲ್ಲಿ ಇವರ ಸಂಶೋಧನೆಯ "ರಜತೋತ್ಸವ" (Silver Jubilee) ಬಹು ವೈಭವದಿಂದ ನೆರವೇರಿತು. ಫ್ರಾನ್ಸ್ ಸರಕಾರ ವರ್ಷಕ್ಕೆ ನಲವತ್ತು ಸಾವಿರ ಫ್ರಾಂಕುಗಳ ವೇತನವನ್ನಿತ್ತು ಕ್ಯೂರಿಯನ್ನು ಗೌರವಿಸಿತು. ಇಷ್ಟಾದರೂ ಮೇರಿ ತನ್ನ ತಾಯ್ನಾಡನ್ನು ಮರೆಯದೆ, ಸಾರ್ವಜನಿಕರ ಸಹಾಯದಿಂದ ವಾರ್ಸಾ ಪಟ್ಟಣದಲ್ಲಿ ಅತ್ಯಾಧುನಿಕವಾಗಿ ಸಜ್ಜುಗೊಳಿಸಿದ "ರೇಡಿಯಂ ಇನ್‌ಸ್ಟಿಟ್ಯೂಟ್" ಒಂದನ್ನು ತೆರೆದು ಪೋಲೆಂಡಿನ ಜನರಿಗೆ ಉಪಕಾರವೆಸಗಿದಳು. ೧೯೩೨ ನೆ ಇಸವಿಯಲ್ಲಿ ಅಮೆರಿಕ ಮತ್ತೊಮ್ಮೆ ಈ ಪ್ರತಿಭಾವಂತ ವಿಜ್ಞಾನಿಯನ್ನು ಬರಮಾಡಿಕೊಂಡು, ಒಂದು ಗ್ರಾಮ್ ರೇಡಿಯಂ ಅನ್ನು ಅರ್ಪಿಸಿ, ಎರಡನೆಯ ಬಾರಿ ವಿಶೇಷವಾಗಿ ಸನ್ಮಾನಿಸಿತು.

ಈ ವೇಳೆಗೆ ಮೇಡಂ ಕ್ಯೂರಿಗೆ ಅಮರವಾದ ಕೀರ್ತಿ ಸಂದು ಆಕೆ ಜಗತ್ತಿನ ಶ್ರೇಷ್ಠ ವಿಜ್ಞಾನಿಗಳ ಶ್ರೇಣಿಗೆ ಸೇರಿದಳು; ಚಿರಸ್ಥಾಯಿಯಾದ ಸ್ಥಾನವನ್ನು ಸಂಪಾದಿಸಿದಳು. ಮುಪ್ಪು ಬಂದಂತೆ ಬಾಳಿನಲ್ಲಿ ಹೆಚ್ಚು ಹೆಚ್ಚು ಗೆಲವು ತೋರಿತು. ಆರ್ಥಿಕ ಸ್ಥಿತಿಯು ಅನುಕೂಲವಾಯಿತಾದರೂ, ಎಂದಿನಂತೆ ಸರಳವಾದ, ನಿರಾಡಂಬರವಾದ ಜೀವನವನ್ನು ಸಾಗಿಸುತ್ತಿದ್ದಳು. ದಿನ ಕಳೆದಂತೆಲ್ಲಾ ಮನಸ್ಸು ಪರಿಪಕ್ವವಾಯಿತು. ತನಗೆ ಅರವತ್ತೈದು ವರ್ಷಗಳಾದರೂ, ಎಂದಿನಂತೆ ತಪ್ಪದೆ ಸಂಶೋಧನಾಲಯಕ್ಕೆ ಹೋಗಿ ಕೆಲಸ ಮಾಡುತ್ತಿದ್ದಳು. ಅನೇಕ ಮಂದಿ ವಿಜ್ಞಾನ ವಿದ್ಯಾರ್ಥಿಗಳಿಗೆ ಮಾರ್ಗ

ದರ್ಶನ ಮೇರಿಯದೇ. ಹಿರಿಯ ಮಗಳು ಐರಿನ್ ತಾಯಿಯಷ್ಟೇ ಆಸಕ್ತಿಯನ್ನು ವಿಜ್ಞಾನದಲ್ಲಿ ತೋರಿಸುತ್ತಿದ್ದಳು. ಈ ವಿಷಯ ಮೇರಿಗೆ ತುಂಬಾ ನೆಮ್ಮದಿಯನ್ನು ತರುತ್ತಿತ್ತು. ಮುಂದೆ ಅಲ್ಲೇ ಸಂಶೋಧನೆ ನಡೆಸುತ್ತಿದ್ದ ಫ್ರೆಡರಿಕ್ ಜ್ಯೂಲಿಯಟ್ ಎಂಬಾತನನ್ನು ಐರಿನ್ ಮದುವೆಯಾದಳು. ಕಿರಿಯ ಮಗಳು ಈವ್ ಮಾತ್ರ ತಾಯಿಯೊಡನೆಯೆ ಉಳಿದಳು. ಮೇರಿಯ ಚಾಲಕತ್ವದಲ್ಲಿ, ಸಂಶೋಧನಾಲಯದಲ್ಲಿ ವಿದ್ಯುತ್‌ವಿಕಿರಣಾಕ್ರಿಯೆಯ ಮೇಲೆ ಪ್ರಯೋಗಗಳು ನಡೆದು ಸುಮಾರು ನಾನೂರು ಎಂಬತ್ತಮೂರು ಉನ್ನತ ರೀತಿಯ ವಿಜ್ಞಾನ ಲೇಖನಗಳು ಪ್ರಕಟವಾದವು. ಮೇರಿ ಸ್ವತಃ ಮೂವತ್ತೊಂದು ಪ್ರಬಂಧಗಳನ್ನೂ ಮೂರು ಸಣ್ಣ ಪುಸ್ತಕಗಳನ್ನೂ ಅನೇಕ ಲೇಖನಗಳನ್ನೂ ಬರೆದು ಪ್ರಕಟಿಸಿ ಸಾರಸ್ವತ ಜಗತ್ತಿಗೆ ಉಪಕಾರಮಾಡಿದಳು.

ವಯಸ್ಸಾದಂತೆ, ಮುಪ್ಪಡರಿದಂತೆ, ದೇಹಶಕ್ತಿ ಕುಂದುತ್ತಾ ಬಂದಿತು. ಆದರೂ ಪ್ರಯೋಗ ಶಾಲೆಗೆ ಹೋಗುವುದನ್ನು ಮಾತ್ರ ಆಕೆ- ನಿಲ್ಲಿಸಿರಲಿಲ್ಲ, ಅದನ್ನು ಅಭಿವೃದ್ಧಿ ಪಡಿಸುವುದೇ ಅವಳ ಮನಸ್ಸನ್ನು ಸದಾ ಆವರಿಸಿತ್ತು. ಸುಮಾರು ೧೯೨೦ ರ ಹೊತ್ತಿಗೆ ಎರಡು ಕಣ್ಣುಗಳಲ್ಲೂ ಪರೆ ತೋರಿಬಂದು ದೃಷ್ಟಿ ಕಡಿಮೆಯಾಯಿತು. ಇದಾದ ಮೂರು ಸಂವತ್ಸರಗಳ ಬಳಿಕ ಶಸ್ತ್ರ ಚಿಕಿತ್ಸೆಯೂ ಆಯಿತು. ಮೂರು ಸಲ ಶಸ್ತ್ರಚಿಕಿತ್ಸೆ ನಡೆದು, ಹತ್ತು ವರ್ಷಗಳಾದ ಮೇಲೆ ದೃಷ್ಟಿ ಮೊದಲಿನಂತೆಯೇ ಆಯಿತು; ಆದರೂ ರೋಗಗಳು ಒಂದೊಂದಾಗಿ ತಲೆ ಹಾಕುತ್ತ ದಿನೇ ದಿನೇ ನಿಶ್ಶಕ್ತಿ ಹೆಚ್ಚಾಯಿತು. ಜ್ವರ, ನಡುಕ, ಕ್ರಮೇಣ ಉಲ್ಬಣಿಸಿತು. "ಸ್ಯಾನಿಟೋರಿಯಂ" ಅನ್ನು ಸೇರಿದರೂ ಅಷ್ಟು ಗುಣ ತೋರಲಿಲ್ಲ. ಹತ್ತಾರು ವರ್ಷಗಳ ರೇಡಿಯಂ ಸಂಪರ್ಕದಿಂದ ಮೇರಿಯ ದೇಹದ ಮೇಲೆ ವಿಶೇಷ ಪರಿಣಾಮ ಉಂಟಾಗಿ ಬದುಕುವ ಸೂಚನೆಗಳೇ ದೂರವಾದವು. ಕೊನೆಗೆ ೧೯೩೪ ನೆ ಜುಲೈ ೪ ನೆ ತಾರೀಕು ಪ್ರಾತಃಕಾಲ ಮೇರಿಯ ಜೀವಜ್ಯೋತಿ ನಂದಿಹೋಯಿತು. ೬ ನೆಯ ತಾರೀಕು ಶುಕ್ರವಾರ ಅವಳ ಅಪೇಕ್ಷೆ ಪಟ್ಟಿದ್ದಂತೆ ನಿರಾಡಂಬರವಾದ ಸರಳವಾದ ರೀತಿಯಲ್ಲಿ ಪಿಯರ್ ಕ್ಯೂರಿಯ ಸಮಾಧಿಯ ಬಳಿಯೇ ಶವಸಂಸ್ಕಾರವಾಯಿತು. ಇದರಿಂದ ವಿಜ್ಞಾನ ಪ್ರಪಂಚಕ್ಕೆ ಆದ ನಷ್ಟ ಅಪಾರವಾದರೂ, ವಿಜ್ಞಾನದ ಬೆಳವಣಿಗೆಗೆ ಆಕೆ ಸಲ್ಲಿಸಿದ ಕಾಣಿಕೆ ಅನುಪಮವಾದುದು.

# ಶ್ರೀನಿವಾಸ ರಾಮಾನುಜನ್

ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದ ಗಣಿತ ವಿಜ್ಞಾನ ಶಾಖೆಯ ಪ್ರೊಫೆಸರಾದ ಹಾರ್ಡಿಯವರಿಗೆ ಬಹಳ ಆಶ್ಚರ್ಯವಾಗಿತ್ತು. ಮದರಾಸಿನ ಯುವಕನೊಬ್ಬ ತಮಗೆ ಕಳುಹಿಸಿದ್ದ ಪತ್ರವನ್ನು ಮತ್ತೆ ಮತ್ತೆ ಓದಿದರು. ಓದಿ ಸಂತೋಷಪಟ್ಟರು. ಅದರೊಡನೆ ಕಳುಹಿಸಿದ್ದ ಗಣಿತವಿಜ್ಞಾನದ ಅನೇಕ ಸಮಸ್ಯೆಗಳನ್ನೂ, ಈ ಸಮಸ್ಯೆಗಳ ಫಲಿತಾಂಶಗಳನ್ನೂ ಅಧ್ಯಯನ ಮಾಡಿ ಯುವಕ ಅತ್ಯಂತ ಮೇಧಾವಿ, ಪ್ರತಿಭಾನ್ವಿತ ಎಂದು ಮೆಚ್ಚಿಕೊಂಡರು. ಏನಾದರೂ ಚಿಂತೆಯಿಲ್ಲ ಈತನನ್ನು ತಮ್ಮಲ್ಲಿಗೆ ಬರಮಾಡಿಕೊಳ್ಳಬೇಕೆಂದೂ ನಿರ್ಧರಿಸಿದರು. ಸಾಮಾನ್ಯ ವಯಸ್ಸಿನ ಯುವಕ ಗಣಿತವಿಜ್ಞಾನದ ವಿಖ್ಯಾತ ಪ್ರೊಫೆಸರೊಬ್ಬರ ಮೆಚ್ಚುಗೆಯನ್ನು ಪಡೆಯುವುದೆಂದರೆ ನಿಜಕ್ಕೂ ಅದೊಂದು ಸಾಮಾನ್ಯವಾದ ಸಂಗತಿಯಲ್ಲ. ಈ ಬಗೆಯ ವಿಶೇಷ ರೀತಿಯ ಮೆಚ್ಚುಗೆಯನ್ನು ಸಂಪಾದಿಸಿದವನೇ ಶ್ರೀನಿವಾಸ ರಾಮಾನುಜನ್. ವಿಜ್ಞಾನ ವಲಯಗಳಲ್ಲಿ ಇಂದಿಗೂ ಈತನನ್ನು ಗಣಿತ ವಿಜ್ಞಾನದ ಶ್ರೇಷ್ಠ ವಿಜ್ಞಾನಿಗಳ ಶ್ರೇಣಿಗೆ ಸೇರಿಸಿ ಗೌರವಿಸಿದ್ದಾರೆ. ಗಣಿತ ವಿಜ್ಞಾನದಲ್ಲಿ ಭಾರತಕ್ಕೊಂದು ಉನ್ನತವಾದ ಸ್ಥಾನವಿದೆ. ಈ ವಿಜ್ಞಾನದಲ್ಲಿ ಬಹು ಪ್ರಾಮುಖ್ಯ ಚಿಹ್ನೆಯಾದ ಸೊನ್ನೆಯನ್ನು ಮೊಟ್ಟಮೊದಲಿಗೆ ಕಂಡುಹಿಡಿದ ಕೀರ್ತಿ ನಮ್ಮ ದೇಶಕ್ಕೆ ಸಲ್ಲುತ್ತದೆ. ಅತಿ ಹಿಂದಿನ ಕಾಲದಲ್ಲೇ ಆರ್ಯಭಟ್ಟ, ವರಾಹ ಮಿಹಿರ, ಭಾಸ್ಕರಾಚಾರ್ಯ ಮೊದಲಾದ ಸುಪ್ರಸಿದ್ಧ ಗಣಿತ ವಿಜ್ಞಾನಿಗಳು ನಮ್ಮ ದೇಶದಲ್ಲಿದ್ದರು. ಈಚಿನ ವರ್ಷಗಳಲ್ಲಿ ಜನಿಸಿದ ಶ್ರೀನಿವಾಸ ರಾಮಾನುಜನ್ ಅವರೂ ಸಹ ಇವರಂತೆಯೇ ಅಸಾಧಾರಣವಾದ ಪ್ರತಿಭೆಯಿಂದ ಭಾರತೀಯ ವಿಜ್ಞಾನಕ್ಕೊಂದು ವಿಶೇಷವಾದ ಗೌರವವನ್ನು ಸಂಪಾದಿಸಿದರೆಂದರೆ ಉತ್ಪ್ರೇಕ್ಷೆಯಾಗಲಾರದು.

ಮದರಾಸು ಪ್ರಾಂತದ ಕುಂಭಕೋಣಂ ಎಂಬ ಊರಿನಲ್ಲಿ ಸಾಮಾನ್ಯ ವರ್ಗಕ್ಕೆ ಸೇರಿದ ಬ್ರಾಹ್ಮಣನೊಬ್ಬನಿದ್ದನು. ಈತನು ಅಷ್ಟು ಹಣವಂತನಲ್ಲ

ದಿದ್ದರೂ ತನ್ನ ಒಳ್ಳೆಯ ನಡತೆಯಿಂದ ಅಲ್ಲಿಯ ಜನರ ಪ್ರೀತಿಗೌರವಗಳನ್ನು ಸಂಪಾದಿಸಿದ್ದನು. ಅದೇ ಊರಿನ ದೊಡ್ಡ ವರ್ತಕನೊಬ್ಬನ ಅಂಗಡಿಯಲ್ಲಿ ಗುಮಾಸ್ತೆಯಾಗಿದ್ದು ಜೀವನವನ್ನು ಸರಳವಾದ ರೀತಿಯಲ್ಲಿ ನಡೆಸುತ್ತಿದ್ದನು. ಈತನ ಪತ್ನಿ ಬಹಳ ಗುಣವಂತೆಯಾದ ಹೆಂಗಸು. ದೇವರೆಂದರೆ ಬಹಳ ಭಕ್ತಿ. ಅದೇ ಊರಿಗೆ ಸಮೀಪವಾಗಿದ್ದ ನಾಮಕ್ಕಲ್ಲಿನ ನಾಮಗಿರಿ ದೇವತೆ ಈಕೆಯ ಆರಾಧ್ಯ ದೇವತೆ. ತನಗೊಂದು ಸುಪುತ್ರನನ್ನು ಕರುಣಿಸೆಂದು ಈ ದೇವತೆಗೆ ಮೊರೆಯಿಟ್ಟಳು. ಕೊಂಚ ಕಾಲವಾದ ಮೇಲೆ ಅವಳ ಹರಕೆ ಈಡೇರಿತು. ಸರ್ವಜಿತ್ ಸಂವತ್ಸರದ ಮಾರ್ಗಶಿರ ಶುದ್ಧ ನವಮಿಯ ದಿನ ಅಂದರೆ ೧೮೮೭ನೆ ಡಿಸೆಂಬರ್ ೨೨ನೆ ತಾರೀಕು ಗಂಡು ಮಗುವೊಂದನ್ನು ಹಡೆದಳು. ಆ ಮಗುವೇ ನಮ್ಮ ದೇಶದ ಪ್ರಖ್ಯಾತ ಗಣಿತವಿಜ್ಞಾನಿಯಾದ ಶ್ರೀನಿವಾಸ ರಾಮಾನುಜನ್.

ದಂಪತಿಗಳು ಮಗುವನ್ನು ಬಹಳ ಪ್ರೀತಿಯಿಂದ ಕಾಣುತ್ತಿದ್ದರು. ಅದರಲ್ಲೂ ತಾಯಿ ಒಂದು ಗಳಿಗೆಯಾದರೂ ಸಹ ತನ್ನ ಮುದ್ದಿನ ಮಗನನ್ನು ಬಿಟ್ಟು ಕದಲುತ್ತಿರಲಿಲ್ಲ. ತನ್ನ ಮುದ್ದುಕುವರನನ್ನು ಹರಸುವಂತೆ ನಾಮ ಗಿರಿ ದೇವಿಯನ್ನು ಪ್ರತಿದಿನವೂ ತಪ್ಪದೆ ಪ್ರಾರ್ಥಿಸುತ್ತಿದ್ದಳು. ಬೆಳೆದು ದೊಡ್ಡವನಾದಮೇಲೆ ರಾಮಾನುಜನ್ ಅನೇಕಬಾರಿ "ನಾಮಕ್ಕಲ್ಲಿನ ನಾಮ ಗಿರಿ ದೇವಿ ನನಗೆ ಕನಸಿನಲ್ಲಿ ಪ್ರತ್ಯಕ್ಷಳಾಗಿ ಬೋಧಿಸುತ್ತಾಳೆ" ಎಂದು ಹೇಳುತ್ತಿದ್ದರು. ಈ ಕಾರಣದಿಂದಲೋ ಏನೋ ಅವರು ಅನೇಕವೇಳೆ ಮಧ್ಯರಾತ್ರಿಯಲ್ಲೂ ನಿದ್ದೆಯಿಂದ ಎಚ್ಚೆತ್ತು ಕ್ಲಿಷ್ಟವಾದ ಅನೇಕ ಗಣಿತದ ಸಮಸ್ಯೆಗಳನ್ನು ಬಹು ಸುಲಭವಾಗಿ ಬಿಡಿಸುತ್ತಿದ್ದರು.

ಮನೆಯ ಮುದ್ದಿನ ಮಗ ಬೆಳೆದು ದೊಡ್ಡವನಾದನು. ಹುಡುಗನಿಗೆ ಐದು ವರ್ಷ ವಯಸ್ಸಾಗಿದ್ದಾಗ ಅವನ ತಂದೆ ಅವನನ್ನು ಪ್ರಾಥಮಿಕ ಶಾಲೆಗೆ ಸೇರಿಸಿದರು. ಅಂದಿನಿಂದ ಹುಡುಗನ ವಿದ್ಯಾಭ್ಯಾಸವೂ ಮೊದಲಾಯಿತು. ತರಗತಿಯಲ್ಲಿದ್ದ ಸಾಮಾನ್ಯ ಹುಡುಗರಲ್ಲಿ ಇವನೂ ಒಬ್ಬನಾಗಿದ್ದನು. ಯಾವ ತೆರನಾದ ಅಸಾಧಾರಣ ಪ್ರತಿಭೆಯೂ ಕಂಡುಬರಲಿಲ್ಲ. ಇದೇ ರೀತಿ ಬಾಲಕ ರಾಮಾನುಜನ್‌ನ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಯಿತು. ಇದಾದ ಮೇಲೆ ಅದೇ ಊರಿನ ಮಾಧ್ಯಮಿಕ ಶಾಲೆಯನ್ನು ಸೇರಿ ತನ್ನ ಅಭ್ಯಾಸವನ್ನು

ಮುಂದುವರಿಸಿದನು. ಮಾಧ್ಯಮಿಕ ಶಾಲೆಯ ಕೊನೆಯ ವರ್ಷದ ಪರೀಕ್ಷೆಯಲ್ಲಿ ಪ್ರಥಮ ವರ್ಗದಲ್ಲಿ ಉತ್ತೀರ್ಣನಾದುದಲ್ಲದೆ ಇಡೀ ತಂಜಾವೂರು ಜಿಲ್ಲೆಗೇ ಮೊದಲನೆಯವನೂ ಆಗಿದ್ದನು.

ಮಗನ ವಿದ್ಯಾಭ್ಯಾಸದಲ್ಲಿ ತಂದೆತಾಯಿಗಳಿಗೆ ಅಪಾರವಾದ ಆಸಕ್ತಿ. ತಮ್ಮ ಮಗ ಚೆನ್ನಾಗಿ ಓದಿ ಪದವೀಧರನಾಗಿ ಒಳ್ಳೆಯ ಉದ್ಯೋಗವನ್ನು ಕೈಕೊಳ್ಳಲೆಂಬ ಹಂಬಲ. ಅಂತೆಯೇ ರಾಮಾನುಜನ್ ಕುಂಭಕೋಣಂನಲ್ಲಿದ್ದ ಪ್ರೌಢಶಾಲೆಗೂ ಸೇರಿದನು. ಹುಡುಗನು ಚುರುಕಾಗಿದ್ದು ಪಾಠ ಪ್ರವಚನಗಳಲ್ಲಿ ವಿಶೇಷ ಆಸಕ್ತಿಯನ್ನು ತೋರಿಸುತ್ತಿದ್ದನು. ಇತರ ಹುಡುಗರಂತೆ ಉಪಾಧ್ಯಾಯರು ಹೇಳಿದುದನ್ನು ಕೇಳಿಕೊಂಡು ಸುಮ್ಮನೆ ಕೂಡುವ ಸ್ವಭಾವ ರಾಮಾನುಜನ್‌ಗೆ ಸರಿಹೋಗುತ್ತಿರಲಿಲ್ಲ. ಅದರಲ್ಲೂ ಗಣಿತದ ಪಾಠವೆಂದರೆ ರಾಮಾನುಜನ್‌ಗೆ ಎಲ್ಲಿಲ್ಲದ ಉತ್ಸಾಹ ಉಂಟಾಗುತ್ತಿತ್ತು. ಅನೇಕ ಬಾರಿ ಇವನ ಪ್ರಶ್ನೆಗಳಿಗೆ ಉತ್ತರವನ್ನು ಹೇಳಲು ಉಪಾಧ್ಯಾಯರೇ ಅಸಮರ್ಥರಾಗುತ್ತಿದ್ದರು. ಕೆಲವು ಸಲ ಉಪಾಧ್ಯಾಯರ ಉತ್ತರದಿಂದ ತೃಪ್ತನಾಗದೆ ಆ ಪ್ರಶ್ನೆಯನ್ನು ತಾನೇ ಮೆಲುಕು ಹಾಕಿಕೊಳ್ಳುತ್ತಿದ್ದನು. ಒಂದು ಬಾರಿ ಗಣಿತದ ತರಗತಿಯಲ್ಲಿ ಉಪಾಧ್ಯಾಯರು ಭಾಗಾಹಾರದ ಲೆಕ್ಕಗಳನ್ನು ವಿವರಿಸುತ್ತಾ ಯಾವುದಾದರೂ ಒಂದು ಸಂಖ್ಯೆಯನ್ನು ಅದೇ ಸಂಖ್ಯೆಯಿಂದ ಭಾಗಿಸಿದಾಗ ಬರುವ ಭಾಗಲಬ್ಧ ಒಂದು ಎಂಬುದಾಗಿ ಹೇಳಿದರು. ಇದನ್ನು ಕೇಳಿದ ರಾಮಾನುಜನ್ ತಟ್ಟನೆ ಎದ್ದು ನಿಂತು, “ಸಾರ್, ಸೊನ್ನೆಯನ್ನು ಸೊನ್ನೆಯಿಂದ ಭಾಗಿಸಿದಾಗ ಬರುವ ಭಾಗಲಬ್ಧವು ಒಂದೇ?” ಎಂಬ ಪ್ರಶ್ನೆಯನ್ನು ಕೇಳಿದನು. ಇದು ಉಪಾಧ್ಯಾಯರಿಗೆ ಬಹಳ ಕಷ್ಟಕ್ಕಿಟ್ಟುಕೊಂಡಿತು. ಸರಿಯಾದ ಉತ್ತರವನ್ನು ಹೇಳಲು ಬಹಳ ಶ್ರಮಪಡಲೂ ಬೇಕಾಯಿತು. ಆಳವಾಗಿ ಗಣಿತ ವಿಜ್ಞಾನವನ್ನು ಅಭ್ಯಾಸಮಾಡಿರುವವರಿಗೆ ಈ ಸೊನ್ನೆಯ ಬೆಲೆ ಮತ್ತು ಮಹತ್ವ ಕೊಂಚಮಟ್ಟಿಗಾದರೂ ಅರಿವಾಗುತ್ತದೆ. ಅಂತೂ ಅಂದಿನಿಂದ ರಾಮಾನುಜನ್ ಇತರ ಹುಡುಗರಂತೆ ಸಾಮಾನ್ಯನಲ್ಲ, ಬಹಳ ಚುರುಕಾದ ಹುಡುಗ ಎಂದು ಉಪಾಧ್ಯಾಯರು ಅಭಿಪ್ರಾಯಪಟ್ಟರು.

ಹೀಗೆ ಆಗಾಗ ಉಂಟಾಗುತ್ತಿದ್ದ ಪ್ರಸಂಗಗಳಿಂದ ರಾಮಾನುಜನ್‌ನಿಗೆ ಗಣಿತದಲ್ಲಿ ವಿಶೇಷ ಆಸಕ್ತಿ ಇರುವುದು ತಿಳಿದು ಬಂದಿತು. ಅಲ್ಲದೆ ಮನೆ

ಯಲ್ಲೂ ಸಹ ಗಣಿತದ ಬಗೆಬಗೆಯ ಲೆಕ್ಕಗಳನ್ನು ಹೊಸ ಹೊಸ ರೀತಿಯಲ್ಲಿ ಮಾಡುವುದೇ ಇವನ ಹವ್ಯಾಸವಾಯಿತು. ಇವನು ಹೈಸ್ಕೂಲಿನಲ್ಲಿ ಓದುತ್ತಿದ್ದರೂ ಕಾಲೇಜಿನ ದೊಡ್ಡ ದೊಡ್ಡ ತರಗತಿಗಳ ಗಣಿತ ವಿಜ್ಞಾನದ ಪಠ್ಯಪುಸ್ತಕಗಳನ್ನು ವಿಶೇಷ ಆಸಕ್ತಿಯಿಂದ ಅಧ್ಯಯನಮಾಡಿ ಬಹು ಸುಲಭರೀತಿಯಲ್ಲಿ ಅಲ್ಲಿ ಕಂಡು ಬರುತ್ತಿದ್ದ ಕ್ಲಿಷ್ಟಸಮಸ್ಯೆಗಳಿಗೆ ಉತ್ತರಗಳನ್ನು ಕಂಡುಹಿಡಿಯುತ್ತಿದ್ದನು. ಇದಕ್ಕೆ ಒಂದು ನಿದರ್ಶನವನ್ನು ಕೊಡಬಹುದು. ರಾಮಾನುಜನ್‌ನ ಪಕ್ಕದ ಮನೆಯ ಒಬ್ಬ ಹುಡುಗ ಆಗ ಬಿ.ಎ. ತರಗತಿಯಲ್ಲಿ ಓದುತ್ತಿದ್ದನು. ಆ ಕಾಲೇಜಿನ ವಿದ್ಯಾರ್ಥಿಯ ಬಳಿಯಿದ್ದ ಟ್ರಿಗೊನಮೆಟ್ರಿ (ಕೋನಶಾಸ್ತ್ರ)ಎಂಬ ಗಣಿತವಿಜ್ಞಾನದ ಪುಸ್ತಕವನ್ನು ತಂದು ಅಲ್ಲಿದ್ದ ಎಲ್ಲಾ ಲೆಕ್ಕಗಳನ್ನೂ ಕಷ್ಟವಿಲ್ಲದೆ ಒಂದೆರಡು ದಿನಗಳಲ್ಲೇ ಮಾಡಿ ಮುಗಿಸಿದನಂತೆ. ಕೆಲವು ಬಾರಿ ಗಣಿತದ ಪುಸ್ತಕಗಳಲ್ಲಿನ ಕ್ಲಿಷ್ಟವಾದ ಲೆಕ್ಕಗಳನ್ನು ಮಾಡಲು ಆ ವಿದ್ಯಾರ್ಥಿಗೆ ಬಹಳ ಕಷ್ಟವಾಗುತ್ತಿತ್ತು. ಆಗ ಅವನೂ ಸಹ ಈ ಬಾಲಕ ರಾಮಾನುಜನ್‌ನ ಸಹಾಯದಿಂದ ಆ ಬಗೆಯ ಲೆಕ್ಕಗಳನ್ನು ಮಾಡುವ ವಿಧಾನಗಳನ್ನು ಕಲಿತುಕೊಳ್ಳುತ್ತಿದ್ದನಂತೆ. ಹೀಗೆ ರಾಮಾನುಜನ್ ಟ್ರಿಗೊನಮೆಟ್ರಿಯ ಅಭ್ಯಾಸವನ್ನು ಮುಂದುವರಿಸಿ ಕೆಲವು ಸಮಸ್ಯೆಗಳಿಗೆ ತನ್ನದೇ ಆದ ಹೊಸ ವಿಧಾನಗಳಿಂದ ಉತ್ತರಗಳನ್ನು ಯಾರ ಸಹಾಯವೂ ಇಲ್ಲದೆ ಕಂಡುಹಿಡಿದನಂತೆ. ಆದರೆ ಅವನೆಲ್ಲಾ ಆಯಿಲರ್ ಎಂಬ ಸುಪ್ರಸಿದ್ಧ ಗಣಿತಶಾಸ್ತ್ರಜ್ಞನ ಪುಸ್ತಕಗಳಲ್ಲಿವೆಯೆಂದು ಅವನ ನೆರೆ ಮನೆಯ ಕಾಲೇಜಿನ ಹುಡುಗ ತಿಳಿಸಿದನು. ಆಗ ರಾಮಾನುಜನ್ ಬಹುಶಃ ಪ್ರೌಢಶಾಲೆಯ ಮೂರನೆಯ ತರಗತಿಯಲ್ಲಿ ಓದುತ್ತಿರಬಹುದು. ಈ ಸಂಗತಿಯನ್ನು ಕೇಳಿ ತನ್ನ ಲೆಕ್ಕದ ಹಾಳೆಗಳನ್ನೆಲ್ಲಾ ಮೂಲೆಗೆ ಬೀಸಾಡಿದನಂತೆ. ಯಾವುದನ್ನೂ ಮನಸ್ಸಿಗೆ ಅಷ್ಟಾಗಿ ಹಚ್ಚಿಕೊಳ್ಳಲಿಲ್ಲ.

ಕಾರ್ ಎಂಬ ಮತ್ತೊಬ್ಬ ಗಣಿತ ವಿಜ್ಞಾನದ ಮೇಧಾವಿ ಇದ್ದಾನೆ. ಈತನೂ ಸಹ ಅನೇಕ ಉತ್ತಮ ಗಣಿತ ವಿಜ್ಞಾನದ ಪುಸ್ತಕಗಳನ್ನು ಬರೆದಿದ್ದಾನೆ. ಈತನ ಗಣಿತದ ಪುಸ್ತಕವೊಂದು ಹೇಗೋ ರಾಮಾನುಜನ್‌ನ ಕೈಗೂ ಸಿಕ್ಕಿತು. ಬಹಳ ಸಂತೋಷವಾಯಿತು. ವಿಶೇಷ ಆಸಕ್ತಿಯಿಂದ ಪುಸ್ತಕವನ್ನು ಓದಿದನು. ಒಂದೆರಡು ದಿನಗಳಲ್ಲೇ ಅದರಲ್ಲಿದ್ದ ಅನೇಕ

ಲೆಕ್ಕಗಳಿಗೆ ಉತ್ತರಗಳನ್ನೂ ಕಂಡುಹಿಡಿದನು. ಈ ಕ್ಲಿಷ್ಟವಾದ ಗ್ರಂಥದ ಅಧ್ಯಯನದಿಂದ ಬಾಲಕ ರಾಮಾನುಜನ್‌ಗೆ ಗಣಿತದ ಉನ್ನತರೀತಿಯ ಸಮಸ್ಯೆಗಳಲ್ಲಿ ಹೆಚ್ಚು ಪರಿಶ್ರಮ ಉಂಟಾಯಿತು. ಎಂದಿನಂತೆ ಮೆಟ್ರಿಕ್ಯು ಲೇಷನ್ ಪರೀಕ್ಷೆಯನ್ನೂ ಉತ್ತಮ ರೀತಿಯಲ್ಲಿ ಪಾಸುಮಾಡಿದನು. ಈ ಪರೀಕ್ಷೆಯಲ್ಲಿ ಇವನಿಗೆ ಬಹು ಆಸಕ್ತಿಯಿದ್ದ ಗಣಿತದಲ್ಲೂ ಮತ್ತು ಇಂಗ್ಲಿಷ್‌ನಲ್ಲೂ ಅತ್ಯಂತ ಹೆಚ್ಚಿನ ನಂಬರುಗಳು ಬಂದಿದ್ದವು.

ತನ್ನ ವಿದ್ಯಾಭ್ಯಾಸವನ್ನು ಮುಂದುವರಿಸಲು ಕುಂಭಕೋಣದಲ್ಲಿದ್ದ ಕಾಲೇಜನ್ನು ಸೇರಿದನು. ಇವನಿಗೆ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಗಣಿತ ವಿಭಾಗದಲ್ಲೂ ಮತ್ತು ಇಂಗ್ಲಿಷ್ ವಿಭಾಗದಲ್ಲೂ ಅತ್ಯಂತ ಹೆಚ್ಚಿನ ಅಂಕಗಳು ಬಂದಿದ್ದ ಕಾರಣ 'ಸುಬ್ರಹ್ಮಣ್ಯಂ ಸ್ಕಾಲರ್‌ಷಿಪ್' ಎಂಬ ವೇತನ ದೊರೆಯಿತು. ಮಗನ ಈ ಬಗೆಯ ವಿದ್ಯಾ ಪ್ರಗತಿಯನ್ನು ನೋಡಿ ತಂದೆ ತಾಯಿಗಳು ಬಹಳ. ಹೆಮ್ಮೆ ಪಟ್ಟುಕೊಂಡರು. ಕಾಲೇಜಿನಲ್ಲಿ ಓದುವುದೆಂದರೆ ಹೆಚ್ಚಿನ ಹಣವನ್ನು ಖರ್ಚುಮಾಡಬೇಕು. ಇದಕ್ಕೆ ಬಡಗುಮಾಸ್ತೆಯಾಗಿದ್ದ ರಾಮಾನುಜನ ತಂದೆ ಬಹಳ ಕಷ್ಟಪಡಬೇಕಾಗಿತ್ತು. ಆದರೆ ತನ್ನ ಮಗನಿಗೆ ವಿದ್ಯಾರ್ಥಿವೇತನ ದೊರೆತದ್ದರಿಂದ ತಂದೆಗೆ ಈ ಕಷ್ಟತಪ್ಪಿ ಬಹಳ ಸಂತೋಷವೂ ಆಯಿತು. ಇದರಿಂದ ಬಡ ಹುಡುಗನ ವಿದ್ಯಾರ್ಜನೆಗೆ ಅನುಕೂಲವಾದುದಲ್ಲದೆ ಒಂದು ಬಗೆಯ ಪ್ರೋತ್ಸಾಹವೂ ದೊರೆಯಿತು. ಈ ವೇಳೆಗಾಗಲೇ ಗಣಿತ ವಿಜ್ಞಾನದಲ್ಲಿ ರಾಮಾನುಜನಿಗೆ ಇದ್ದ ಆಸಕ್ತಿ ಬಹಳ ಹೆಚ್ಚಾಯಿತು. ಇದರಿಂದ ಅವನಿಗೆ ಒಂದು ಬಗೆಯ ಅನಾನುಕೂಲವೂ ಆಯಿತೆನ್ನಬಹುದು. ಇತರ ಪಾಠಗಳಲ್ಲಿದ್ದ ಆಸಕ್ತಿ ಕ್ರಮೇಣ ಕಡಮೆಯಾಗುತ್ತಾ ಬಂತು. ಅನೇಕ ಬಾರಿ ತರಗತಿಯಲ್ಲೂ ಸಹ ಇತರ ಪಾಠಗಳು ನಡೆಯುತ್ತಿರುವಾಗಲೂ ಅದರ ಕಡೆ ಗಮನವಿಡದೆ ಗಣಿತ ವಿಜ್ಞಾನದ ಗ್ರಂಥಗಳನ್ನೇ ಅಧ್ಯಯನ ಮಾಡುತ್ತಿದ್ದನು. ಈ ಕಾರಣದಿಂದ ವಾರ್ಷಿಕ ಪರೀಕ್ಷೆಯಲ್ಲಿ ಗಣಿತವನ್ನು ಹೊರತು ಮಿಕ್ಕ ವಿಷಯಗಳ ಪ್ರಶ್ನಪತ್ರಿಕೆಗಳಿಗೆ ಸರಿಯಾದ ಉತ್ತರಗಳನ್ನು ಬರೆಯಲು ಸಾಧ್ಯವಾಗಲಿಲ್ಲ. ಅಲ್ಲದೆ ಆ ಪರೀಕ್ಷೆಯಲ್ಲಿ ಉತ್ತೀರ್ಣನಾಗಲೂ ಇಲ್ಲ. ಬರುತ್ತಿದ್ದ ವಿದ್ಯಾರ್ಥಿ ವೇತನವನ್ನು ಶಾಲೆಯ ಅಧಿಕಾರಿಗಳು ನಿಲ್ಲಿಸಿದರು.

ಈ ಸ್ಥಿತಿಯಲ್ಲಿ ಇವನ ವಿದ್ಯಾಭ್ಯಾಸಕ್ಕೆ ಸಹಾಯ ಮಾಡಲು ಇವನ ತಂದೆಗೆ ಬಹಳ ಕಷ್ಟವಾಗುತ್ತಿತ್ತು. ತನ್ನ ಮನೆಯ ಈ ಕಷ್ಟಸ್ಥಿತಿಯನ್ನೂ, ಪರೀಕ್ಷೆಯಲ್ಲಿ ತಾನು ಫೇಲಾದುದನ್ನೂ ನೆನೆಸಿಕೊಂಡು ರಾಮಾನುಜನ್ ಮನೆ ಬಿಟ್ಟು ಎಲ್ಲಿಗೋ ಹೊರಟು ಹೋದನು. ಮನೆಯವರಿಗೆಲ್ಲಾ ಬಹಳ ಕಳ ವಳಕ್ಕಿಟ್ಟುಕೊಂಡಿತು. ಮಗನ ಅಗಲಿಕೆಯನ್ನು ತಾಳಲಾರದ ತಾಯಿ ಪ್ರತಿ ದಿನವೂ ತನ್ನ ಇಷ್ಟ ದೇವತೆ ನಾಮಗಿರಿ ದೇವಿಗೆ ತುಪ್ಪದ ಬತ್ತಿಯನ್ನು ಹಚ್ಚಿಟ್ಟು ಮಗನು ಸುರಕ್ಷಿತವಾಗಿ ಮನೆ ಸೇರುವಂತೆ ಮಾಡಬೇಕೆಂದು ಬೇಡುತ್ತಿದ್ದಳು. ಪರೀಕ್ಷೆಯ ಫಲಿತಾಂಶದಿಂದ ಬೇಸರಗೊಂಡಿದ್ದ ರಾಮಾ ನುಜನ್ ಹಲವಾರು ದಿನ ಅಲ್ಲಿ ಇಲ್ಲಿ ಅಲೆದಾಡುತ್ತಿದ್ದನು. ಕೊನೆಗೊಂದು ದಿನ ತನ್ನ ಮುದ್ದಿನ ತಾಯಿಯ ನೆನಪಾಗಿ, ಆಕೆ ಇಷ್ಟು ದಿನಗಳೂ ತನಗಾಗಿ ಎಷ್ಟು ದುಃಖ ಪಡುತ್ತಿದ್ದಾಳೋ ಏನೋ ಎಂಬುದನ್ನು ಯೋಚಿಸುತ್ತಾ, ಏನಾದರಾಗಲಿ ಊರಿಗೆ ಹಿಂತಿರುಗಬೇಕೆಂದು ನಿರ್ಧರಿಸಿದನು. ಕುಂಭ ಕೋಣಕ್ಕೆ ಬಂದು ಮನೆಯನ್ನು ಸೇರಿದನು. ತಂದೆತಾಯಿಗಳಿಗೆ ಮಗ ನನ್ನು ನೋಡಿ ಅಪಾರವಾದ ಸಂತೋಷವಾಯಿತು. ತಂದೆತಾಯಿಗಳ ಆಶಯದಂತೆ ಕಾಲೇಜನ್ನು ಪುನಃ ಸೇರಿ ತನ್ನ ವ್ಯಾಸಂಗವನ್ನು ಮುಂದುವರಿ ಸಿದನು. ಅನಂತರ ಮದರಾಸಿನಲ್ಲಿರುವ ಪಚ್ಚಿಯಪ್ಪ ಕಾಲೇಜನ್ನು ಸೇರಿ ದನು. ಅಲ್ಲಿಯೂ ಸಹ ಕೊಂಚ ಕಾಲ ಈತನ ವಿದ್ಯಾಭ್ಯಾಸ ನಡೆಯಿತು. ಗಣಿತದಲ್ಲಿ ಇವನಿಗಿದ್ದ ಅಸಾಧಾರಣ ಪ್ರತಿಭೆಯನ್ನು ತಿಳಿದ ಕಾಲೇಜಿನ ಅಧ್ಯಾಪಕರು ಬೆರಗಾದರು. ಇಡೀ ಕಾಲೇಜಿನಲ್ಲೆಲ್ಲಾ ಇದೇ ಮಾತು ಕೇಳಿ ಬರುತ್ತಿತ್ತು. ರಾಮಾನುಜನ್ ಪಚ್ಚಿಯಪ್ಪ ಕಾಲೇಜಿನ ಪ್ರೀತಿ ಪಾತ್ರನಾದ ವಿದ್ಯಾರ್ಥಿಯೂ ಆದನು. ದುರದೃಷ್ಟವಶಾತ್ ಇಲ್ಲಿ ರಾಮಾನುಜನ ಆರೋಗ್ಯ ಕೆಟ್ಟುಹೋಯಿತು. ಹಲವಾರು ತಿಂಗಳಾದರೂ ಕಾಯಿಲೆ ಗುಣವಾಗಲಿಲ್ಲ. ಕಾಲೇಜನ್ನು ಬಿಟ್ಟು ಕುಂಭಕೋಣಕ್ಕೆ ಹಿಂದಿ ರುಗಿದನು. ತಾಯಿಯ ಆರೈಕೆ ಮತ್ತು ಔಷಧೋಪಚಾರಗಳಿಂದ ಆರೋಗ್ಯವು ಸುಧಾರಿಸಿತು. ಅಲ್ಲದೆ ಮನೆಯಲ್ಲಿ ತಾನೇ ವ್ಯಾಸಂಗ ಮಾಡುತ್ತಾ ಖಾಸಗಿ ಯಾಗಿ ಎಫ್. ಎ. ಪರೀಕ್ಷೆಗೂ ಕುಳಿತನು. ಗಣಿತ ಹೊರತು ಮಿಕ್ಕ ವಿಷ ಯಗಳಲ್ಲಿ ಚೆನ್ನಾಗಿ ಅಂಕಗಳು ಬಾರದೆ ಆ ಪರೀಕ್ಷೆಯಲ್ಲಿ ಉತ್ತೀರ್ಣನಾಗ

ಲಿಲ್ಲ. ಮನೆಯ ಹಣಕಾಸಿನ ಸ್ಥಿತಿ ಎಂದಿನಂತೆಯೇ ಇತ್ತು. ತಂದೆಯ ವರಮಾನ ಯಾವ ಬಗೆಯಲ್ಲೂ ಅಷ್ಟಾಗಿ ಹೆಚ್ಚಾಗಿರಲಿಲ್ಲ. ಹೀಗಿರುವಾಗ ತನ್ನ ಬಡ ತಂದೆಗೆ ತಾನು ಹೊರೆಯಾಗಿರಬಾರದೆಂದೆಣಿಸಿ ರಾಮಾನುಜನ್ ವಿದ್ಯಾಭ್ಯಾಸವನ್ನು ಅಷ್ಟಕ್ಕೇ ನಿಲ್ಲಿಸಿದನು. ಅಲ್ಲದೆ ತಾನೂ ಸಹ ಯಾವು ದಾದರೂ ಒಂದು ಕೆಲಸವನ್ನು ಕೈಕೊಂಡು ಮನೆಗೆ ಸಹಾಯ ಮಾಡಬೇಕೆಂದೂ ಯೋಚಿಸಿದನು. ಇದೇ ಸಮಯದಲ್ಲಿ ಇವನ ತಂದೆತಾಯಿಗಳು ಮಗನಿಗೆ ಸದ್ವಂಶದ ಹೆಣ್ಣನ್ನು ತಂದುಕೊಂಡು ಮದುವೆಯನ್ನೂ ಮಾಡಿದರು.

ಇದಾದ ಮೇಲೆ ತನ್ನ ಸಂಪಾದನೆಯನ್ನು ಹೆಚ್ಚಿಸಿಕೊಳ್ಳಲೇಬೇಕೆಂದು ಮನಸ್ಸು ಮಾಡಿದನು. ಅಲ್ಲದೆ ನೌಕರಿಯನ್ನು ಹುಡುಕಿಕೊಂಡು ಅನೇಕ ಕಡೆ ಪ್ರಯತ್ನಿಸಿದನು. ಆದರೆ ಎಲ್ಲೂ ಅನುಕೂಲವಾಗಲಿಲ್ಲ. ಮನಸ್ಸಿಗೆ ಬಹಳ ಬೇಸರವಾಯಿತು. ಇಂತಹ ಸಮಯಗಳಲ್ಲೂ ಸಹ ತನಗೆ ಅತ್ಯಂತ ಪ್ರಿಯವಾದ ಗಣಿತ ವಿಜ್ಞಾನದ ಅಧ್ಯಯನವನ್ನು ಕೈ ಬಿಡಲಿಲ್ಲ. ಹಿಂದಿ ನಷ್ಟೇ ಅಥವಾ ಇನ್ನೂ ಹೆಚ್ಚಿನ ಆಸಕ್ತಿಯನ್ನು ಗಣಿತದಲ್ಲಿ ತೋರಿಸುತ್ತಿ ದ್ದನು. ವಿರಾಮ ದೊರೆತ ವೇಳೆಯಲ್ಲಿ ಗಣಿತ ಶಾಸ್ತ್ರದ ಸಂಶೋಧನೆಗ ಳನ್ನು ಮುಂದುವರಿಸುತ್ತಿದ್ದನು. ಆಗ ಮದರಾಸ್ ಪ್ರಾಂತ್ಯಕ್ಕೆ ಸೇರಿದ ತಿರುಕೊಯಿಲೂರಿನಲ್ಲಿ ದಕ್ಷಿಣ ಆರ್ಕಾಟ್ ಜಿಲ್ಲೆಯ ಡೆಪ್ಯುಟಿ ಕಲೆಕ್ಟರಾದ ವಿ. ರಾಮಸ್ವಾಮಿ ಅಯ್ಯಂಗಾರ್ ಅವರು ವಾಸಿಸುತ್ತಿದ್ದರು. ಇವರಿಗೆ ಗಣಿತದಲ್ಲಿ ವಿಶೇಷ ಅಭಿರುಚಿಯಿದ್ದ ಸಮಾಚಾರ, ಹೇಗೋ ನೌಕರಿಗಾಗಿ ಅಲೆಯುತ್ತಿದ್ದ ರಾಮಾನುಜನನ ಕಿವಿಗೆ ಬಿತ್ತು. ತಾನು ಅದುವರೆಗೂ ಮಾಡಿ ಟ್ಟಿದ್ದ ಗಣಿತದ ಸಂಶೋಧನೆಗಳನ್ನೆಲ್ಲಾ ಇವರಿಗೆ ತೋರಿಸಿ, ಅವರ ಒಲ ವನ್ನು ಸಂಪಾದಿಸಿದರೆ ಆ ಮೂಲಕ ತನ್ನ ಕೆಲಸಕ್ಕೆ ಬಹುಮಟ್ಟಿಗೆ ಅನು ಕೂಲವಾಗಬಹುದೆಂದೂ ಯೋಚಿಸಿದನು. ಒಂದು ದಿನ ಸರಿಯಾದ ಸಮಯ ವರಿತು ಈ ಡೆಪ್ಯುಟಿ ಕಲೆಕ್ಟರ ಭೇಟಿಯನ್ನೂ ಮಾಡಿ ಅವರಿಗೆ ತನ್ನ ಗಣಿತದ ಸಂಶೋಧನೆಗಳನ್ನೆಲ್ಲಾ ತೋರಿಸಿದನು. ವಿದ್ಯಾಪಕ್ಷಪಾತಿಗಳಾದ ಅವರು ಇದನ್ನು ಮೆಚ್ಚಿ, ರಾಮಾನುಜನನ್ನು ಬಹಳವಾಗಿ ಹೊಗಳಿದರು. ಆಗ ರಾಮಾನುಜನ್ ತನ್ನ ಸಂಸಾರದ ತಾಪತ್ರಯಗಳನ್ನೆಲ್ಲಾ ವಿವರಿಸಿ ತನಗೊಂದು ಕೆಲಸ ಕೊಡಿಸಿಕೊಡಬೇಕೆಂದು ಅವರನ್ನು ಬಹುವಾಗಿ ಪ್ರಾರ್ಥಿ

ಸಿದನು. ಅವರ ಕಚೇರಿಯಲ್ಲಿ ಸದ್ಯಕ್ಕೆ ಯಾವ ಕೆಲಸವೂ ಇರಲಿಲ್ಲ. ಅಲ್ಲದೆ ಈ ತೆರನಾದ ಪ್ರತಿಭಾವಂತ ಶಾಲಾ ಕಾಲೇಜುಗಳಲ್ಲಿ ಉದ್ಯೋಗ ಕೈಕೊಂಡರೆ ಅದರಿಂದ ಬಹಳ ಪ್ರಯೋಜನವಾಗಬಹುದೆಂದು ಯೋಚಿಸಿ ತಮ್ಮ ಪರಮ ಮಿತ್ರರೂ, ಕುಂಭಕೋಣದ ಕಾಲೇಜಿನ ಮುಖ್ಯಸ್ಥರೂ ಆದ ಶೇಷುಅಯ್ಯರ್ ಅವರಿಗೆ ಒಂದು ಶಿಫಾರಸು ಪತ್ರವನ್ನು ಬರೆದುಕೊಟ್ಟರು. ಅದರಲ್ಲಿ ಹೇಗಾದರೂ ಮಾಡಿ ಈ ತರುಣ ಪ್ರತಿಭಾವಂತನಿಗೆ ಉದ್ಯೋಗವನ್ನು ಕೊಡಿಸಿಕೊಡಬೇಕೆಂದು ಬರೆದಿದ್ದರು. ಶೇಷು ಅಯ್ಯರ್ ಅವರೂ ಸಹ ರಾಮಾನುಜನ ಗಣಿತ ವಿಜ್ಞಾನದ ಆಸಕ್ತಿಯನ್ನು ಬಹುವಾಗಿ ಮೆಚ್ಚಿಕೊಂಡರು. ಅಲ್ಲದೆ ಬಹಳ ಪ್ರಯತ್ನಪಟ್ಟು ರಾಮಾನುಜನಿಗೆ ನೌಕರಿಯೊಂದನ್ನೂ ಸಂಪಾದಿಸಿಕೊಟ್ಟರು.

ಈ ಪ್ರತಿಭಾವಂತ ವಿಜ್ಞಾನಿ ಮದರಾಸಿನ ಅಕೌಂಟೆಂಟ್ ಜನರಲ್ ಕಚೇರಿಯಲ್ಲಿ ಗುಮಾಸ್ತೆಯಾಗಿ ನಿಯಮಿತನಾದನು. ಅದೂ ಹಂಗಾಮಿಯ ಕೆಲಸ. ಆದರೆ ಕೆಲಸವಿಲ್ಲವೆ ತೊಂದರೆಗೊಳಗಾಗಿದ್ದ ರಾಮಾನುಜನ್‌ಗೆ ಇದರಿಂದ ಕೊಂಚ ಸಮಾಧಾನವೇ ಆಯಿತು. ಮುಂದೆ ಖಾಯಂ ಕೆಲಸವೊಂದನ್ನು ಹುಡುಕಲು ಪ್ರಯತ್ನಪಟ್ಟನು. ಈ ಪ್ರಯತ್ನದಲ್ಲಿ ನೆಲ್ಲೂರಿನ ಕಲೆಕ್ಟರ್ ದಿವಾನ್ ಬಹದ್ದೂರ್ ರಾಮಚಂದ್ರರಾಯರು ಬಹಳ ಹೆಚ್ಚಿನ ಸಹಾಯ ಮಾಡಿದರು. ಅವರೂ ಸಹ ಗಣಿತ ವಿಜ್ಞಾನದಲ್ಲಿ ಈತನ ಪ್ರತಿಭೆಯನ್ನು ಕಂಡು ಬಹಳ ಪ್ರಶಂಶಿಸಿದರು. ಅವರ ಶಿಫಾರಸ್ಸಿನಿಂದ ರಾಮಾನುಜನ್‌ಗೆ ಮದರಾಸಿನ ಬಂದರಿನ ಕಚೇರಿಯಲ್ಲಿ ಗುಮಾಸ್ತೆಯ ಕೆಲಸವೊಂದು ದೊರೆತು ಬಹಳ ಅನುಕೂಲವಾಯಿತು. ಇಲ್ಲಿ ಕೊಂಚ ಹೆಚ್ಚಿನ ಕೆಲಸವಿತ್ತು. ಹೀಗಿದ್ದರೂ ಸಹ ತನಗೆ ವಿರಾಮ ದೊರೆತ ವೇಳೆಯಲ್ಲಿ ಗಣಿತ ಶಾಸ್ತ್ರದ ಸಂಖ್ಯೆಗಳ ವಿಚಾರವಾಗಿ ಅನೇಕ ಸಂಶೋಧನೆಗಳನ್ನು ನಡಸಿದನು. ಹಲವಾರು ಹೊಸ ಪ್ರಮೇಯಗಳನ್ನೂ ಸಹ ಸಾಧಿಸಿದನು. ಇವೆಲ್ಲವೂ ಕ್ರಮೇಣ "ಜರ್ನಲ್ ಆಫ್ ದಿ ಇಂಡಿಯನ್ ಮ್ಯಾಥಮ್ಯಾಟಿಕಲ್ ಸೊಸೈಟಿ" ಎಂಬ ಉನ್ನತಮಟ್ಟದ ಪತ್ರಿಕೆಯಲ್ಲಿ ಪ್ರಕಟವಾದುವು. ಈ ಪತ್ರಿಕೆ ವಿಜ್ಞಾನವಲಯಗಳಲ್ಲಿ ವಿಶೇಷ ಮನ್ನಣೆಯನ್ನು ಪಡೆದಿದೆ. ಅದರಲ್ಲಿ ಲೇಖನ ಪ್ರಕಟವಾಗುವುದೆಂದರೆ ಬಹು

ದೊಡ್ಡ ಗೌರವ ಸಂದಂತೆ. ಈ ಬಗೆಯ ಗೌರವ ಗುಮಾಸ್ತೆ ರಾಮಾನುಜನ್ ನಿಗೆ ಲಭ್ಯವಾಯಿತು. ಅವನ ಲೇಖನಗಳನ್ನು ಓದಿದ ಅನೇಕ ಪ್ರಸಿದ್ಧ ವಿಜ್ಞಾನಿಗಳು ಬಹುವಾಗಿ ಪ್ರಶಂಶಿಸಿದರು. ಆಗ ಸರ್ ಫ್ರಾನ್ಸಿಸ್ ಸ್ಪ್ರಿಂಗ್ ಎಂಬುವರು ಮದರಾಸು ಬಂದರಿನ ಮುಖ್ಯಾಧಿಕಾರಿಗಳಾಗಿದ್ದರು. ಈ ಮಹನೀಯರೂ ಸಹ ತಮ್ಮ ಕಚೇರಿಯ ನೌಕರನಾದ ರಾಮಾನುಜನ್‌ನನ್ನು ತಮ್ಮಲ್ಲಿಗೆ ಕರೆಸಿ, ಆತನ ಪರಿಶೋಧನೆಗಳನ್ನು ಕುರಿತು ಮೆಚ್ಚಿಕೆಯ ಮಾತುಗಳನ್ನಾಡಿದರು. ಅಲ್ಲದೆ ಅವನ್ನು ಮುಂದುವರಿಸುವಂತೆಯೂ ವಿಶೇಷ ಪ್ರೋತ್ಸಾಹವನ್ನು ನೀಡಿದರು.

ಇದೇ ವೇಳೆಯಲ್ಲಿ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದ ಹೆಸರಾಂತ ಗಣಿತ ವಿಜ್ಞಾನಿಗಳಾದ ಪ್ರೊ॥ ಹಾರ್ಡಿಯವರು ತಮ್ಮ ಲೇಖನವೊಂದರಲ್ಲಿ ಅಪವರ್ತನ ಸಂಖ್ಯೆಗಳನ್ನು ವಿಮರ್ಶಿಸುತ್ತಾ "ಒಂದು ಸಂಖ್ಯೆಗಿಂತ ಕಮ್ಮಿಯಾದ ಮತ್ತು ಅದಕ್ಕೆ ಅಪವರ್ತನಗಳಿಲ್ಲದ ಸಂಖ್ಯೆಗಳನ್ನು ತಿಳಿಯಲು ಸಾಧ್ಯವಾಗಿಲ್ಲ" ಎಂದು ಬರೆದಿದ್ದರು. ಈ ಲೇಖನವನ್ನು ಶ್ರೀನಿವಾಸ ರಾಮಾನುಜನ್ ಸಹ ಓದಿದನು. ಅಲ್ಲದೆ ಆತನಿಗೆ ಈ ಬಗೆಯ ಸಂಖ್ಯೆಗಳೂ ಸಹ ಚೆನ್ನಾಗಿ ತಿಳಿದಿದ್ದುವು. ಪ್ರೊ॥ ಹಾರ್ಡಿಯವರ ಗಮನಕ್ಕೆ ಈ ವಿಷಯವನ್ನು ತರಬೇಕೆಂದು ಯೋಚಿಸಿ ತನ್ನ ಹಿತಚಿಂತಕರಾದ ಶೇಷು ಅಯ್ಯರ್ ಅವರ ಸಲಹೆಯನ್ನು ಕೇಳಿದನು. ಇದನ್ನು ಕೇಳಿ ಪಾಶ್ಚಾತ್ಯ ವಿದ್ವಾಂಸರಿಗೆ ಈತನ ಗಣಿತವಿಜ್ಞಾನದ ಪ್ರತಿಭೆಯನ್ನು ತಿಳಿಯಪಡಿಸಲು ಇದೊಂದು ಸದವಕಾಶವೆಂದೆಣಿಸಿ ತಾವೇ ಸ್ವತಃ ಹಾರ್ಡಿಯವರಿಗೆ ಕಾಗದವೊಂದನ್ನು ಬರೆದರು. ಅಲ್ಲಿ ರಾಮಾನುಜನ್‌ನ ವಿಷಯವನ್ನೆಲ್ಲಾ ನಮೂದಿಸಿ ಅವನ ಗಣಿತದ ಸಂಶೋಧನೆಗಳನ್ನೂ ಸೂಕ್ಷ್ಮವಾಗಿ ಪರಿಚಯಮಾಡಿಕೊಟ್ಟಿದ್ದರು. ಅಲ್ಲದೆ ಈ ತರುಣವಿಜ್ಞಾನಿಗೆ ಆದಷ್ಟು ನೆರವು ನೀಡಬೇಕೆಂದು ಪ್ರಾರ್ಥಿಸಿದ್ದರು. ಇಷ್ಟೇ ಅಲ್ಲವೆ ಅವರ ಸಲಹೆಯಂತೆ ರಾಮಾನುಜನ್ ಸಹ ಪ್ರೊ॥ ಹಾರ್ಡಿಯವರಿಗೆ ಪತ್ರವೊಂದನ್ನು ಬರೆದು, ಅದರೊಡನೆ ತನ್ನ ಗಣಿತಶಾಸ್ತ್ರದ ಸಂಶೋಧನೆಗಳನ್ನೆಲ್ಲಾ ವಿಮರ್ಶೆಗಾಗಿ ಕಳುಹಿಸಿಕೊಟ್ಟನು.

ಇವನ್ನೆಲ್ಲಾ ಅವಲೋಕಿಸಿದ ಹಾರ್ಡಿಯವರಿಗೆ ಬಹಳ ಸಂತೋಷವಾಯಿತು. ಈ ಯುವಕನಿಗೆ ಗಣಿತದಲ್ಲಿದ್ದ ಅಸಾಧಾರಣ ಪ್ರತಿಭೆಯನ್ನು

ಕಂಡು ಅವನನ್ನು ತಮ್ಮಲ್ಲಿಗೆ ಬರಮಾಡಿಕೊಳ್ಳಬೇಕೆಂದೂ ಯೋಚಿಸಿದರು. ಆ ಕೂಡಲೇ ಕುಂಭಕೋಣದ ಕಾಲೇಜಿನ ಪ್ರಿನ್ಸಿಪಾಲರಾದ ಶೇಷುಅಯ್ಯರ್ ಅವರಿಗೂ, ಶ್ರೀನಿವಾಸ ರಾಮಾನುಜನ್‌ನಿಗೂ ಸಹ ಪತ್ರಗಳನ್ನು ಬರೆದು ತಮ್ಮ ಅಭಿಪ್ರಾಯವನ್ನು ತಿಳಿಸಿದರು. ಬಹಳ ಆಚಾರವಂತನಾಗಿದ್ದ ರಾಮಾನುಜನ್ ಇದಕ್ಕೆ ಸಮ್ಮತಿಯನ್ನು ನೀಡಲಿಲ್ಲ. ಮನೆಯಲ್ಲೂ ಸಹ ಇದಕ್ಕೆ ಅಷ್ಟು ಪ್ರೋತ್ಸಾಹ ಸಿಗಲಿಲ್ಲ. ಇದನ್ನು ತಿಳಿದ ಪ್ರೊ|| ಹಾರ್ಡಿಯವರು ಮದರಾಸು ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ ಈ ವಿಷಯವಾಗಿ ಪತ್ರವೊಂದನ್ನು ಬರೆದು ಪ್ರತಿಭಾವಂತ ವಿಜ್ಞಾನಿ ರಾಮಾನುಜನ್‌ಗೆ ಸೂಕ್ತ ವೇತನವೊಂದನ್ನು ಕೊಟ್ಟು ಪ್ರೋತ್ಸಾಹಕೊಡುವಂತೆ ಪ್ರಾರ್ಥಿಸಿದರು.

ಮದರಾಸು ವಿಶ್ವವಿದ್ಯಾನಿಲಯದವರು ಈ ವಿಚಾರದಲ್ಲಿ ಇನ್ನೂ ಯಾವ ನಿರ್ಧಾರಕ್ಕೂ ಬಂದಿರಲಿಲ್ಲ. ಆ ಸಮಯಲ್ಲಿ ನಮ್ಮ ದೇಶದ ಹವಾಮಾನ ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದ ಡಾ|| ವಾಕರ್ ಅವರು ಮದರಾಸು ಬಂದರಿನ ತನಿಖೆಗಾಗಿ ಬಂದಿದ್ದರು. ಬಂದರಿನ ಮುಖ್ಯಾಧಿಕಾರಿಗಳಾದ ಸ್ಪ್ರಿಂಗ್ ಅವರು ತಮ್ಮ ಕಚೇರಿಯಲ್ಲಿ ನೌಕರನಾಗಿದ್ದ ಶ್ರೀನಿವಾಸ ರಾಮಾನುಜನ್‌ನನ್ನು ಇವರಿಗೆ ಪರಿಚಯಮಾಡಿಸಿ, ಆತನ ಗಣಿತ ವಿಜ್ಞಾನದ ಸಂಶೋಧನೆಗಳೆಲ್ಲವನ್ನೂ ವಿವರಿಸಿದರು. ವಾಕರ್ ಅವರೂ ಸಹ ಈತನ ಪ್ರತಿಭೆಯನ್ನು ಕೊಂಡಾಡಿ, ಆ ಕೂಡಲೇ ಈತನ ವಿಷಯವಾಗಿ ಮದರಾಸು ವಿಶ್ವವಿದ್ಯಾನಿಲಯಕ್ಕೊಂದು ಪತ್ರ ಬರೆದು ರಾಮಾನುಜನ್‌ಗೆ ಸಹಾಯಮಾಡುವಂತೆ ತಿಳಿಸಿದರು. ಕೇಂಬ್ರಿಡ್ ವಿಶ್ವವಿದ್ಯಾನಿಲಯದ ಪ್ರೊ|| ಹಾರ್ಡಿಯವರ ಪತ್ರ ಮತ್ತು ಡಾ|| ವಾಕರ್ ಅವರ ಪತ್ರ ಇವುಗಳನ್ನು ಕಡೆಗಣಿಸುವ ಹಾಗಿರಲಿಲ್ಲ. ಹೀಗಾಗಿ ತಿಂಗಳಿಗೆ ಎಪ್ಪತ್ತೈದು ರೂಪಾಯಿ ಸಂಬಳದ ಮೇಲೆ ಶ್ರೀನಿವಾಸ ರಾಮಾನುಜನ್‌ನನ್ನು ವಿಶ್ವನಿದ್ಯಾನಿಲಯದ ಗಣಿತ ವಿಜ್ಞಾನಶಾಖೆಯಲ್ಲಿ ನೇಮಿಸಿದರು. ಇದರಿಂದ ರಾಮಾನುಜನ್‌ಗೆ ಬಹಳ ಸಂತೋಷವಾಯಿತು. ಗಣಿತಶಾಸ್ತ್ರದ ಸಂಶೋಧನೆಗಳಿಗೆ ಹೆಚ್ಚು ಕಾಲವನ್ನು ವಿನಿಯೋಗಿಸುವ ಸದವಕಾಶವೂ ದೊರೆಯಿತು. ಗಣಿತವಿಜ್ಞಾನದ ಪ್ರಗತಿಗೆ ಬಹಳ ಸಹಾಯವಾಯಿತು.

ಸುಮಾರು ಇದೇ ವೇಳೆಯಲ್ಲಿ ನೆವಿಲ್ ಎಂಬ ವಿದ್ವಾಂಸರು ನಮ್ಮ

ದೇಶಕ್ಕೆ ಭೇಟಿಯಿತ್ತರು. ಇವರೂ ಸಹ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯ ದಲ್ಲಿ ಪ್ರೊಫೆಸರಾಗಿದ್ದರು. ಮದರಾಸು ವಿಶ್ವವಿದ್ಯಾನಿಲಯದ ಆಹ್ವಾನ ವನ್ನಂಗೀಕರಿಸಿ ಕೆಲವು ಉಪನ್ಯಾಸಗಳನ್ನು ಮಾಡಲು ಅಲ್ಲಿಗೆ ಬಂದರು. ನಮ್ಮ ದೇಶಕ್ಕೆ ಹೊರಡುವ ಮುನ್ನ ಇವರ ಮಿತ್ರರಾದ ಪ್ರೊ|| ಹಾರ್ಡಿಯವರು ಇವರನ್ನು ಕಂಡು ಮದರಾಸು ವಿಶ್ವವಿದ್ಯಾನಿಲಯದಲ್ಲಿದ್ದ ಶ್ರೀನಿವಾಸ ರಾಮಾನುಜನ್‌ನ ವಿಷಯವನ್ನೆಲ್ಲಾ ತಿಳಿಸಿ ಆತನನ್ನು ತಮ್ಮೊಡನೆ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯಕ್ಕೆ ತಪ್ಪದೆ ಕರೆದುಕೊಂಡು ಬರಬೇಕೆಂದು ಪ್ರಾರ್ಥಿಸಿದ್ದರು. ಇಲ್ಲಿಗೆ ಬಂದಮೇಲೆ ರಾಮಾನುಜನ್‌ನನ್ನು ಕಂಡು ಈ ವಿಷಯವನ್ನು ತಿಳಿಸಿದಾಗ ಆತ ತನ್ನ ಒಪ್ಪಿಗೆಯನ್ನೀಯಲಿಲ್ಲ. ಪ್ರೊ|| ನೆವಿಲ್ ತಮ್ಮ ಪ್ರಯತ್ನಗಳನ್ನು ಅಷ್ಟಕ್ಕೇ ಬಿಡದೆ ಮತ್ತೆ ಆತನನ್ನೂ, ಆತನ ತಾಯಿ ಯನ್ನೂ ಭೇಟಿಮಾಡಿ ಬಹಳ ಕಷ್ಟಪಟ್ಟು ಒಪ್ಪಿಸಿದರು. ರಾಮಾನುಜನ್ ಕೇಂಬ್ರಿಡ್ಜ್‌ಗೆ ಪ್ರಯಾಣಮಾಡುವ ನಿರ್ಧಾರವಾಯಿತು. ಈ ವಿಷಯದಲ್ಲಿ ಮದರಾಸು ವಿಶ್ವವಿದ್ಯಾನಿಲಯ ಬಹಳ ಉದಾರವಾಗಿ ವರ್ತಿಸಿತು. ಪ್ರೊ|| ನೆವಿಲ್ ಅವರ ಪ್ರಯತ್ನದ ಫಲವಾಗಿ ರಾಮಾನುಜನ್‌ನ ವಿದೇಶ ಪ್ರಯಾ ಣಕ್ಕೆ ತಗಲುವ ವೆಚ್ಚವನ್ನೂ ಮತ್ತು ಆತನಿಗೆ ವರ್ಷಕ್ಕೆ ಇನ್ನೂರು ಐವತ್ತು ಪೌಂಡು ವೇತನವನ್ನೂ ಇತ್ತು ಬಹಳ ಸಹಾಯಮಾಡಿತು. ಶ್ರೀನಿವಾಸ ರಾಮಾನುಜನ್ ಪ್ರೊ|| ನೆವಿಲ್‌ರೊಡನೆ ೧೯೧೪ರ ಮಾರ್ಚಿ ೧೭ನೆ ತಾರೀಕು ಮದರಾಸನ್ನುಬಿಟ್ಟು ಕೇಂಬ್ರಿಡ್ಜ್‌ಗೆ ತೆರಳಿದನು.

ಅಲ್ಲಿ ಇವನನ್ನು ಪ್ರೊ|| ಹಾರ್ಡಿಯವರು ಬಹಳ ಪ್ರೀತಿಪೂರ್ವಕವಾಗಿ ಸ್ವಾಗತಿಸಿದರು. ಸುಪ್ರಸಿದ್ಧ ಟ್ರಿನಿಟಿ ಕಾಲೇಜಿಗೆ ಪ್ರವೇಶವೂ ದೊರೆಯಿತು. ಗಣಿತದ ಸಂಶೋಧನೆಗಳೂ ಮುಂದುವರಿದುವು. ಪ್ರೊ|| ಹಾರ್ಡಿಯವರ ಪ್ರಯತ್ನದಿಂದ ವರ್ಷಕ್ಕೆ ಅರವತ್ತು ಪೌಂಡಿನ ವಿದ್ಯಾರ್ಥಿವೇತನವೂ ಮಂಜೂ ರಾಗಿ ರಾಮಾನುಜನ್‌ನ ಹಣಕಾಸಿನ ಸ್ಥಿತಿಯೂ ಉತ್ತಮವಾಯಿತು. ಕೇಂಬ್ರಿಡ್ಜ್‌ನಲ್ಲಿದ್ದರೂ ಸಹ ಆತ ಭಾರತೀಯ ಆಚಾರ, ಸಂಪ್ರದಾಯ ಗಳನ್ನು ಬಿಡಲಿಲ್ಲ. ವೈದಿಕ ನಿತ್ಯಕರ್ಮಗಳನ್ನು ತಪ್ಪದೆ ನಡೆಸುತ್ತಿದ್ದನು. ತನ್ನ ಇಷ್ಟದೇವತೆ ನಾಮಗಿರಿದೇವಿಯ ಪೂಜೆಯನ್ನು ಎಂದೂ ಬಿಟ್ಟವನಲ್ಲ. ಅಲ್ಲಿನ ಆಹಾರವನ್ನೂ ಮುಟ್ಟದೆ ತಾನೇ ಅಡಿಗೆಯನ್ನೂ ಮಾಡಿಕೊಳ್ಳು

ತ್ತಿದ್ದನು. ಈತನಿಗೆ ದೇವರಲ್ಲಿ ಅಪಾರ ಭಕ್ತಿ. ಎಲ್ಲವೂ ಭಗವಂತನ ಕೃಪೆಯೆಂದೇ ನಂಬಿ ತನ್ನ ಸಂಶೋಧನೆಗಳನ್ನು ಮುಂದುವರಿಸುತ್ತಿದ್ದನು.

ಗಣಿತ ವಿಜ್ಞಾನದ ಅನೇಕ ಕ್ಲಿಷ್ಟ ಸಮಸ್ಯೆಗಳಿಗೆ ತನ್ನದೇ ಆದ ಸುಲಭ ರೀತಿಯ ಪರಿಹಾರೋಪಾಯಗಳನ್ನು ಕಂಡು ಹಿಡಿಯುತ್ತಿದ್ದನು. ಇವು ಅನೇಕ ವೇಳೆ ಶಾಸ್ತ್ರೋಕ್ತವಾಗಿರುತ್ತಿರಲಿಲ್ಲ, ಆದರೂ ಉತ್ತರಗಳು ಮಾತ್ರ ಸರಿಯಾಗಿರುತ್ತಿದ್ದವು. ಇವೆಲ್ಲವನ್ನೂ ಆಗಾಗ ಪ್ರೊ|| ಹಾರ್ಡಿಯವರೊಡನೆ ಚರ್ಚಿಸುತ್ತಿದ್ದನು. ಇವನ ಅಸಾಧಾರಣ ಸ್ಫೂರ್ತಿಯನ್ನು ಕಂಡು ಕೂಡ ಅವರಿಗೆ ಇವನ ವಿಷಯದಲ್ಲಿ ದಿನೇ ದಿನೇ ಗೌರವ ಹೆಚ್ಚುತ್ತಾ ಹೋಯಿತು. ಪಾಶ್ಚಾತ್ಯ ಗಣಿತ ವಿಜ್ಞಾನದ ಕೆಲವು ಭಾಗಗಳಲ್ಲಿ ರಾಮಾನುಜ೯ಗೆ ಅಷ್ಟು ಪರಿಶ್ರಮವಿರಲಿಲ್ಲ. ಅವನ್ನು ಶಾಸ್ತ್ರೋಕ್ತವಾಗಿ ಹೇಳಿಕೊಡಲು ಹಾರ್ಡಿಯವರು ಮಾಡಿದ ಪ್ರಯತ್ನಗಳೆಲ್ಲಾ ವ್ಯರ್ಥವಾದುವು. ಅಲ್ಲದೆ ಎಲ್ಲಿ ತಮ್ಮ ಪ್ರಯತ್ನಗಳಿಂದ ರಾಮಾನುಜ೯ನ ವ್ಯಕ್ತಿತ್ವ ನಷ್ಟವಾಗುತ್ತದೆಯೋ ಎಂದು ಹೆದರಿ ಅಷ್ಟಕ್ಕೇ ಸುಮ್ಮನಾದರು. ಅಲ್ಲದೆ ಈ ವಿಷಯದಲ್ಲಿ ಬಹಳ ಎಚ್ಚರಿಕೆಯನ್ನೂ ವಹಿಸಿದರು. ರಾಮಾನುಜ೯ನ ಅಸಾಧಾರಣ ಪ್ರತಿಭೆ ತಾನೇ ತಾನಾಗಿ ಬೆಳೆಯಲು ಬಹಳ ಸಹಾಯ ಮಾಡಿದರು. ಅನೇಕ ಬಾರಿ 'ಈ ಪ್ರತಿಭಾವಂತ ಯುವಕನಿಗೆ ನಾನೇನುತಾನೆ ಹೇಳಿಕೊಡಬಲ್ಲೆ, ನಾನೇ ಅವನಿಂದ ಎಷ್ಟೋ ವಿಷಯಗಳನ್ನು ಕಲಿಯಬೇಕಾಗಿದೆ' ಎಂದು ಹೇಳಿ ರಾಮಾನುಜ೯ನನ್ನು ಪ್ರಶಂಸೆ ಮಾಡಿದ್ದಾರೆ.

ಮುಂದೆ ಇವರ ಮಾರ್ಗದರ್ಶಕತ್ವದಲ್ಲಿ ರಾಮಾನುಜನ್‌ನ ಅನೇಕ ಲೇಖನಗಳು ಪ್ರಸಿದ್ಧವಾದ ವಿಜ್ಞಾನ ಪತ್ರಿಕೆಗಳಲ್ಲಿ ಪ್ರಕಟವಾದುವು. ಇವನ್ನೆಲ್ಲಾ ಪರಿಗಣಿಸಿ ಇಂಗ್ಲೆಂಡಿನ ಪ್ರಖ್ಯಾತ ವಿಜ್ಞಾನ ಸಂಸ್ಥೆಯಾದ ರಾಯಲ್ ಸೊಸೈಟಿಯವರು ಉನ್ನತ ಪ್ರಶಸ್ತಿಯನ್ನಿತ್ತು, ೧೯೧೮ ನೆ ವರ್ಷದ ಫೆಬ್ರುವರಿ ತಿಂಗಳಿನಲ್ಲಿ ಈತನನ್ನು ಗೌರವಿಸಿದರು. ಪದವೀಧರನಲ್ಲದ ವಿಜ್ಞಾನಿಗೆ ಈ ಬಗೆಯ ಗೌರವ ದೊರೆತುದು ಆ ಸಂಸ್ಥೆಯ ಇತಿಹಾಸದಲ್ಲೇ ಬಹಳ ಅಪರೂಪವೆನ್ನಬಹುದು. ಈತನ ಸಂಶೋಧನೆಯನ್ನು ಕುರಿತ ಲೇಖನಗಳಲ್ಲಿ ಸುಮಾರು ಏಳೆಂಟು ಅತ್ಯಂತ ಪ್ರಮುಖವಾಗಿವೆಯೆಂದು ಗಣಿತ ವಿಜ್ಞಾನಿಗಳು ಅಭಿಪ್ರಾಯ ಪಟ್ಟಿದ್ದಾರೆ.

ರಾಮಾನುಜನ್‌ನ ಜ್ಞಾಪಕಶಕ್ತಿಯೂ ಅವನ ಮೇಧಾಶಕ್ತಿಯಂತೆ ಬಹಳ ಅಸಾಧಾರಣವಾದುದು. ಗಣಿತ ವಿಜ್ಞಾನದ ಕೆಲವು ಸೂತ್ರಗಳನ್ನೂ ಮತ್ತು ಕೆಲವು ಫಲಗಳನ್ನೂ ಪುಸ್ತಕಗಳನ್ನು ನೋಡದೆಯೇ ಅನೇಕ ಬಾರಿ ಹೇಳುತ್ತಿದ್ದನಂತೆ. ಎಷ್ಟೇ ದೊಡ್ಡ ಸಂಖ್ಯೆಯಾದರೂ ನಿಮಿಷ ಮಾತ್ರದಲ್ಲಿ ಉತ್ತರವನ್ನು ಹೇಳಿ ಇತರರನ್ನು ಬೆರಗುಗೊಳಿಸುತ್ತಿದ್ದನು.

ಇಂಗ್ಲೆಂಡಿನ ಹವಾಗುಣ ಈತನಿಗೆ ಸರಿ ಬರದೆ ಆರೋಗ್ಯ ಕೆಟ್ಟು ಹೋಯಿತು. ಅಲ್ಲದೆ ಹಗಲಿರುಳೆನ್ನದೆ ಮಾಡಿದ ಅಭ್ಯಾಸದಿಂದಲೂ, ಸರಿಯಾದ ದೇಹಪೋಷಣೆ ಇಲ್ಲದೆಯೂ ಕ್ಷಯರೋಗಕ್ಕೆ ತುತ್ತಾದನು ಉತ್ತಮ ರೀತಿಯ ಔಷಧೋಪಚಾರಗಳು ದೊರೆತು ಆರೋಗ್ಯವೂ ಕುದುರಿತು. ಎಂದಿನಂತೆ ಈತನ ಸಂಶೋಧನೆಗಳೂ ಮುಂದುವರಿದುವು ಇದೇ ಸಮಯದಲ್ಲಿ ಈತನು ವ್ಯಾಸಂಗ ಮಾಡುತ್ತಿದ್ದ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದವರು ಟ್ರಿನಿಟಿ ಕಾಲೇಜಿನ 'ಫೆಲೋ' ಎಂಬ ಪ್ರಶಸ್ತಿಯನ್ನಿತ್ತು ಗೌರವಿಸಿದರು. ಸುಮಾರು ಆರು ವರ್ಷಕಾಲ ವರ್ಷಕ್ಕೆ ಇನ್ನೂರೈವತ್ತು ಪೌಂಡು ಗೌರವ ವೇತನವನ್ನೂ ಇತ್ತು ಸನ್ಮಾನಿಸಿದರು.

ಈತನ ಅಸಾಧಾರಣ ಪ್ರತಿಭೆಯನ್ನು ಸೂಸಲು ಒಂದು ಸಣ್ಣ ನಿದರ್ಶನವನ್ನು ಕೊಡಬಹುದು. ಆರೋಗ್ಯ ಕೆಟ್ಟು ಚಿಕಿತ್ಸೆಗಾಗಿ ರಾಮಾನುಜನ್ ಆಸ್ಪತ್ರೆಯಲ್ಲಿರಬೇಕಾಯಿತು. ತಮ್ಮ ಪ್ರಿಯ ಶಿಷ್ಯನನ್ನು ವಿಚಾರಿಸಲು ಪ್ರೊ|| ಹಾರ್ಡಿಯವರು ಮೋಟಾರಿನಲ್ಲಿ ಆಸ್ಪತ್ರೆಗೆ ಹೋದರು. ಅದರ ನಂಬರು ೧೭೨೯ ಆಗಿದ್ದಿತು. ಆರೋಗ್ಯವನ್ನು ವಿಚಾರಿಸುತ್ತಾ "ನಾನು ಬಂದ ಮೋಟಾರಿನ ನಂಬರು ಒಳ್ಳೆಯ ಶಕುನದ ಸಂಖ್ಯೆಯಲ್ಲ. ಏಕೆಂದರೆ ಆ ಸಂಖ್ಯೆಯ ಅಪವರ್ತನಗಳು ೭ ಮತ್ತು ೧೯" ಎಂದು ಹೇಳಿದರು. ಒಡನೆಯೇ ಹಾಸಿಗೆಯಲ್ಲಿ ಮಲಗಿದ್ದ ರಾಮಾನುಜನ್, ಪ್ರೊಫೆಸರನ್ನು ಕುರಿತು "ಇಲ್ಲಿ ಅದು ಬಹಳ ಚೆನ್ನಾಗಿರುವ ಸಂಖ್ಯೆ. ಕಾರಣ ಎರಡು ಬಗೆಯಲ್ಲಿ ಎರಡು ಬೇರೆ ಬೇರೆ ಘನ ಸಂಖ್ಯೆಗಳ ಮೊತ್ತವಾದ ಕನಿಷ್ಟ ಸಂಖ್ಯೆಯೇ ಇದಾಗಿದೆ." ಎಂದು ಉತ್ತರವಿತ್ತನು. ಈ ಸಮಸ್ಯೆಯನ್ನು ಬಿಡಿಸಿ ನೋಡಿದಾಗ ಅವನ ಉತ್ತರವು ಸರಿತೋರಿ ಅವರಿಗೆ ಪರಮಾಶ್ಚರ್ಯವಾಯಿತು. ಉತ್ತಮ ಗಣಿತ ವಿಜ್ಞಾನಿಗಳಾದ ಹಾರ್ಡಿಯವರು ಅಷ್ಟಕ್ಕೇ ಬಿಡದೆ, "ಇದೇ

ತೆರನಾದ ಗುಣವುಳ್ಳ ಸಂಖ್ಯೆಯನ್ನು ಘನ ಸಂಖ್ಯೆಗಳ ಮೊತ್ತವಾಗುವ ಬದಲು ನಾಲ್ಕಾವೃತ್ತಿಯ ಸಂಖ್ಯೆಗಳ ಮೊತ್ತವಾಗಿರುವಂತೆ ತಿಳಿಸ ಬಲ್ಲಿರಾ?" ಎಂದು ಪ್ರಶ್ನಿಸಿದರು. ತಕ್ಷಣವೇ ರಾಮಾನುಜನ್ "ಆ ಸಂಖ್ಯೆ ಬಹಳ ದೊಡ್ಡ ಸಂಖ್ಯೆ. ಅದನ್ನು ಕೂಡಲೇ ತಿಳಿಸಲು ಆಗುವುದಿಲ್ಲ" ಎಂದು ಉತ್ತರವಿತ್ತನು. ಆಸ್ಪತ್ರೆಯಿಂದ ಮನೆಗೆ ಮರಳಿ ಈ ಸಂಖ್ಯೆಯನ್ನು ಕಂಡು ಹಿಡಿಯುವುದರಲ್ಲೇ ಹಾರ್ಡಿಯವರು ಮಗ್ನರಾದರು. ಉತ್ತರ ಬಂದಾಗ ರಾಮಾನುಜನ್‌ನ ಪ್ರತಿಭೆಯ ಅರಿವು ಮತ್ತೊಂದು ಬಾರಿ ಅವರಿಗಾಯಿತು.

ಪುನಃ ರಾಮಾನುಜನ್‌ನ ಆರೋಗ್ಯವು ಕೆಟ್ಟು ಕ್ಷಯರೋಗ ಕೊಂಚ ಪ್ರಬಲವಾಯಿತು. ತನ್ನ ಮನೆಯವರನ್ನು ಕಾಣಬೇಕೆಂಬ ಆಸೆಯನ್ನು ಹಾರ್ಡಿಯವರಿಗೆ ತಿಳಿಸಿದನು. ಇದನ್ನು ನೆರವೇರಿಸುವ ಸಲುವಾಗಿ ಹಾರ್ಡಿಯವರು ಪ್ರಯತ್ನ ಪಟ್ಟು ರಾಮಾನುಜನ್‌ನ ಪ್ರಯಾಣಕ್ಕೆ ತಕ್ಕ ಏರ್ಪಾಡುಗಳನ್ನೂ ಮಾಡಿದರು. ರೋಗದಿಂದ ನರಳುತ್ತಿದ್ದ ರಾಮಾನುಜನ್ ಹಡಗನ್ನೇರಿ ಸ್ವದೇಶಾಭಿಮುಖವಾಗಿ ಹೊರಟನು. ಪ್ರೊ|| ಹಾರ್ಡಿಯವರು ಬಹು ಭಾರವಾದ ಹೃದಯದಿಂದ ತಮ್ಮ ನೆಚ್ಚಿನ ಮಿತ್ರನೊಬ್ಬನನ್ನು ಬೀಳ್ಕೊಡುತ್ತಾ, ಆತನ ಆರೋಗ್ಯ ಬೇಗ ಸುಧಾರಿಸಲೆಂದು ಹಾರೈಸಿದರು.

ಸಮುದ್ರಯಾನದಲ್ಲಿ ರಾಮಾನುಜನ್ ಅವರ ಆರೋಗ್ಯ ಇನ್ನೂ ಕೆಟ್ಟು ಹೋಯಿತು. ಮದರಾಸನ್ನು ಮುಟ್ಟುವ ವೇಳೆಗೆ ರೋಗ ಉಲ್ಬಣಿಸಿತ್ತು. ಹಡಗಿನಿಂದ ಇಳಿದ ಈತನನ್ನು ನೋಡಿ ಮನೆಯವರೆಲ್ಲಾ ಬಹಳ ಮರುಗಿದರು. ತಾಯಿಯ ಗೋಳಾಟವಂತೂ ಬಹುವಾಗಿತ್ತು. ಈತನ ಚಿಕಿತ್ಸೆಗಾಗಿ ಮದರಾಸು ವಿಶ್ವವಿದ್ಯಾನಿಲಯದವರೂ, ಮದರಾಸಿನ ಗಣ್ಯ ನಾಗರಿಕರಾದ ಶ್ರೀ ಎಸ್. ಶ್ರೀನಿವಾಸ ಅಯ್ಯಂಗಾರರೂ ಬಹಳ ಹಣವನ್ನಿತ್ತು ಸಹಾಯ ಮಾಡಿದರು. ಎಷ್ಟೋ ಉತ್ತಮ ಚಿಕಿತ್ಸೆ ದೊರೆತರೂ ರೋಗ ಪ್ರಬಲಿಸುವ ಸೂಚನೆಗಳೇ ಕಂಡು ಬರುತ್ತಿದ್ದವು. ಕೊನೆಗೆ ವೈದ್ಯರ ಅಭಿಪ್ರಾಯದಂತೆ ಹವಾ ಬದಲಾವಣೆಗಾಗಿ ಕಾವೇರಿ ನದಿಯ ತೀರದಲ್ಲಿದ್ದ ಕೊಡುಮುಡಿ ಎಂಬ ಊರಿಗೆ ಹೋಗಿ ಅಲ್ಲಿ ಸುಮಾರು ಐದು ತಿಂಗಳಿದ್ದರು. ಪುನಃ ಮದರಾಸಿಗೆ ವಾಪಸು ಬಂದರು. ರೋಗ ವೈದ್ಯರ ಹತೋಟಿಗೆ

ಬರದೆ ೧೯೨೦ ನೇ ಏಪ್ರಿಲ್ ೨೬ ನೆ ತಾರೀಕು ಗಣಿತ ವಿಜ್ಞಾನದ ಪ್ರತಿಭಾವಂತ ಮೇಧಾವಿ ಶ್ರೀನಿವಾಸ ರಾಮಾನುಜನ್ ನಿಧನರಾದರು. ಅವರ ಆತ್ಮ ನಾಮಗಿರಿ ದೇವಿಯ ಪಾದಾರವಿಂದಗಳಲ್ಲಿ ಐಕ್ಯವಾಯಿತು.

ನಿಧನರಾದಾಗ ರಾಮಾನುಜನ್‌ರಿಗೆ ಕೇವಲ ಮೂವತ್ತು ಮೂರು ವರ್ಷ ವಯಸ್ಸು. ಈ ಅಕಾಲ ಮರಣದಿಂದ ಭಾರತೀಯ ವಿಜ್ಞಾನ ಪ್ರಪಂಚಕ್ಕೆ ತುಂಬಲಾರದ ನಷ್ಟವಾಯಿತು. ಗಣಿತವಿಜ್ಞಾನದ ಬೆಳವಣಿಗೆಗೇ ಹೆಚ್ಚಿನ ನಷ್ಟವಾಯಿತೆಂದರೆ ಉತ್ಪ್ರೇಕ್ಷೆಯಾಗಲಾರದು. ವಿಶ್ವದ ಮೂಲೆ ಮೂಲೆಗಳಿಂದ ಅನೇಕ ಪ್ರಖ್ಯಾತ ವಿಜ್ಞಾನಿಗಳಿಂದ ಅನುತಾಪ ಸಂದೇಶಗಳು ಲೆಕ್ಕವಿಲ್ಲದಷ್ಟು ಬಂದವು. ಅನೇಕರು ಆತನ ಅಸಾಧಾರಣ ಪ್ರತಿಭೆಯನ್ನು ಪ್ರಶಂಸಿಸಿದರು. ಈ ಮಹಾ ವಿಜ್ಞಾನಿಯ ಸ್ಮಾರಕವಾಗಿ ದಿವ್ಯವಾದ ಗಣಿತ ವಿಜ್ಞಾನದ ಸಂಶೋಧನಾಲಯವೊಂದು ಮದರಾಸಿನಲ್ಲಿ ಕಂಗೊಳಿಸುತ್ತಿದೆ.

# ಬೀರಬಲ್ ಸಹನಿ

ಪ್ರಕೃತಿಯ ಮಡಲಿನಲ್ಲಿ ಚೆದುರಿಹೋಗಿರುವ ನಾನಾ ಕುರುಹುಗಳನ್ನು ಒಪ್ಪವಾದ ರೀತಿಯಲ್ಲಿ ಜೋಡಿಸಿ ಇತರರಿಗೆ ಆ ನಿಗೂಢ ರಹಸ್ಯದ ಪರಿಚಯ ಮಾಡಿಕೊಡುವುದೇ ಶ್ರೇಷ್ಠ ವಿಜ್ಞಾನಿಯ ಕರ್ತವ್ಯ. ಈ ತೆರನಾದ ವಿಜ್ಞಾನಿಗಳು ತೋರಿಬರುವುದು ಬಹು ವಿರಳ. ಇಂಥವರ ಪಂಕ್ತಿಗೆ ಸೇರಲರ್ಹವಾದವರು ಬೀರಬಲ್ ಸಹನಿ.

೧೮೮೧ನೇ ನವಂಬರ್ ೧೪ ನೇ ತಾರೀಕು ಪಶ್ಚಿಮ ಪಂಜಾಬಿನ (ಈಗಿನ ಪಾಕಿಸ್ತಾನ) ಷಹಪುರ ಜಿಲ್ಲೆಯ ಭೇರಾ ಎಂಬ ಊರಿನಲ್ಲಿ ಸಹನಿಯವರು ಜನಿಸಿದರು. ಇವರ ತಂದೆ ಪ್ರೊ|| ಋಷಿರಾಮ್ ಸಹನಿ. ತಾಯಿ ಶ್ರೀಮತಿ ಈಶ್ವರೀ ದೇವಿ. ಭೇರಾ ಗ್ರಾಮದ ಇತಿಹಾಸ ಬಹಳ ಪ್ರಸಿದ್ಧವಾದುದು. ಒಮ್ಮೆ ಉತ್ತಮ ವಾಣಿಜ್ಯ ಕೇಂದ್ರವಾಗಿದ್ದು ನಮ್ಮ ದೇಶದ ಮೇಲೆ ಅನೇಕ ಸಲ ಧಾಳಿಮಾಡಿದ ಘಜನಿ ಮಹಮೂದನ ಅನುಗ್ರಹಕ್ಕೂ ಪಾತ್ರವಾಗಿತ್ತು ! ಇದು ಹೇಗಾದರೂ ಇರಲಿ. ಈ ಊರು 'ಭೂವಿಜ್ಞಾನದ ಮ್ಯೂಸಿಯಂ' ಎಂದು ಕರೆಯಬಹುದಾದ 'ಸಾಲ್ಟ್ ರೇಂಜ್' (ಹಿಮಾಲಯದ ಪರ್ವತಶ್ರೇಣಿಗೆ ಸೇರಿದ ಉಪ್ಪಿನ ನಿಕ್ಷೇಪಗಳ ಸಾಲು) ಗೆ ಬಹು ಸಮೀಪದಲ್ಲಿದ್ದು ಚಿಕ್ಕ ಬಾಲಕ ಸಹನಿಯ ಕುತೂಹಲವನ್ನು, ವೈಜ್ಞಾನಿಕ ದೃಷ್ಟಿಯನ್ನು ಕೆರಳಿಸುವ ಮುಖ್ಯ ಆಗರವಾಗಿತ್ತು. ಸಣ್ಣ ವಯಸ್ಸಿನಲ್ಲೇ ಸಹನಿ ಅಲೆದಾಡಲು ಹೋಗುತ್ತಿದ್ದರು. ನಿಸರ್ಗ ಸೌಂದರ್ಯದ ನೆಲೆವೀಡು ಈ ಪ್ರದೇಶ. ಅಲ್ಲದೆ ಪ್ರಾಚೀನ ಕಾಲದ ಅನೇಕ ಸಸ್ಯಗಳ ಅಸಂಖ್ಯಾತ ಅವಶೇಷಗಳಿಗೂ ತೌರೂರು. ಮುಂದೆ ಬೀರಬಲ್ ಸಹನಿ ಈ ಅವಶೇಷಗಳನ್ನು ವಿಶೇಷವಾದ ರೀತಿಯಲ್ಲಿ ಅಧ್ಯಯನಮಾಡಿ ಉತ್ತಮ ಪ್ರಬಂಧಗಳನ್ನು ಪ್ರಕಟಿಸಿದರು.

ಸಹನಿಯವರ ಮನೆಯವರು ಮೊದಲಿಗೆ ಸಿಂಧೂ ನದಿಯ ತೀರದಲ್ಲಿದ್ದ ಡೇರಾ ಇಸ್ಮಾಯಿಲ್ ಖಾನ್ ಎಂಬ ಊರಿನವರು. ಸಹನಿಯವರ ತಾತ

ಅಲ್ಲಿಯ ಪ್ರಮುಖ ವರ್ತಕರಾಗಿದ್ದರು. ವ್ಯಾಪಾರದಲ್ಲಿ ಅಪಾರ ಹಣವನ್ನೂ ಯಶಸ್ಸನ್ನೂ ಸಂಪಾದಿಸಿದ್ದರು. ಆದರೆ ಮಾಡುತ್ತಿದ್ದ ವ್ಯಾಪಾರ ಕೈಗೆ ಹತ್ತದೆ ಬಹು ಕಷ್ಟಕ್ಕೆ ಸಿಲುಕಿ, ಇಡೀ ಮನೆಮಂದಿಯೇ ನರಳಬೇಕಾಯಿತು. ಬೀರ್‌ಬಲ್‌ನ ತಂದೆ ಖುಷಿರಾಂ ಇನ್ನೂ ಚಿಕ್ಕವರಾಗಿದ್ದಾಗಲೇ ತಂದೆಯನ್ನು ಕಳೆದುಕೊಂಡರು. ಸಂಸಾರಕ್ಕೆ ಕಷ್ಟದ ಮೇಲೆ ಕಷ್ಟ ಒದಗಿತು. ಎಳೆ ವಯಸ್ಸಿನ ಖುಷಿರಾಂ ತಾನು ಸಂಗ್ರಹಿಸಿದ್ದ ಅನೇಕ ಪುಸ್ತಕಗಳನ್ನೂ, ಇತರ ಕೆಲವು ಸಾಮಾನುಗಳನ್ನೂ ತಲೆಯಮೇಲೆ ಹೊತ್ತು ಮನೆ ಮಂದಿಯೊಡನೆ ಝೂಂಗ್ ಎಂಬ ಊರನ್ನು ನಡೆದೇ ಸೇರಿದರು. ಡೇರಾ ಇಸ್ಮಾಯಿಲ್ ಖಾ‌ನ್‌ನಿಂದ ಝೂಂಗ್ ಊರಿಗೆ ೧೫೦ ಮೈಲಿ ದೂರ. ಅಲ್ಲಿ ಬಹು ಕಷ್ಟಪಟ್ಟು ಮುರಿದು ಬಿದ್ದಿದ್ದ ಸಣ್ಣ ಮನೆಯೊಂದರಲ್ಲಿ ಸಂಸಾರ ನೆಲಸಿತು. ಅಲ್ಲಿಯೇ ಕೊಂಚಕಾಲ ಖುಷಿರಾಮನ ವಿದ್ಯಾರ್ಜನೆಯೂ ಮುಂದುವರೆಯಿತು. ಈ ಕಾಲದಲ್ಲಿ ಅವರು ಪಟ್ಟ ಪಾಡು, ಅನುಭವಿಸಿದ ಕಷ್ಟ ಹೇಳಲಸದಳ. ಖುಷಿ ರಾಮ್ ಬಹಳ ಚುರುಕಾದ ಹುಡುಗ. ಪಾಠಪ್ರವಚನಗಳಲ್ಲಿ ಎಂದೂ ಮೊದಲನೆಯವನೇ. ಉಪಾಧ್ಯಾಯರ ಪ್ರೀತಿಪಾತ್ರ. ಹೀಗಾಗಿ ಶಾಲೆ ಯುದ್ದಕ್ಕೂ ವಿದ್ಯಾರ್ಥಿವೇತನವನ್ನು ಪಡೆದು ಓದನ್ನು ಮುಂದುವರಿಸಿದನು. ಕೊಂಚ ವರ್ಷಗಳಾದಮೇಲೆ ಯಜಮಾನನಿಲ್ಲದ ಸಂಸಾರ, ಭೇರಾ ಎಂಬ ಊರಿಗೆ, ಮುಂದೆ ಲಾಹೋರಿಗೆ ಅನುಕೂಲಸ್ಥಿತಿಯನ್ನರಸುವ ಸಲುವಾಗಿ ತೆರಳಬೇಕಾಯಿತು. ಭೇರಾವಿನಲ್ಲಿ ಹಲವಾರು ವರ್ಷಗಳಿದ್ದರೆನ್ನಬಹುದು. ಇಲ್ಲಿಯೂ ಸಹ ವಿದ್ಯಾಭ್ಯಾಸ ಮುಂದುವರಿಯಿತು. ಓದು ಮುಗಿದು ಸಣ್ಣ ಪುಟ್ಟ ಕೆಲಸವೂ ದೊರೆಯಿತು. ಕಷ್ಟಕ್ಕೆ ಸಿಲುಕಿದ್ದ ಸಂಸಾರ ಕೊಂಚ ಮಟ್ಟಿಗೆ ಸುಧಾರಿಸಿತು. ಮನೆಯ ಮಕ್ಕಳೆಲ್ಲಾ ವಿದ್ಯಾವಂತರಾಗಿ ನಾನಾ ಉದ್ಯೋಗಗಳಲ್ಲಿ ತೊಡಗಿದರು. ಕ್ರಮೇಣ ಖುಷಿರಾಮನ ಕೀರ್ತಿಚಂದ್ರ ಬೆಳೆಯುತ್ತಾ ದೊಡ್ಡವನಾದನು. ಆತನ ವಿದ್ವತ್ತನ್ನು ಬಹು ಮಂದಿ ಗಣ್ಯ ನಾಗರೀಕರು ಮೆಚ್ಚಿಕೊಂಡರು. ಜನರಲ್ಲಿ ವಿಶೇಷ ಮನ್ನಣೆಗೂ ಪಾತ್ರ ನಾದನು. ಮುಂದೆ ಖುಷಿರಾಮನ ಸಂಸಾರ ಲಾಹೋರಿಗೆ ತೆರಳಿ ಬಹುಕಾಲ ಅಲ್ಲಿಯೇ ನೆಲಸಿತು. ಇಲ್ಲಿಯೂ ಸಹ ವಿದ್ಯಾರಂಗದಲ್ಲಿ ಖುಷಿರಾಂ ಸಹನಿ ಯವರ ಪ್ರೌಢಿಮೆ ಮನೆಮಾತಾಯಿತು. ಉತ್ತಮ ವಿದ್ವಾಸರೆಂದು ವಿಶೇಷ

ಗೌರವಕ್ಕೆ ಪಾತ್ರರಾದರು. ಹೀಗೆ ಬೀರಬಲನ ತಂದೆ ಖುಷಿರಾಂ ಸಹನಿಯವರ ಬಾಳ ಹೋರಾಟ ಅನುಪಮವಾದುದು. ಇತರರ ಆಶ್ರಯವಿಲ್ಲದೆ ತಮ್ಮ ಸ್ವಪ್ರಯತ್ನದಿಂದಲೇ ಆತ ಸಂಪಾದಿಸಿದ ಗೌರವ ಪ್ರತಿಷ್ಠೆಗಳು ಇತರರಿಗೆ ಅನುಕರಣೀಯ. ತಮ್ಮ ಬಾಳಿನ ಈ ಧೀರ ಹೋರಾಟವನ್ನು ಖುಷಿರಾಂ ತಮ್ಮ ಎಳೆಯ ಮಕ್ಕಳಿಗೆ ಹೇಳುತ್ತಾ ಅವರಲ್ಲಿ ಒಂದು ಬಗೆಯ ಧೀಪ್ರಕೃತಿಯನ್ನು ಬೆಳೆಸಲು ಬಹುಮಟ್ಟಿಗೆ ಕಾರಣರಾದರೆಂದರೆ ಹೊಗಳಿಕೆಯಾಗಲಾರದು.

ಬೀರ್‌ಬಲನ ತಂದೆ ಬಹು ಮಟ್ಟಿಗೆ ಸ್ವಾತಂತ್ರ್ಯ ಪ್ರಿಯರು—ಬಾಳಿನ ಎಲ್ಲಾ ಮುಖಗಳಲ್ಲೂ. ಆಗ ತಾನೆ ಪಂಜಾಬಿನಲ್ಲಿ ಪ್ರಾರಂಭವಾಗಿದ್ದ ಬ್ರಹ್ಮ ಸಮಾಜದ ಚಳುವಳಿಯಲ್ಲಿ ಇವರು ವಹಿಸಿದ ಪಾತ್ರ ಅತ್ಯಂತ ಪ್ರಮುಖವಾದುದು. ಒಂದು ಬಗೆಯ ಧಾರ್ಮಿಕ ದಾಸ್ಯಕ್ಕೆ ಒಳಗಾಗಿದ್ದ ಹಿಂದೂ ಧರ್ಮವನ್ನು ಸುಧಾರಿಸಲು ಹೊರಟ ಈ ಸಮಾಜದ ಪಾತ್ರ ಬಹು ಗಣನೀಯ. ಖುಷಿರಾಂ ತಮ್ಮ ಸುತ್ತಲಿನ ಜನರ ಮತೀಯ ಕುರುಡು ಧರ್ಮವನ್ನು ಕಂಡು ರೋಸಿ ಹೋಗಿ ಬ್ರಹ್ಮ ಸಮಾಜವನ್ನು ಹೃತ್ಪೂರ್ವಕವಾಗಿ ಮೆಚ್ಚಿ, ಸ್ವಾಗತಿಸಿ ತಾವೂ, ತಮ್ಮ ಮನೆಮಂದಿಯೊಡನೆ ಸಮಾಜದ ದೀಕ್ಷೆಯನ್ನು ಕೈಕೊಂಡರು. ತಮ್ಮ ಕೊನೇ ಕಾಲದವರೆವಿಗೂ ಅದನ್ನು ಪ್ರಚುರಿಸಿ ಹಿಂದೂ ಸಮಾಜದ ಏಳಿಗೆಗೆ ಬಹು ನೆರವು ನೀಡಿದರು. ಅಷ್ಟೇ ಅಲ್ಲ ಈ ನವ ತತ್ವಗಳನ್ನು ಬಹುಮಟ್ಟಿಗೆ ತಾವೇ ಸ್ವತಃ ಪರಿಪಾಲಿಸುತ್ತಿದ್ದರು. ಇದಕ್ಕೆ ಒಂದು ನಿದರ್ಶನವಿದೆ. ತಾವು ಇಳಿಯ ವಯಸ್ಸಿನವರಾಗಿ ಶಕ್ತಿಯೆಲ್ಲಾ ಕುಂದಿಹೋದ ಕಾಲ. ಅಮೃತಸರ ಸಿಕ್ಕರ ಪವಿತ್ರ ಯಾತ್ರಾಸ್ಥಳ. ಇಲ್ಲಿಯ ಚಿನ್ನದ ದೇವಾಲಯದ ಪುಷ್ಕರಿಣಿಯನ್ನು ಆಗಾಗ್ಗೆ ಶುದ್ಧಿಗೊಳಿಸುತ್ತಾರೆ. ಒಮ್ಮೆ ಈ ಒಪ್ಪ ಮಾಡುವ ಕಾರ್ಯದಲ್ಲಿ ಖುಷಿರಾಂ ತಾವೂ ಹಿಂದೂ ಧಾರ್ಮೀಯರಾದರೂ ಮೊಳಕಾಲುದ್ದದ ನೀರಿನಲ್ಲಿ ಗಂಟೆಗಟ್ಟಲೆ ನಿಂತು ಪುಷ್ಕರಿಣಿಯ ತಳದಲ್ಲಿದ್ದ ಕೆಸರನ್ನು ತೆಗೆದು ಮಕ್ಕರಿಗಳಿಗೆ ತುಂಬಿ ಹೊರಸಾಗಿಸುತ್ತಾ ತಮ್ಮ ಸೇವೆಯನ್ನು ಸಲ್ಲಿಸಿದರು. ಹೀಗೆ ಎಲ್ಲಾ ಧರ್ಮಗಳಲ್ಲೂ ವಿಶೇಷ ಗೌರವ.

ಆ ಕಾಲದಲ್ಲಿ ನಮ್ಮ ದೇಶದಲ್ಲಿ, ಅದರಲ್ಲೂ ಗಂಡು ವೀಡಾದ ಪಂಜಾ

ಬಿನಲ್ಲಿ ರಾಜಕೀಯ ಆಂಧೋಳನ. ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಸಿಂಹ ಪ್ರಾಯರಾದ ಲಾಲ ಲಜಪತ್ ರಾಯ್, ಭಗತ್‌ಸಿಂಗ್ ಇವರ ನೆಲ ವೀಡು-ಪಂಜಾಬು.

ನರಹತ್ಯ ನಡೆದ ಜಲಿಯನ್‌ವಾಲಾಬಾಗ್ ಇರುವುದೂ ಪಂಜಾಬಿನಲ್ಲೇ. ಈ ರಾಜಕೀಯ ಹೋರಾಟದಲ್ಲಿ ಖುಷಿರಾಂ ಸಹನಿಯವರ ಪಾತ್ರ ಮುಖ್ಯವಾದುದು. ಅನೇಕ ಬಾರಿ ಇವರನ್ನು ಸೆರೆಮನೆಗೊಯ್ಯುವ ಪರಿಸ್ಥಿತಿಯೂ ಉದ್ಭವಿಸಿತ್ತು. ೧೯೨೨ರ ಸ್ವಾತಂತ್ರ್ಯ ಚಳುವಳಿಯಲ್ಲಿ ಇವರ ಪಾತ್ರ ಅತಿಯಾಯಿತು. ತಮಗೆ ಬ್ರಿಟಿಷ್ ಸರಕಾರ ಬಹುಮಾನಿಸಿದ್ದ ಬಿರುದು ಬಾವಲಿಯನ್ನು ಸರಕಾರಕ್ಕೆ ವಾಪಸು ಮಾಡಿದರು. ಸರಕಾರದ ಪಾಶವೀ ವರ್ತನೆಯನ್ನು ಖಂಡಿಸಿದರು. ಸರಕಾರ ಖುಷಿರಾಮರ ವಿರಾಮ ವೇತನವನ್ನು ನಿಲ್ಲಿಸುವುದಾಗಿ ಬೆದರಿಕೆ ಹಾಕಿದರು. ಧೀರ ಖುಷಿರಾಮರು ಈ ಗೊಡ್ಡು ಬೆದರಿಕೆಗೆ ಸೊಪ್ಪು ಹಾಕಲಿಲ್ಲ. ಇದನ್ನು ಕಂಡುಕೊಂಡ ಸರಕಾರ ತಾವೇ ಸೋತು ಶರಣಾದರು. ವಿರಾಮವೇತನ ಎಂದಿನಂತೆ ಮುಂದುವರಿಯಿತು. ಇವೆಲ್ಲಾ ತರುಣ ಬೀರಬಲನ ಮೇಲೆ ಅಳಿಸಲಾರದ ಅಚ್ಚನ್ನೊತ್ತಿ ಸುಪ್ತವಾಗಿದ್ದ ರಾಷ್ಟ್ರಪ್ರೇಮವನ್ನು ಎಚ್ಚರಗೊಳಿಸಲು ಬಹುಮಟ್ಟಿಗೆ ಸಹಾಯಕವಾದುವು. ಮುಂದೆ ಕಾಂಗ್ರೆಸಿನ ಹೋರಾಟಕ್ಕೆ ಬೀರ್‌ಬಲ್ ಸಹನಿಯವರಿಂದ ವಿಶೇಷ ನೆರವು, ಉತ್ತೇಜನ ದೊರೆಯಿತು. ಇದಕ್ಕೆಲ್ಲಾ ಬಹುಮಟ್ಟಿಗೆ ಕಾರಣ ತಂದೆ ಖುಷಿರಾಂ ಸಹನಿಯವರ ರಾಷ್ಟ್ರಪ್ರೇಮವೇ.

ಇದಲ್ಲದೆ ದೇಶದ ಸ್ವಾತಂತ್ರ್ಯ ಚಳುವಳಿಯ ಮುಖ್ಯ ಆಧಾರಸ್ತಂಭದಂತಿದ್ದ ಮೋತೀಲಾಲ ನೆಹರೂ, ಮದನಮೋಹನ ಮಾಳವೀಯ, ಸರೋಜಿನಿ ನಾಯ್ಡು, ಮುಂತಾದ ಗಣ್ಯ ವ್ಯಕ್ತಿಗಳು ಲಾಹೋರಿಗೆ ಬಂದಾಗಲೆಲ್ಲಾ ಖುಷಿರಾಂ ಅವರ ಮನೆಯಲ್ಲೇ ಅತಿಥಿಗಳಾಗಿ ಉಳಿಯುತ್ತಿದ್ದರು. ಪಂಜಾಬಿನ ರಾಜಕೀಯ ಹೋರಾಟದ ಕೇಂದ್ರವೆಂದರೆ ಲಾಹೋರಿನ ಬ್ರಾಡ್ಲಾ ಭವನ. ಎಲ್ಲಾ ಮುಖಂಡರ ಸಮಾಲೋಚನೆ ನಡೆಯುತ್ತಿದ್ದುದು ಇಲ್ಲೇ. ಇದಕ್ಕೆ ಸಮೀಪದಲ್ಲಿದ್ದುದೇ ಖುಷಿರಾಂ ಸಹನಿಯವರ ನಿವಾಸ. ಈ ಕಾರಣದಿಂದಲೂ ಅನೇಕ ಪ್ರಮುಖ ರಾಜಕಾರಣಿಗಳು ಇವರ ಮನೆಗೆ ಬಂದು

ಹೋಗುತ್ತಿದ್ದರು. ಹೀಗೆ ಎಲ್ಲರ ನಿಕಟ ಪರಿಚಯವನ್ನು ಹೊಂದುವ ಭಾಗ್ಯ ಬೀರ್‌ಬಲ್ ಸಹನಿಗೆ ಎಳೆ ವಯಸ್ಸಿನಲ್ಲೇ ಲಭ್ಯವಾಯಿತು. ಆತನ ರಾಷ್ಟ್ರಕಾರಕ ಶಕ್ತಿಯನ್ನು ಬಹುಮಟ್ಟಿಗೆ ಉದ್ದೀಪನಗೊಳಿಸಲು ಅನುವಾಯಿತು—ಆಗಾಗ್ಯೆ ಲಭಿಸುತ್ತಿದ್ದ ಪ್ರಮುಖ ವ್ಯಕ್ತಿಗಳ ಭೇಟಿ ಬೀರ್‌ಬಲ್ ಸಹನಿಯವರು ತಮ್ಮ ಜೀವಿತದ ಕಡೆಗಾಲದ ವರೆಗೂ ನಿಸ್ಸೀಮ ದೇಶಭಕ್ತರಾಗಿಯೇ ಉಳಿದರು. ಏಕೈಕ ರಾಷ್ಟ್ರೀಯ ಸಂಸ್ಥೆಯಾದ ಕಾಂಗ್ರೆಸ್‌ನಲ್ಲಿ ಅಪಾರ ಭಕ್ತಿ. ಸದಾ ಅಚ್ಚ ಖಾದೀಧಾರಿಗಳು. ಸ್ವಾತಂತ್ರ್ಯದ ಹೊರಾಟದಲ್ಲಿ ಅನೇಕ ಬಾರಿ ತಮ್ಮ ಶಕ್ತಿ ಮೀರಿ ಧನಸಹಾಯ ಮಾಡಿದ್ದಾರೆ. ಡಾ|| ಕಟ್ಜು ಅವರ ನೇತೃತ್ವದಲ್ಲಿ ಲಕ್ನೋ ನಗರದಲ್ಲಿ ಪೂಜ್ಯ ಕಸ್ತೂರ ಬಾ ಸ್ಮಾರಕ ನಿಧಿಯ ಸಂಗ್ರಹದ ಮೊದಲ ಕಾಣಿಕೆ ಡಾ|| ಬೀರ್‌ಬಲ್ ಸಹನಿಯವರದಾಯಿತು.

ತಂದೆ ಇಷ್ಟು ನಿಸ್ಸೀಮರಾಗಿದ್ದರೆ, ತಾಯಿ ಈಶ್ವರೀ ದೇವಿಯೋ, ಎಲ್ಲಾ ವಿಧದಲ್ಲಿಯೂ ಆಕೆ ಋಷಿರಾಂ ಸಹನಿಯವರ ಬಾಳ ಗೆಳತಿ. ಅವರ ಕಷ್ಟ ಸುಖಗಳಲ್ಲಿ ಸದಾ ಹಸನ್ಮುಖಿಯಾಗಿ ಸಮಪಾಲುಗೊಳ್ಳುತ್ತಿದ್ದಳು. ಮಕ್ಕಳನ್ನು ಕಂಡರಂತೂ ಪಂಚಪ್ರಾಣ. ಅದರಲ್ಲೂ ತನ್ನ ನಲವಿನ ಮಕ್ಕಳ ವಿದ್ಯಾಭ್ಯಾಸದ ವಿಷಯದಲ್ಲಿ ಈಕೆಗೆ ಎಲ್ಲಿಲ್ಲದ ಶ್ರದ್ಧೆ, ಆಸಕ್ತಿ. ಐದು ಗಂಡು ಮಕ್ಕಳನ್ನೂ ಉನ್ನತ ವಿದ್ಯಾಭ್ಯಾಸಕ್ಕಾಗಿ ಪಾಶ್ಚಾತ್ಯ ದೇಶಗಳಿಗೆ ಕಳುಹಿಸಿ, ಅವರಿಗಾಗಿ ಪಟ್ಟ ಕಷ್ಟ, ಮಾಡಿದ ತ್ಯಾಗ ಬಹು ಆದರ್ಶನೀಯ. ಗೊಡ್ಡು ಸಂಪ್ರದಾಯಕ್ಕೆ ಶರಣಾಗಿದ್ದ ಹಿಂದೂ ಮನೆತನದ ಹೆಣ್ಣು ಮಕ್ಕಳು ಓದುವುದೆಂದರೇನೇ ಒಂದು ನಿಷಿದ್ಧ ಪದ್ಧತಿ ಎಂದು ಭಾವಿಸುತ್ತಿದ್ದ ಕಾಲ. ಆಗ ಈ ಹುರುಳಿಲ್ಲದ ಸಂಪ್ರದಾಯಗಳಿಗೆ ಈಕೆ ಮಣಿಯದೆ ತನ್ನ ಹೆಣ್ಣು ಮಕ್ಕಳಿಗೂ ಸಹ ಉನ್ನತ ರೀತಿಯ ಇಂಗ್ಲೀಷ್ ವಿದ್ಯಾರ್ಜನೆಯನ್ನು ಮಾಡಿಸಿದಳು. ಬೀರ್‌ಬಲ್‌ರ ಸಹೋದರಿ ಇಡೀ ಪಂಜಾಬ್ ವಿಶ್ವವಿದ್ಯಾನಿಲಯದಲ್ಲೇ ಮೊದಲನೆಯ ಮಹಿಳಾಪದವೀಧರಳು. ಅಲ್ಲದೆ ಈಕೆ ಬಹು ಉದಾರ ಚರಿತಳು, ಸರಳಜೀವಿ. ಈ ಉತ್ತಮ ಗುಣಗಳೆಲ್ಲಾ ಬೆಳೆಯುವ ಮಕ್ಕಳ ಮೇಲೆ ಉತ್ತಮ ರೀತಿಯ ಪರಿಣಾಮವನ್ನೇ ಉಂಟುಮಾಡಿದವು.

ಬೀರ್‌ಬಲ್ ಸಹನಿಯವರ ವಿದ್ಯಾಭ್ಯಾಸ ಲಾಹೋರಿನ ಮಿರ್ಷ

ಸ್ಕೂಲಿನಲ್ಲಿ ಮೊದಲಾಯಿತು. ತಮ್ಮ ಚುರುಕು ತನದಿಂದ ಉಪಾಧ್ಯಾಯರ ವಿಶೇಷ ಪ್ರೀತಿಯನ್ನು ಸಂಪಾದಿಸಿದರು. ಪಾಠಪ್ರವಚನಗಳಲ್ಲಿ ಎಂದೂ ಮೇಲುಗೈ. ಮುಂದೆ ಸೆಂಟ್ರಲ್ ಮಾಡಲ್ ಸ್ಕೂಲಿನಲ್ಲಿ ಓದಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು. ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಸಂಸ್ಕೃತದಲ್ಲಿ ಇಡೀ ಪಂಜಾಬಿಗೆ ಮೊದಲನೆಯವರು. ಗವರ್ನಮೆಂಟ್ ಕಾಲೇಜನ್ನು ಪ್ರವೇಶಿಸಿದರು. ಇವರು ಕಾಲೇಜಿನಲ್ಲಿ ಓದುತ್ತಿದ್ದಾಗ ಇವರ ತಂದೆ ಖುಷಿರಾಂ ಸಹನಿಯವರು ಅಲ್ಲೇ ವಿಜ್ಞಾನದ ಪ್ರೊಫೆಸರ್ ಆಗಿದ್ದರು. ಇಂಟರ್‌ಮೀಡಿಯೇಟ್ ವಿಜ್ಞಾನ ವಿಭಾಗದ ಪರೀಕ್ಷೆಯಲ್ಲೂ ಸಹ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾಗಿ ರ್‍ಯಾಂಕನ್ನೂ ಸಹ ಪಡೆದರು.

ಹೀಗೆ ೧೯೧೧ ನೇ ವರ್ಷದಲ್ಲಿ ಪಂಜಾಬ್ ವಿಶ್ವವಿದ್ಯಾನಿಲಯದ ಪದವೀಧರರಾದರು. ಮಗನ ವಿದ್ಯಾಪ್ರಗತಿಯನ್ನು ಕಂಡ ತಂದೆ ತಾಯಿಗಳ ಹರ್ಷ ಬಹುವಾಯಿತು. ಮುಂದೆ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಬೀರ್‌ಬಲನನ್ನು ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯಕ್ಕೂ ಕಳುಹಿಸುವ ಯೋಚನೆಯನ್ನು ಕೈಗೊಂಡರು. ಇದು ಬೀರ್‌ಬಲ್ ಸಹನಿಗೆ ಅಷ್ಟಾಗಿ ಇಷ್ಟಪಟ್ಟ ಹಾಗೆ ಕಾಣೆ. ಪ್ರೀತಿಯ ತಂದೆತಾಯಿಗಳನ್ನು, ಮನೆ ಮಂದಿಯನ್ನು ಬಹುಕಾಲ ಅಗಲಿರಲು ಕೊಂಚ ಕಷ್ಟವೇ ಆಯಿತೆನ್ನಬಹುದು. ಆ ಕಾಲದಲ್ಲಿ ಕೇಂಬ್ರಿಡ್ಜ್‌ನಲ್ಲಿ ಓದಲು ಬರುವ ವಿದ್ಯಾರ್ಥಿಗಳ ಕಷ್ಟಸುಖಗಳನ್ನು ವಿಚಾರಿಸಲು 'ಹಿತಚಿಂತಕ' (Guardian) ರೊಬ್ಬರಿದ್ದರು. ಅಂತೆಯೇ ಇವರ ಹಿರಿಯಣ್ಣ ವಿಕ್ರಮಜಿತ್ ಸಹನಿಯವರು ಕೇಂಬ್ರಿಡ್ಜ್‌ಗೆ ಸೇರಲು ಬಂದಿದ್ದ ತಮ್ಮನನ್ನು ಕರೆದುಕೊಂಡು ಹಿತಚಿಂತಕರಾಗಿದ್ದ ಆರ್ನಾಲ್ಡ್ ಅವರ ಭೇಟಿ ಮಾಡಿದರು. ಬೀರ್‌ಬಲನನ್ನು ನೋಡಿದ ಅವರು ಏಕೋ ತಮ್ಮ ಒಪ್ಪಿಗೆಯನ್ನು ನೀಡಲಿಲ್ಲ. ಅಣ್ಣತಮ್ಮಂದಿರಿಗೆ ವಿಶೇಷ ನೋವಾಯಿತು. ಆದರೆ ಇಷ್ಟಕ್ಕೆ ಬಿಡಲಿಲ್ಲ. ತಾವೇ ಸ್ವತಃ ಕಾಲೇಜಿನ ಮುಖ್ಯಾಧಿಕಾರಿ ಡಾ|| ಪೀಟರ್ ಗೈಲ್ಸ್ ಅವರನ್ನು ಸಂದರ್ಶಿಸಿದರು. ಬೀರ್‌ಬಲ್ ಸಹನಿಯವರಿಗೆ ಕೂಡಲೆ ಇಮ್ಯಾನ್ಯುಯಲ್ ಕಾಲೇಜಿನಲ್ಲಿ ಪ್ರವೇಶವೂ ದೊರೆಯಿತು. ಹೊಸ ವಾತಾವರಣದಲ್ಲಿ ಮೂರು ನಾಲ್ಕು ದಿನಗಳು ಕಳೆಯಿತು. ಸನ್ನಿವೇಶ ಹಿಡಿಸದೆ ಬೀರ್‌ಬಲ್ ಚಿಂತಾಮಗ್ನರಾದರು. ಕೊನೆಗೆ ಬೇಸರ

ಗೊಂಡು ಒಂದು ಬೆಳಿಗ್ಗೆ ಲಂಡನ್‌ನಲ್ಲಿ ವೈದ್ಯ ಶಾಸ್ತ್ರವನ್ನು ಅಭ್ಯಾಸ ಮಾಡು ತ್ತಿದ್ದ ತಮ್ಮ ಅಣ್ಣನ ಕೋಣೆಯನ್ನು ಹೊಕ್ಕನು. ತಂದೆ ತಾಯಿಗಳ ಅಗಲಿಕೆ ಸಾಧ್ಯವಿಲ್ಲವೆಂದೂ, ತಮ್ಮನ್ನು ಆದಷ್ಟು ಬೇಗನೆ ಲಾಹೋರಿಗೆ ಕಳುಹಿಸಬೇಕೆಂದೂ ಪೀಡಿಸಿದರು. ಇವರಣ್ಣನಿಗೆ ಬಹು ಅಚ್ಚರಿಯಾಯಿತು. ಬಹು ಕಷ್ಟಪಟ್ಟು ಸಮಾಧಾನ ಹೇಳಿದರು. ಆ ರಾತ್ರಿ ಬೀರ್‌ಬಲ್ ಅಣ್ಣನ ಕೋಣೆಯಲ್ಲೇ ಉಳಿದರು. ಬೆಳಗಾಯಿತು. ಪರಿಸ್ಥಿತಿಯೂ ಸುಧಾರಿಸಿತ್ತು. ಅಣ್ಣನ ಸಮಾಧಾನ ಫಲಿಸಿತೆನ್ನಬಹುದು. ಬೀರ್‌ಬಲ್ ಕೇಂಬ್ರಿಡ್ಜ್‌ಗೂ ವಾಪಸಾದರು. ತಮ್ಮ ಅಧ್ಯಯನವನ್ನು ಮುಂದುವರಿಸಿದರು. ಸುಮಾರು ಒಂಬತ್ತು ವರ್ಷಗಳಿಗೂ ಹೆಚ್ಚಾಗಿ ಆ ವಿಶ್ವವಿದ್ಯಾನಿಲಯದ ಸಸ್ಯ ವಿಜ್ಞಾನ ಶಾಲೆಯಲ್ಲಿ ಇವರ ಅಧ್ಯಯನ, ಸಂಶೋಧನೆ ಅವ್ಯಾಹತವಾಗಿ ನಡೆಯಿತು. ಕೀರ್ತಿ ಶಾಲಿಗಳಾದರು. ಮುಂದೆ ಪ್ರಪಂಚದ ಉತ್ತಮ ಸಸ್ಯ ಶಾಸ್ತ್ರಜ್ಞರ ಗುಂಪನ್ನು ಸೇರುವ ಮಹೋಗ್ರ ತಪಸ್ಸು ನಡೆಯಿತು. ಇದಕ್ಕೆ ಬಹುಮಟ್ಟಿಗೆ ಕಾರಣ ಇವರ ವಿದ್ಯಾ ಗುರುಗಳಾದ ಡಾ|| ಅಲೆಕ್ಸಾಂಡರ್ ವುಡ್ ಮತ್ತು ಸರ್ ಆಲ್ಬರ್ಟ್ ಚಾರ್ಲಸ್ ಸಿವಾರ್ಡ್ ಅವರ ಅವ್ಯಾಜ ಪ್ರೇಮ.

ಬೀರ್‌ಬಲ್ ೧೯೧೪ ನೇ ವರ್ಷ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದ ಪದವೀಧರರಾದರು. ಇದಾದ ಮೇಲೆ ತಮಗೆ ಅತ್ಯಂತ ಪ್ರಿಯವಾದ ಸಸ್ಯ ಸಂಶೋಧನೆಯನ್ನು ಗುರುವಿನ ಆಣತಿಯಂತೆ ಕೈಗೊಂಡರು. ಈ ಕಾರ್ಯದಲ್ಲಿ ಇವರಿಗೆ ಬಹುಮಟ್ಟಿಗೆ ನೆರವಾದವರು ಪ್ರಪಂಚದ ಸಸ್ಯ ವಿಜ್ಞಾನದಲ್ಲೇ ಅತ್ಯಂತ ಶ್ರೇಷ್ಠರೂ, ಪ್ರಮುಖರೂ, ಉನ್ನತ ವಿದ್ವಾಂಸರೂ ಆದ ಪ್ರೊ. ಎ. ಸಿ. ಸಿವಾರ್ಡ್. ಅವರ ಉಪನ್ಯಾಸಗಳನ್ನು ಕೇಳುವುದೆಂದರೇನೇ ವಿಜ್ಞಾನದ ವಿದ್ಯಾರ್ಥಿಗಳಿಗೆ ದೊಡ್ಡ ಹಬ್ಬ. ಸಂಶೋಧನೆಯನ್ನು ಅವರ ನೇತ್ರತ್ವದಲ್ಲಿ ನಡೆಸುವುದೆಂದರೆ ಅದೊಂದು ರಸದೂಟ. ಬೀರ್‌ಬಲ್ ಸಹನಿಯರಿಗೆ ಶಿಕ್ಷಣ ದೊರೆತುದು ಇಂತಹವರ ಪವಿತ್ರ ಸಾನ್ನಿಧ್ಯದಲ್ಲಿ. ಸಿವಾರ್ಡ್ ಅವರು ಈಗ ಕಂಡು ಬರುತ್ತಿರುವ ಸಸ್ಯ ಕೋಟಿಯನ್ನು ಎಷ್ಟು ಆಳವಾಗಿ ಅಧ್ಯಯನ ಮಾಡಿದ್ದರೋ ಅಷ್ಟೇ ಆಳವಾಗಿ ಭೂಮಿಯ ಮೇಲೆ ಎಂದೋ ಕಂಡು ಬಂದು ಈಗ ನಿರ್ನಾಮವಾಗಿರುವ ಸಸ್ಯಗಳ ಅವಶೇಷಗಳನ್ನೂ

ಅಧ್ಯಯನ ಮಾಡಿದ್ದರು. ಈ ಶಾಸ್ತ್ರ ವಿಭಾಗದಲ್ಲಿ ಅವರದು ಮೇಲುಗೈ. ತಮ್ಮ ಅಚ್ಚು ಮೆಚ್ಚಿನ ಶಿಷ್ಯ ಬೀರ್‌ಬಲ್ ಭೂಚರಿತ್ರೆಯ ಪ್ರಾಚೀನ ಯುಗಗಳಲ್ಲೊಂದಾದ 'ಗೊಂಡ್ವಾನ ಯುಗ'ದ ಸಸ್ಯಾವಶೇಷಗಳ ವಿಶೇಷ ಅಧ್ಯಯನಕ್ಕೆ ನಿಯಮಿತರಾದಾಗ ಇವರಿಗಾದ ಸಂತೋಷ, ಹೆಮ್ಮೆ ಅಷ್ಟಿಷ್ಟಲ್ಲ. ಮುಂದೆ ಈ ಗುರು ಶಿಷ್ಯರ ನಿಕಟ ಬಾಂಧವ್ಯ ಬಹುವಾಗಿ ಬೆಳೆದು ಬೇರೂರಿತು. ಇತರರಿಗೆ ಅನುಕರಣೀಯವೂ ಆಯಿತು.

ಈ ಕಾಲದಲ್ಲೇ ಅಂದರೆ ಇವರ ವಿದ್ಯಾರ್ಥಿ ದೆಸೆಯಲ್ಲೇ ಮತ್ತೊಂದು ಗುರುತರವಾದ ಹೆಚ್ಚು ಜವಾಬ್ದಾರಿಯುತವಾದ ಕಾರ್ಯವನ್ನು ವಿಶ್ವವಿದ್ಯಾನಿಲಯ ಬೀರ್‌ಬಲ್ ಸಹನಿಯವರಿಗೆ ವಹಿಸಿತೆಂದರೆ ಅವರ ವಿದ್ವತ್ತು, ವಿಜ್ಞಾನ ಪ್ರತಿಭೆ ಯಾವ ಉನ್ನತ ಮಟ್ಟದಲ್ಲಿತ್ತೆಂಬುದನ್ನು ನಾವು ಮನಗಾಣಬಹುದು. ಸಸ್ಯ ವಿಜ್ಞಾನದ ವಿದ್ವಾಂಸರಾದ ಲೋಸನ್ ಅವರು ಬರೆದು ಪ್ರಕಟಿಸಿದ್ದ ಸಸ್ಯ ವಿಜ್ಞಾನದ ಪಠ್ಯಪುಸ್ತಕವನ್ನು ಪರಿಷ್ಕರಿಸಿ ಪ್ರಕಟಪಡಿಸುವ ಕೆಲಸವನ್ನೂ ಸಹನಿಯವರಿಗೆ ವಹಿಸಿತು. ಇದನ್ನು ಬಹು ಸಮರ್ಪಕವಾಗಿ ನೆರವೇರಿಸಿದರು. ತಮ್ಮ ಗುರುಗಳ ಮತ್ತು ಇತರ ಪ್ರಮುಖ ಸಸ್ಯ ವಿಜ್ಞಾನಿಗಳ ಮೆಚ್ಚುಗೆಯನ್ನೂ .ಸಂಪಾದಿಸಿದರು. ಇಂದಿಗೂ ಸಹ ನಮ್ಮ ದೇಶದ ಅನೇಕ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೆ ಈ ಪುಸ್ತಕ, ಸಸ್ಯವಿಜ್ಞಾನದ ವೇದವಾಗಿದೆ ಎನ್ನಬಹುದು. ಸಸ್ಯಾವಶೇಷಗಳನ್ನು ಸಂಶೋಧನೆ ಮಾಡಿ ಉತ್ತಮ ಪ್ರಬಂಧವನ್ನು ಪ್ರಕಟಿಸಿದರು. ಇವರ ವಿದ್ವತ್ತನ್ನು ಮೆಚ್ಚಿ ೧೯೧೯ರಲ್ಲಿ ಲಂಡನ್ ವಿಶ್ವವಿದ್ಯಾನಿಲಯ 'ಡಾಕ್ಟರೇಟ್' ಪದವಿಯನ್ನಿತ್ತು ವಿಶೇಷ ರೀತಿಯಲ್ಲಿ ಗೌರವಿಸಿತು. ಹೀಗೆ ಸಸ್ಯ ಶಾಸ್ತ್ರದಲ್ಲಿ ಅತುಳವಾದ ಜ್ಞಾನಾರ್ಜನೆ ಮಾಡಿ ಅದೇ ವರ್ಷ ತಮ್ಮ ತಾಯ್ನಾಡಿಗೆ ಮರಳಿದರು ಇಲ್ಲಿಗೆ ಬಂದೊಡನೆಯೇ ಇವರ ವಿದ್ವತ್ತನ್ನು ಮನಗಂಡ ಪಂಡಿತ ಮದನಮೋಹನ ಮಾಳವೀಯರು ತಾವು ಆಗತಾನೆ ಪ್ರಾರಂಭಿಸಿದ್ದ ಬನಾರಸ್ ಹಿಂದೂ ವಿಶ್ವವಿದ್ಯಾನಿಲಯದ ಸಸ್ಯವಿಭಾಗದ ಅಧ್ಯಾಪಕರಾಗಲು ಇವರನ್ನು ಆಹ್ವಾನಿಸಿದರು. ಆದರೆ ಇಲ್ಲಿ ಅವರು ಬಹುಕಾಲ ನಿಲ್ಲಲು ಸಾಧ್ಯವಾಗಲಿಲ್ಲ. ಆಗ ಬನಾರಸ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಡಾ|| ಗಣೇಶ ಪ್ರಸಾದರವರಿಗೂ ಸಹನಿಯವರಿಗೂ ಒಮ್ಮೆ ಮಾತುಕತೆ ನಡೆದು, ಸಹನಿಯವರು ತಮ್ಮ ಕೆಲಸಕ್ಕೆ ರಾಜೀ

ಸ್ವಾಮಿಯಿತ್ತರು. ಗಣೇಶ ಪ್ರಸಾದರು ಉತ್ತಮ ಗಣಿತ ಶಾಸ್ತ್ರಜ್ಞರು. ಆದರೂ ಕೊಂಚ ವಿಚಿತ್ರವ್ಯಕ್ತಿ ಎನ್ನಬಹುದು. ತಾವು ರುಜುಹಾಕುವಾಗಲೆಲ್ಲಾ ಕೊನೆಯಲ್ಲಿ ತಮ್ಮ ಹೆಸರಿನ ಜತೆಗೆ 'ಡಿ. ಎಸ್‌ಸಿ.' ಎಂಬ ಪದವಿಯನ್ನು ಎಂದೂ ಮರೆಯದೆ ಬರೆಯುತ್ತಿದ್ದರಂತೆ! ಹೀಗಾಗಿ ಸ್ವತಂತ್ರ ಮನೋವೃತ್ತಿಯ ಸಹನಿಯವರಿಗೂ ಗಣೇಶ ಪ್ರಸಾದ್ ಡಿ. ಎಸ್‌ಸಿ. ಅವರಿಗೂ ಸರಿ ಹೊಂದದುದು ಹೆಚ್ಚೇನಲ್ಲ.

ಮುಂದೆ ಕೊಂಚಕಾಲ ಲಾಹೋರ್‌ನಲ್ಲಿದ್ದು ಅನಂತರ ೧೯೨೧ರಲ್ಲಿ ಲಕ್ನೋ ವಿಶ್ವವಿದ್ಯಾನಿಲಯದ ಸಸ್ಯ ವಿಜ್ಞಾನ ಶಾಖೆಯ ಪ್ರೊಫೆಸರಾಗಿ ಇವರ ಕೆಲಸ ಮೊದಲಾಯಿತು. ಬೋಧನೆಯ ಜತೆಯಲ್ಲೇ ಸಂಶೋಧನೆಯೂ ಬೀರ್‌ಬಲ್ ಸಹನಿಯವರ ನೇತೃತ್ವದಲ್ಲಿ ಅತ್ಯಂತ ಉನ್ನತಮಟ್ಟದಲ್ಲಿ ಮೊದಲಾಯಿತೆನ್ನಬಹುದು. ಪ್ರಾಚೀನ ಸಸ್ಯಾವಶೇಷಗಳ ಸಂಶೋಧನೆಯ ಅಂಕುರಾರ್ಪಣ, ನಮ್ಮ ದೇಶದಲ್ಲಿ ನಡೆದದ್ದು ಪ್ರೊ|| ಬೀರ್‌ಬಲ್ ಸಹನಿಯವರ ನೇತೃತ್ವದಲ್ಲೇ. ಸಂಶೋಧನೆಯಲ್ಲಿ ಆಸಕ್ತಿಯುಳ್ಳ ಅನೇಕ ವಿದ್ಯಾರ್ಥಿಗಳಿಗೆ ಇವರ ಸಾನ್ನಿಧ್ಯ ಸಮೀಪವಾಯಿತು. ವಿಜ್ಞಾನ ಪ್ರಪಂಚದಲ್ಲಿ ನಮ್ಮ ದೇಶದ ಹೆಸರೂ ಕೇಳಿಬರುವಂತಾಯಿತು. ಈ ಎಲ್ಲಾ ಕಾರ್ಯಗಳಲ್ಲೂ ಇವರ ಗುರು ಪ್ರೊ|| ಸಿವಾರ್ಡ್ ಅವರ ಹೃತ್ಪೂರ್ವಕ ಬೆಂಬಲ, ಆಶೀರ್ವಾದ ಇವರ ಪಾಲಿಗೆ ಸದಾ ದೊರೆತು ವಿಶೇಷ ಉತ್ತೇಜಿತರಾದರು.

ಬೀರ್‌ಬಲ್ ಸಹನಿಯವರು ಲಕ್ನೋ ವಿಶ್ವವಿದ್ಯಾನಿಲಯವನ್ನು ಆಗ ತಾನೆ ಸೇರಿದ್ದ ದಿನಗಳು. ನಮ್ಮ ದೇಶದ ಭೂವಿಜ್ಞಾನ ಸಂಸ್ಥೆ ತಾನು ಸಂಗ್ರಹಿಸಿದ್ದ ಸಸ್ಯಾವಶೇಷಗಳನ್ನೂ ಸಂಶೋಧನೆಗಾಗಿ ಸಿವಾರ್ಡ್ ಅವರಿಗೆ ಕಳುಹಿಸುವ ಯೋಚನೆ ಮಾಡಿತು. ಇದು ಹೇಗೋ ಅವರಿಗೆ ಗೊತ್ತಾಗಿ ಅದು ತಮ್ಮಿಂದ ಸಾಧ್ಯವಿಲ್ಲವೆಂದೂ, ನ್ಯಾಯವಾಗಿ ಅದು ತಮ್ಮ ಶಿಷ್ಯ ಸಹನಿಯವರಿಗೆ ಸೇರಬೇಕೆಂದೂ ತಿಳಿಸಿದರು. ಇದನ್ನುಕೇಳಿದ ಸಹನಿಯವರಿಗೆ ಅಪಾರ ಆನಂದವಾಯಿತು. ಹೀಗೆ ಸಿವಾರ್ಡ್‌ರಿಂದ ವಿಶೇಷರೀತಿಯ ಉತ್ತೇಜನ ಅನೇಕ ಸಂದರ್ಭಗಳಲ್ಲಿ ದೊರೆಯುತ್ತಿತ್ತು. ಇಂಡಿಯಾ ಭೂಶೋಧಕ ಸಂಸ್ಥೆಯವರಿಗೂ, ಪ್ರೊ|| ಬೀರ್‌ಬಲ್ ಸಹನಿಯವರಿಗೂ ಅಂದು ಮೊದಲಾದ ಪರಿಚಯ ನಿಕಟವಾಗಿ ಬೆಳೆದು ಕಡೆಯವರೆವಿಗೂ ಅಚ್ಚಳಿಯದೆ ನಿಂತಿತು.

ನಮ್ಮ ದೇಶದ ನಾನಾ ಶಿಲೆಗಳಲ್ಲಿ ಕಂಡುಬಂದ ಸಸ್ಯಾವಶೇಷಗನ್ನೆಲ್ಲಾ ವಿಶೇಷ ರೀತಿಯಲ್ಲಿ ಸಂಶೋಧನೆ ಮಾಡಿ ಕೀರ್ತಿಶಾಲಿಗಳಾದರು. ನಮ್ಮ ದೇಶದ ಭೂಚರಿತ್ರೆಯ ಪ್ರಮುಖ ಒಗಟುಗಳಾದ ದಖನ್ನಿನ ಶಿಲಾವರ್ಗ ಮತ್ತು 'ಹಿಮಾಲಯ ಶ್ರೇಣಿಯಲ್ಲಿನ ಉಪ್ಪಿನ ನಿಕ್ಷೇಪಗಳ ಕಾಲನಿರ್ಣಯದ ಮೇಲೆ ವಿಶೇಷ ರೀತಿಯ ಬೆಳಕನ್ನೂ ಬೀರಿದರು.

೧೯೨೦ನೇ ವರ್ಷದಲ್ಲಿ ಬೀರ್‌ಬಲ್ ಸಹನಿಯವರ ಮದುವೆ ನಡೆಯಿತು. ಋಷಿರಾಂ ಸಹನಿಯವರ ಆಪ್ತಮಿತ್ರವರ್ಗಕ್ಕೆ ಸೇರಿದ ಕುಲೀನ ಕುಟುಂಬದ ಮಗಳು ಶ್ರೀಮತಿ ಸಾವಿತ್ರಿದೇವಿಯವರೇ ಬೀರ್‌ಬಲ್‌ರ ಪತ್ನಿ. ಸಹನಿ ದಂಪತಿಗಳ ಸಂಸಾರ ಬಹು ಅಚ್ಚುಕಟ್ಟಾದುದು. ಇತರರಿಗೆ ಆದರ್ಶವಾಗಿದೆ. ಪ್ರಸಿದ್ಧ ವಿಜ್ಞಾನಿಯಾದ ಪತಿಗೆ ಬೆಂಗಾವಲಾಗಿ ಸಾವಿತ್ರಿಯವರು ಸದಾ ಇರುತ್ತಿದ್ದರು. ಒಬ್ಬರನ್ನೊಬ್ಬರು ಅಗಲಿದ ಸಂದರ್ಭಗಳೇ ಬಹು ವಿರಳ. ಹೀಗೆ ಪತಿಯ ಪ್ರತಿಕಾರ್ಯದಲ್ಲೂ ಸಮಪಾಲ್ಗೊಳ್ಳುತ್ತಿದ್ದರು. ಸಹನಿಯವರ ವಿದೇಶ ಪರ್ಯಟನೆಗಳಲ್ಲೂ ಈಕೆ ಜತೆಯಲ್ಲೇ ಇರುತಿದ್ದಳು. ಈಗಲೂ ಸಹ ತಮ್ಮ ಪತ್ನಿ ಲಕ್ನೋವಿನಲ್ಲಿ ಸ್ಥಾಪಿಸಿದ ಸಂಶೋಧನಾಲಯದ ಮುಖ್ಯಾಧಿಕಾರಿಯಾಗಿದ್ದಾರೆ.

ಸಹನಿಯವರು ಲಕ್ನೋ ವಿಶ್ವವಿದ್ಯಾನಿಲಯವನ್ನು ಸೇರಿದಾಗ ಅಲ್ಲಿನ ಸಸ್ಯವಿಜ್ಞಾನ ಶಾಖೆ ಇನ್ನೂ ಶೈಶವಾವಸ್ಥೆಯಲ್ಲಿತ್ತು. ಇವರೂ ಸೇರಿ ಕೇವಲ ಮೂರು ಅಧ್ಯಾಪಕರು. ಕೇವಲ ಸಣ್ಣ ಮೂರು ಕೋಣೆಗಳು. ಇಲ್ಲೇ ಪುಸ್ತಕ ಭಂಡಾರ, ಸಂಶೋಧನೆಯ ಕೊಟಡಿಗಳು, ಸಾಲದುದಕ್ಕೆ ಪಾಠಪ್ರವಚನಗಳು. ಪ್ರೊ|| ಸಹನಿಯವರು ಮ್ಯೂಸಿಯಮ್ಮಿನ ಮೂಲೆಯೊಂದರಲ್ಲಿ ಕುಳಿತುಕೊಳ್ಳುತ್ತಿದ್ದರು. ಬಹು ಸಮರ್ಪಕವಾದ ರೀತಿಯಲ್ಲಿ ಈ ವಿಭಾಗದ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಅವರ ಆಡಳಿತ, ಬೋಧನೆ, ಸಂಶೋಧನೆ ಇಡೀ ವಿಶ್ವವಿದ್ಯಾನಿಲಯದಲ್ಲೇ ಮನೆಮಾತಾಗಿತ್ತು. ವಿರಾಮವಿಲ್ಲದ ಅನೇಕ ಕೆಲಸಕಾರ್ಯಗಳ ಮಧ್ಯದಲ್ಲೂ ಅನುವುಮಾಡಿಕೊಂಡು ಸಹನಿಯವರು ನಡೆಸುತ್ತಿದ್ದ ಉನ್ನತರೀತಿಯ ಸಂಶೋದನೆಗಳನ್ನು ಕಂಡು ಬೆರಗಾಗದವರೇ ವಿರಳ. ಒಂದು ಬಾರಿ ಸರ್ ಫಿಲಿಪ್ ಹಾರ್ಟಾಗ್ ಎಂಬ ಪಾಶ್ಚಿಮಾತ್ಯ ವಿದ್ವಾಂಸರು ಲಕ್ನೋ ವಿಶ್ವವಿದ್ಯಾನಿಲಯಕ್ಕೆ ಭೇಟಿಯಿತ್ತರು.

ಸಸ್ಯವಿಜ್ಞಾನಶಾಖೆಗೂ ಬಂದರು. ಆ ವೇಳೆಗಾಗಲೇ ಸಹನಿಯವರ ಸಂಶೋಧನೆಗಳು ವಿಜ್ಞಾನ ಪ್ರಪಂಚದಲ್ಲಿ ಜಯಭೇರಿಯನ್ನು ಮೊಳಗಿಸಿದ್ದವು. ಹೀಗಾಗಿ ಸಹನಿಯವರನ್ನು ಭೇಟಿಮಾಡಿ ಅವರನ್ನು ಪರಿಚಯಮಾಡಿಕೊಳ್ಳುವ ಆಸೆ ಹಾರ್ಟೊಗ್ ಅವರಲ್ಲಿ ಹೆಚ್ಚಾಯಿತು. ಅಲ್ಲಿಗೆ ಬಂದವರೆ ಮೂರು ಸಣ್ಣ ಸಣ್ಣ ಕೋಣೆಗಳನ್ನು ಸುತ್ತಾಡಿದ ಮೇಲೆ "ಪ್ರೊ|| ಸಹನಿಯವರು ಸಂಶೋಧನೆ ಮಾಡುವ ಸ್ಥಳವೆಲ್ಲಿ? ನಾನು ನೋಡಬೇಕು" ಎಂದರು. ಜತೆಯಲ್ಲಿದ್ದವರು ಮ್ಯೂಸಿಯಮ್ಮಿನ ಮೂಲೆಯಲ್ಲಿದ್ದ ಮೇಜಿನ ಕಡೆ ಬೆರಳುಮಾಡಿ 'ಅಗೋ! ಅಲ್ಲೇ' ಎಂದಾಗ ಅವರಿಗಾದ ವಿಸ್ಮಯ ಅಷ್ಟಿಷ್ಟಲ್ಲ. "ಅಯ್ಯೋ! ಪ್ರೊಫೆಸರಿಗೆ ಬೇರೆ ಕೋಣೆಯೇ ಇಲ್ಲವೇ?" ಎಂದು ಸಹನಿಯವರನ್ನು ಪ್ರಶ್ನಿಸಿದರು. "ಹೌದು, ಪ್ರಸಿದ್ಧ ವಿಜ್ಞಾನಿಗಳ ಸಂಶೋಧನೆಗಳೆಲ್ಲಾ ನಡೆದುದು ಸಣ್ಣ ಕೋಣೆಗಳಲ್ಲೇ" ಎಂದು ಸಹನಿ ಉತ್ತರವಿತ್ತರು. ತಮ್ಮ ವಿನೀತಭಾವವನ್ನು ಪ್ರದರ್ಶಿಸಿದರು. ಅಟ್ಕೆ ಹಾಸಕ್ಕೂ ಸಹನಿಯವರಿಗೂ ಬಲು ಅಂತರ.

ಹೀಗೆ ಸಣ್ಣದಾಗಿ ಪ್ರಾರಂಭವಾದ ಲಕ್ನೋ ವಿಶ್ವವಿದ್ಯಾನಿಲಯದ ಸಸ್ಯವಿಜ್ಞಾನ ಶಾಖೆ ಇವರ ಸತತ ಪ್ರಯತ್ನಗಳ ಫಲವಾಗಿ ಬೃಹದಾಕಾರವಾಗಿ ಬೆಳೆಯಿತು. ಸುಸಜ್ಜಿತ ಭವ್ಯವಾದ ಕಟ್ಟಡಗಳಾದುವು. ಉತ್ತಮ ರೀತಿಯ ಪುಸ್ತಕಭಂಡಾರ, ಪ್ರಯೋಗಶಾಲೆ, ಅತ್ಯಾಧುನಿಕವಾದ ಸಂಶೋಧನೆಯ ಉಪಕರಣಗಳು. ಉತ್ತಮ ವಿದ್ಯಾರ್ಥಿಗಳು ಜ್ಞಾನದಾಹಿಗಳಾದ ಸಂಶೋಧಕರು. ಹೀಗೆ ಬೆಳೆದು ಇಂದು ನಮ್ಮ ದೇಶಕ್ಕೆ ಭೂಷಣಪ್ರಾಯವೆನಿಸಿದೆ. ಅತ್ಯಂತ ಉತ್ತಮ ವಿಜ್ಞಾನಶಾಖೆ ಎಂಬ ಹೆಸರನ್ನೂ ಗಳಿಸಿದೆ. ಇಷ್ಟು ರೀತಿಯಲ್ಲಿ ಇದನ್ನು ಉತ್ತಮಗೊಳಿಸಲು ಸಹನಿಯವರು ಮಾಡಿದ ಪ್ರಯತ್ನ, ಕೆಲಸ, ತುಂಬಾ ಶ್ಲಾಘನೀಯ.

೧೯೨೯ ರಲ್ಲಿ ಸಹನಿಯವರು ಪ್ರಾಚೀನ ಸಸ್ಯಾವಶೇಷಗಳ ವಿಷಯವಾಗಿ ಮಾಡಿದ ಸಂಶೋಧನೆಗಳಿಗಾಗಿ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದವರು 'ಡಾಕ್ಟರೇಟ್' ಡಿಗ್ರಿಯನ್ನಿತ್ತು ಗೌರವಿಸಿದರು. ಇದೊಂದು ಅಪೂರ್ವವಾದ ಗೌರವ. ಇದಕ್ಕೆ ಪಾತ್ರರಾಗುವವರೇ ಬಹು ವಿರಳ. ಅದರಲ್ಲೂ ಈ ಉನ್ನತ ಗೌರವವನ್ನು ಪಡೆದ ಮೊದಲನೆಯ ಭಾರತೀಯ ವಿಜ್ಞಾನಿ

ಯೆಂದರೆ ಡಾ|| ಬೀರ್‌ಬಲ್ ಸಹನಿಯವರೇ. ಇದೇ ರೀತಿ ಬ್ರಿಟನ್ನಿನ
ಅತ್ಯಂತ ಉಚ್ಚವಾದ ವಿಜ್ಞಾನ ಗೌರವವೆಂದರೆ ಲಂಡನ್ನಿನ 'ರಾಯಲ್
ಸೊಸೈಟಿಯ ಫೆಲೋಷಿಪ್.' ಇದನ್ನೂ ಸಹ ಆ ಸಂಸ್ಥೆ ೧೯೩೬ ರಲ್ಲಿ ಡಾ||
ಸಹನಿಯವರಿಗಿತ್ತು ಸನ್ಮಾನಮಾಡಿತು. ೧೯೩೦ರಲ್ಲಿ ನಡೆದ ಅಂತರ
ರಾಷ್ಟ್ರೀಯ ಸಸ್ಯವಿಜ್ಞಾನಿಗಳ ಸಮ್ಮೇಳನದಲ್ಲಿ ಇವರನ್ನು ಪ್ರಾಚೀನ ಸಸ್ಯ
ವಿಜ್ಞಾನಶಾಖೆಯ ಉಪಾಧ್ಯಕ್ಷರಾಗಿ ಆರಿಸಿ ಗೌರವಿಸಲಾಯಿತು. ಮತ್ತೆ
೧೯೩೫ ರಲ್ಲಿ ಸಮಾವೇಶಗೊಂಡಿದ್ದ ೬ನೇ ಅಂತರರಾಷ್ಟ್ರೀಯ ವಿಜ್ಞಾನಿಗಳ
ಸಮ್ಮೇಳನದಲ್ಲೂ ಇದೇ ಗೌರವ ಲಭಿಸಿತು.

ಸಹನಿಯವರು ವಿಜ್ಞಾನದಲ್ಲಿ ಇಷ್ಟು ನಿಷ್ಣಾತರಾಗಿದ್ದರೂ, ಆಸಕ್ತ
ರಾಗಿದ್ದರೂ ಜನಸಾಮಾನ್ಯರಿಂದ ದೂರವಾಗಿರುವ ಸ್ವಭಾವದವರಲ್ಲ.
ಸಾಮಾನ್ಯರೊಡನೆ ಕಲೆತು, ಬೆರೆತು, ನಲಿಯುತ್ತಿದ್ದರು. ಕೇಂಬ್ರಿಡ್ಜ್‌ನಲ್ಲಿ
ಓದುತ್ತಿದ್ದಾಗ ಅಲ್ಲಿದ್ದ ಭಾರತೀಯ ವಿದ್ಯಾರ್ಥಿಗಳು ಒಮ್ಮೆ ಒಂದು ಸಂತೋ
ಷಕೂಟವನ್ನು ಏರ್ಪಡಿಸಿದ್ದರು. ವಿನೋದಾವಳಿಯೂ ನಡೆಯುವ ಏರ್ಪಾ
ಟಾಯಿತು. ಬೀರ್‌ಬಲ್, ಸಾಧುವಿನ ವೇಷಧಾರಿಯಾಗಿ ಕಾಣಿಸಿಕೊಂಡಾಗ
ನೆರೆದಿದ್ದ ಸ್ನೇಹಿತರೆಲ್ಲಾ ದಂಗು ಬಡೆದರು. ಆಟ ಪಾಟಗಳಲ್ಲಿ ವಿಶೇಷ
ಆಸಕ್ತಿ. ಇಳಿ ವಯಸ್ಸಿನಲ್ಲೂ ಈ ಅಭಿಮಾನ ಕುಗ್ಗಲಿಲ್ಲ. ಲಾಹೋರಿನಲ್ಲಿ
ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ ಉತ್ತಮ ಕ್ರೀಡಾಗಾರರಾಗಿದ್ದರು.
ಹಾಕಿ ಮತ್ತು ಟೆನಿಸ್ ಆಟದಲ್ಲಿ ಸಹನಿಯವರು ಎತ್ತಿದ ಕೈ. ಅನೇಕ
ಪಂದ್ಯಗಳಲ್ಲಿ ವಿಶ್ವವಿದ್ಯಾನಿಲಯವನ್ನು ಪ್ರತಿನಿಧಿಸಿ ಪಾರಿತೋಷಕಗಳನ್ನು
ಸಂಪಾದಿಸಿದರು. ಕೇಂಬ್ರಿಡ್ಜ್‌ನಲ್ಲಿ ಓದುತ್ತಿದ್ದಾಗಲೂ ಅಲ್ಲಿಯ 'ಇಂಡಿ
ಯನ್ ಮಜ್ಲಿಸ್' ಟೀಮಿನ ಉತ್ತಮ ಟೆನಿಸ್ ಆಟಗಾರರಾಗಿದ್ದರು. ಇದ
ಲ್ಲದೆ 'ಚೆಸ್' (ಚದುರಂಗ) ಆಟವೆಂದರೆ ಎಲ್ಲಿಲ್ಲದ ಉತ್ಸಾಹ. ಇವರು
ಆಡುತ್ತಿದ್ದ ಚೆಸ್ ಆಟ ತಿಂಗಳುಗಟ್ಟಲೆ ನಡೆಯುತ್ತಿತ್ತು.

ಚಿಕ್ಕಂದಿನಿಂದಲೂ ನಿಸರ್ಗದಲ್ಲಿ ಸುತ್ತಾಡುವುದೆಂದರೆ ಸಹನಿಯವರಿಗೆ
ಬಹು ಇಷ್ಟ. ಇವರು ಎಂಟು ವರ್ಷದ ಹುಡುಗನಾಗಿದ್ದಾಗ ಬೇಸಿಗೆಯ
ವಿಹಾರಕ್ಕಾಗಿ ಮನೆಯವರೆಲ್ಲಾ ಹಿಮಾಲಯದ ತಪ್ಪಲಿನಲ್ಲಿದ್ದ ಮರ್ರೀ
ಎಂಬ ಊರಿನಲ್ಲಿ ಅನೇಕ ವೇಳೆ ಬಿಡಾರ ಮಾಡುತ್ತಿದ್ದರು. ಸುತ್ತಲಿನ

ನಿಸರ್ಗ ಬಹು ರಮಣೀಯವಾಗಿತ್ತು. ಬಾಲಕ ಸಹನಿಯ ಕುತೂಹಲ ವನ್ನು ಕೆರಳಿಸಿ ಆಹ್ವಾನಿಸುತ್ತಿತ್ತು. ಒಂದು ಪ್ರಾತಃಕಾಲ ಒಂದೆರಡು ಖಾಲಿ ಡಬ್ಬಗಳನ್ನು ಅಣಿ ಮಾಡಿಕೊಂಡು ತಂಗಿ ಮತ್ತು ಚಿಕ್ಕ ತಮ್ಮನನ್ನು ಜೊತೆ ಗೂಡಿಗೊಂಡು ಸದ್ದಿಲ್ಲದೆ ಮನೆ ಬಿಟ್ಟರು. ಸುತ್ತಲಿನ ಬೆಟ್ಟ ಕಾಡುಗಳಲ್ಲಿ ಸ್ವೇಚ್ಛೆಯಾಗಿ ಅಲೆದಾಡುತ್ತಾ ದೂರದಲ್ಲಿ ಹರಿಯುತ್ತಿದ್ದ ನದಿಯ ತೀರ ವನ್ನು ಸೇರಿದ್ದಾಯಿತು. ಸಂಜೆಯಾಗುತ್ತಾ ಬಂತು. ಕತ್ತಲು ಕವಿಯಿತು. ಮನೆಗೆ ಇನ್ನೂ ಬಹು ದೂರದಲ್ಲೇ ಈ ಸಾಹಸಿಗಳ ತಂಡ ಉಳಿದಿತ್ತು. ಮನೆಯಲ್ಲಿ ಎಷ್ಟು ಹೊತ್ತಾದರೂ ಮಕ್ಕಳು ಬಾರದಿರುವುದನ್ನು ಕಂಡು ಗಾಬರಿಯೋ ಗಾಬರಿ. ಮನೆ ಮಂದಿ ಸೇವಕರು ಲಾಟೀನುಗಳನ್ನು ಹಿಡಿದು ಸುತ್ತಲಿನ ಬೆಟ್ಟಗುಡ್ಡಗಳಲ್ಲಿ ಹುಡುಕಾಡಿದರು. ಕೊನೆಗೆ ಮನೆಯನು ಸಹನಿಯೇ ತಂಗಿ ಮತ್ತು ತಮ್ಮನೊಡನೆ ಸುರಕ್ಷಿತವಾಗಿ ತಲುಪಿದರು. ತಿಂಡಿ ಯಿಲ್ಲದೆ ಹಸಿವು. ಮೈಕೈಯೆಲ್ಲಾ ಪರಚಿ ಹೋಗಿದೆ. ಕಾಲಿಗೆಲ್ಲಾ ಮುಳ್ಳು ಚುಚ್ಚಿ ರಕ್ತ ಸೋರುತ್ತಿದೆ. ಕಣ್ಣಿನಲ್ಲಿ ನೀರು ಧಾರಾಕಾರವಾಗಿ ಹರಿಯು ತ್ತಿದೆ. ತಂದೆ ಖುಷಿರಾಂ ಮಗ ಬೀರ್‌ಬಲ್‌ನನ್ನು ಪ್ರಶ್ನಿಸಿದಾಗ ದಿಟ್ಟತನ ದಿಂದ ಬಾಲಕ 'ಏಡಿಗಳನ್ನು ಹಿಡಿಯಲು ಹೋಗಿದ್ದೆ' ಎಂದನು. ತಂದೆ ಕೋಪಗೊಂಡರೂ ತಮ್ಮ ಮಕ್ಕಳ ದಿಟ್ಟತನಕ್ಕೆ ಬೆರಗಾದರು. ಬೀರ್‌ಬಲ್ ಸಹನಿಯ ಸತ್ಯ ಪ್ರಿಯತೆಗೆ ಈ ಸಣ್ಣ ಸಾಹಸ ದೊಡ್ಡ ನಿದರ್ಶನದಂತಿದೆ.

ಇವರ ದಿಟ್ಟತನವನ್ನು ಸೂಸುವ ನಿದರ್ಶನಗಳು ಹಲವಾರು. ಪಂಜಾಬ್ ವಿಶ್ವವಿದ್ಯಾನಿಲಯದ ಬಿ. ಎಸ್‌ಸಿ ಡಿಗ್ರಿ ಪರೀಕ್ಷೆ ನಡೆಯು ತ್ತಿತ್ತು. ಆ ದಿನ ಸಸ್ಯ ವಿಜ್ಞಾನದ ಪ್ರಶ್ನೆ ಪತ್ರಿಕೆ. ಪರೀಕ್ಷಾಮಂದಿರದಲ್ಲಿ ಪ್ರಶ್ನೆ ಪತ್ರಿಕೆ ಕೈಗೂ ಬಂತು ಕಳೆದ ಬಾರಿ ನಡೆದ ಪರೀಕ್ಷೆಯಲ್ಲಿ ಕೊಟ್ಟ ಪ್ರಶ್ನೆಗಳನ್ನೇ ಪರೀಕ್ಷಕ ಮಹಾಶಯ ಈ ಪರೀಕ್ಷೆಗೂ ಆರಿಸಿದ್ದನು. ಇದನ್ನು ನೋಡಿದ ವಿದ್ಯಾರ್ಥಿ ಸಹನಿಯ ಸಹನೆ ಮೀರಿತು. ಅಲ್ಲಿದ್ದ ಅಧ್ಯಾಪಕರ ಸಮಾಧಾನಕ್ಕೆ ಕಿವಿಗೊಡದೆ ಪರೀಕ್ಷಾ ಭವನವನ್ನು ಕೂಡಲೇ ತ್ಯಜಿಸಿ ಹೊರಬಂದನು. ಉತ್ತರ ಬರೆಯುವ ಗೋಜಿಗೇ ಹೋಗಲಿಲ್ಲ. ಪರೀಕ್ಷೆ ಪ್ರಾರಂಭವಾದ ಹಲವಾರು ನಿಮಿಷಗಳಲ್ಲೇ ಮನೆಗೆ ಮರಳಿ ಬಂದನು. ಮಗನನ್ನು ಕಂಡು ಪ್ರೊಫೆಸರ್ ಖುಷಿರಾಂ ಸಹನಿಯವರಿಗೆ ಗಾಬರಿಯಾ

ಯಿತು. ವಿಚಾರಿಸಿದಾಗ ಮಗನ ದಿಟ್ಟತನವನ್ನು ಕಂಡ ತಂದೆ ಬೆಕ್ಕಸಬೆರಗಾದರು. ಇದು ಇಷ್ಟಕ್ಕೆ ನಿಲ್ಲದೆ ವಿಶ್ವವಿದ್ಯಾನಿಲಯದ ಅಧಿಕಾರಿ ವರ್ಗದ ಕಿವಿಗೂ ಮುಟ್ಟಿತು. ವಿಶ್ವವಿದ್ಯಾನಿಲಯದ ಸಿಂಡಿಕೇಟ್ ಸಭೆಯಲ್ಲೂ ಚರ್ಚೆಯಾಗಿ ಇನ್ನು ಮುಂದೆ ಯಾವ ಪರೀಕ್ಷಕನೇ ಆಗಲಿ ಹೀಗೆ ವಿದ್ಯಾರ್ಥಿಗಳಿಗೆ ವಂಚನೆ ಮಾಡಬಾರದು ಎಂದು ನಿರ್ಣಯಿಸಿ ಸಸ್ಯವಿಜ್ಞಾನ ಭಾಗದಲ್ಲಿ ಹೊಸ ಪ್ರಶ್ನೆ ಪತ್ರಿಕೆಯನ್ನೇ ಕೊಡುವ ತೀರ್ಮಾನವನ್ನು ಕೈಗೊಂಡರು. ಸಹನಿಯವರು ಉತ್ತಮ ವರ್ಗದಲ್ಲೇ ಉತ್ತೀರ್ಣರಾದರೆಂದು ಬೇರೆ ಹೇಳಬೇಕಾಗಿಲ್ಲ.

ಇದಾದ ಮೇಲೆ ೧೯೧೧ರಲ್ಲಿ ಬಿ.ಎಸ್‌ಸಿ. ಪದವೀಧರನಾದ ಮಗನನ್ನು ಐ. ಸಿ. ಎಸ್. ಪರೀಕ್ಷೆಗಾಗಿ ಇಂಗ್ಲೆಂಡಿಗೆ ಕಳುಹಿಸುವ ಯೋಚನೆಯನ್ನು ಖುಷಿರಾಂ ಕೈಗೊಂಡರು. ಮಗನಿಗೆ ಪ್ರಯಾಣ ಮಾಡಲು ಆಜ್ಞೆಯೂ ಆಯಿತು. ಬೀರ್‌ಬಲ್ ತಂದೆಯನ್ನು ಕುರಿತು ಅದೊಂದು ಕಟ್ಟಾಜ್ಞೆಯಾದರೆ ತಾನು ಶಿರಸಾವಹಿಸಿ ಪಾಲಿಸುವುದಾಗಿಯೂ, ಈ ವಿಷಯದಲ್ಲಿ ತನ್ನ ಅಭಿಮತವೇನನ್ನಾದರೂ ಪರಿಗಣಿಸುವುದಾದರೆ ಇಂಗ್ಲೆಂಡಿನಲ್ಲಿ ತಾನು ತನಗೆ ಅತ್ಯಂತ ಪ್ರಿಯವಾದ ಸಸ್ಯವಿಜ್ಞಾನವನ್ನು ಮಾತ್ರ ಅಧ್ಯಯನ ಮಾಡುವುದಾಗಿಯೂ ದಿಟ್ಟತನದ ಉತ್ತರವನ್ನಿತ್ತನು. ವಿಜ್ಞಾನ ಪ್ರಿಯರಾದ ಖುಷಿರಾಂ ಮಗನ ಅಭಿಮತಕ್ಕೆ ಶರಣಾದರು. ಎಷ್ಟೇ ಆಗಲಿ ವಿದ್ಯಾ ಪಕ್ಷಪಾತಿಗಳು. ಮಗನ ದಿಟ್ಟತನವೂ ತಂದೆಯ ಹೃದಯವನ್ನು ಸೂರೆಗೊಂಡಿತು ಬೀರ್‌ಬಲ್ ಕೇಂಬ್ರಿಡ್ಜ್‌ನಲ್ಲಿ ಓದುತ್ತಿದ್ದಾಗ ಪ್ರೊ|| ಖುಷಿರಾಂ ಮ್ಯಾಂಚೆಸ್ಟರ್ ವಿಶ್ವವಿದ್ಯಾನಿಲಯದಲ್ಲಿ ಕೊಂಚಕಾಲ ಪ್ರೊ|| ಅರ್ನೆಸ್ಟ್ ರುಥರ್‌ಫರ್ಡ್‌ರೊಡನೆ ವಿದ್ಯುತ್‌ವಿಕಿರಣ ಕ್ರಿಯೆ (Radio-activity)ಯ ಮೇಲೆ ಸಂಶೋಧನೆಗಳನ್ನು ನಡೆಸಿದರು. ಆಗ ಮಗನಿಂದ ಬಹು ಸಹಾಯವೂ ಆಯಿತು.

ಅಲ್ಲದೆ ತನ್ನ ತಂದೆಯವರೊಡಗೂಡಿ ಅನೇಕ ಬಾರಿ ಹಿಮಾಲಯಾ ಪರ್ವತ ಶ್ರೇಣಿಗಳಲ್ಲಿ ಸುತ್ತಾಡಿ ನಿಸರ್ಗದ ಸುಖವನ್ನು ಅನುಭವಿಸಿದ್ದಾರೆ. ವಿಹಾರದ ಜೊತೆಗೆ ವಿಜ್ಞಾನವೂ ಪರಿಚಯವಾಯಿತು! ಒಮ್ಮೆ ೧೯೧೧ರಲ್ಲಿ ಜೋಜಿಲಾ ಕಣಿವೆಯ ಪ್ರಾಂತದಲ್ಲಿದ್ದ ಮಚಾಯ್ ನೀರ್ಗಲ್ಲಿನ ಪ್ರವಾಹ

ವನ್ನು ನೋಡಲು ಹೋಗಿದ್ದರು. ಇದು ಬಹು ಚಿರಸ್ಮರಣೀಯ ಪ್ರವಾಸ. ಹಿಮಕಂದರವೊಂದರಲ್ಲಿ ಎಂದೋ ಸಿಕ್ಕಿ ಬಿದ್ದು ಸತ್ತುಹೋಗಿದ್ದ ಕುದುರೆ ಅಚ್ಚಳಿಯದೆ ನಿಂತ ಭಂಗಿ ಆಶ್ಚರ್ಯದಾಯಕವಾಗಿ, ಭಯಾನಕವಾಗಿ ಕಂಡು ಬಂತು. ಇಲ್ಲೇ ಬೀರ್‌ಬಲ್ ಕೆಂಪು ಶಿಲಾ ಪಾಚಿಯನ್ನು ಸಂಗ್ರಹಿಸಿದುದು ಸಸ್ಯ ವಿಜ್ಞಾನದಲ್ಲೇ ಇದೊಂದು ಅಪೂರ್ವ ಸಂಗ್ರಹವಾಗಿದೆ.

ಈ ತೆರನಾದ ಸಾಹಸೀ ಪ್ರವೃತ್ತಿಯ ಜತೆಯಲ್ಲೇ ಯುವಕ ಸಹನಿ ಯಲ್ಲಿ ಯೌವನ ಸಹಜವಾದ ತುಂಟತನವೂ ಬೆರೆತಿತ್ತು–ಹಾಲಿನಲ್ಲಿ ಸಕ್ಕರೆ ಬೆರೆತಂತೆ. ಸುಮಾರು ೧೯೦೮ ರಲ್ಲಿ ಸಹನಿ ಮನೆಯವರು ಸಿಮ್ಲಾದಲ್ಲಿ ವಿಹಾರಕ್ಕಾಗಿ ತಂಗಿದ್ದರು. ಇವರೂ, ಇವರೊಡನೆ ತಂಗಿದ್ದ ಮತ್ತೊಂದು ಮನೆಯವರೂ ಒಟ್ಟಿಗೆ ಸೇರಿ ಮನೆಯ ಪಕ್ಕದಲ್ಲಿ ಒಂದು ಸಣ್ಣ ತರಕಾರಿ ತೋಟವನ್ನು ಬೆಳೆಸುತ್ತಿದ್ದರು. ಮಕ್ಕಳಿಗಂತೂ ಈ ಕೆಲಸದಲ್ಲಿ ಬಲು ಅಕ್ಕರೆ. ಸಹನಿ ಮನೆಯವರು ಕಾರಣಾಂತರದಿಂದ ಬೇಗನೆ ಊರಿಗೆ ಹೊರಡಬೇಕಾಯಿತು. ಬೀರ್‌ಬಲ್‌ನಿಗಂತೂ ತಾವೇ ನೀರೆರೆದು ಅಷ್ಟು ದಿನವೂ ಬೆಳೆಸಿದ್ದ ಗಿಡಗಳಲ್ಲಿನ ದೊಡ್ಡ ಕುಂಬಳಕಾಯಿಗಳು, ರಮಣೀಯ ವಾಗಿ ಬೆಳೆದು ನಿಂತಿದ್ದ ಮುಸುಕಿನ ಜೋಳಗಳನ್ನು ಕಂಡು, ಹೋಗಲು ಮನಸ್ಸು ಬಾರದೆ ಅಳುವುದೊಂದು ಬಾಕಿ. ಇನ್ನೊಂದು ಮನೆಯವರಿಗೆ ಇದುಬಿಟ್ಟು ಹೋಗಬೇಕಲ್ಲಾ ಎಂಬ ಅಸೂಯೆ. ಕೈಗೆ ಬಂದ ತುತ್ತು ಬಾಯಿಗಿಲ್ಲವಾಯಿತಲ್ಲಾ ಎಂಬ ಕೊರಗು. ಕೂಡಲೆ ಬೆಳೆದು ನಿಂತ ಕಾಯಿ ಗಳನ್ನೆಲ್ಲಾ ಸದ್ದಿಲ್ಲದೆ ಕಿತ್ತು ಬುಟ್ಟಿಗೆ ತುಂಬಿದರು. ಇದು ಸಾಲದೆಂ ಬಂತೆ ಕತ್ತಲಾದ ಕೂಡಲೆ ಸಹನಿಯ ಮುಖಂಡತ್ವದಲ್ಲಿ ಮನೆಯ ಇಡೀ ಹುಡುಗರ ಸೈನ್ಯ ತೋಟದ ಮೇಲೆ ಧಾಳಿ ನಡೆಸಿ ದೊಡ್ಡ ದೊಡ್ಡ ಕತ್ತರಿಗ ಳಿಂದ ಎಲ್ಲ ಗಿಡಗಳ ಬುಡಗಳಿಗೆ ಕೊಡಲಿ ಪೆಟ್ಟು ಹಾಕಿದರು. ಪಾಪ! ಈ ತೆರನಾದ ಯುದ್ಧವ್ಯೂಹಕ್ಕೆ ಆ ಸಂಸಾರದ ಆಸೆ ಬಲಿಯಾಯಿತು. ಬೆಳೆದು ದೊಡ್ಡವರಾದ ಮೇಲೂ ಈ ಗುಣ ಸಹನಿಯವರನ್ನು ಬಿಟ್ಟು ಹೋಗಲಿಲ್ಲ. ಚೇಷ್ಟೆ ಮಾಡುವ ಚಟ ಆಟಪಾಠಗಳಲ್ಲಿ ಪ್ರವರ್ತಿಸಿತು. ಅವರು ಸದಾ ತಮ್ಮಲ್ಲಿ ಮಂಗನ ಬೊಂಬೆಯೊಂದನ್ನು ಹೊತ್ತು ತಿರುಗುತ್ತಿ ದ್ದರು. ಒಮ್ಮೆ ಮ್ಯೂನಿಚ್ ನಗರದ ಬೀದಿಯಲ್ಲಿ ಅಡ್ಡಾಡುವಾಗ ಇದು

ಅವರ ದೃಷ್ಟಿಯನ್ನು ಸೆಳೆಯಿತಂತೆ. ಬೀರ್‌ಬಲ್ ಸಹನಿಯವರಿಗೆ ಮಕ್ಕಳೆಂದರೆ ಬಹು ಇಷ್ಟ. ತಾವು ಹೋದ ಕಡೆ ಮಕ್ಕಳನ್ನು ಕಂಡಾಗ ಈ ಮಂಗನನ್ನು ತೋರಿಸಿ ಚೇಷ್ಟೆ ಮಾಡುತ್ತಾ ಮಕ್ಕಳ ಜೊತೆಯಲ್ಲಿ ತಾವೊಬ್ಬ ಮಗುವಾಗಿ ನಲಿದಾಡುತ್ತಿದ್ದರು.

ಇವರ ಸ್ನೇಹ ಬಾಂಧವ್ಯಗಳೆಂದರೆ ಬಹು ನಿಕಟವಾದುವು. ಆಪ್ತ ಸ್ನೇಹಿತರ ವಿಷಯದಲ್ಲಂತೂ ವಿಪರೀತ ಮಮತೆ. ಇವರು ಇಂಟರ್ ಮೀಡಿಯಟ್ ಪರೀಕ್ಷೆಗೆ ಕುಳಿತಿದ್ದಾಗ ಇವರ ಅತ್ಯಂತ ಆಪ್ತ ಮಿತ್ರನೊಬ್ಬ ಫೇಲಾದನು. ಈ ಅಗಲಿಕೆಯನ್ನು ಸಹಿಸಲಾರದೆ ಸಹನಿ, ಗಳಗಳ ಅತ್ತು ಬಿಟ್ಟರಂತೆ. ಎರಡು ದಿನ ಊಟವೇ ಸೇರಲಿಲ್ಲ. ಇದನ್ನು ಕಂಡ ಮನೆಯವರಿಗೆಲ್ಲಾ ವಿಶೇಷ ಕಳವಳಕ್ಕೂ ಕಾರಣವಾಯಿತು!

ಇಂಗ್ಲೆಂಡಿನಲ್ಲಿ ಉನ್ನತ ವಿದ್ಯಾರ್ಜನೆ ಮಾಡಿ ಸ್ವದೇಶಕ್ಕೆ ಮರಳಿದ ಮೇಲೆ ಅನೇಕ ಬಾರಿ ಹಿಮಾಲಯ ಪರ್ವತ ಶ್ರೇಣಿಗಳಲ್ಲೆಲ್ಲಾ ಅಲೆದಾಡಿ ಅಪೂರ್ವವಾದ ಸಸ್ಯಗಳನ್ನು ಸಂಗ್ರಹಿಸುತ್ತಿದ್ದರು. ಈ ಪ್ರವಾಸಗಳಲ್ಲೇ ಇವರ ಒಲವು ಕ್ರಮೇಣ ಭೂವಿಜ್ಞಾನದ ಕಡೆಗೂ ಬಹುಮಟ್ಟಿಗೆ ವಾಲಿತು. ಇವರ ವಿಶೇಷ ಅಧ್ಯಯನದ ಪ್ರಾಚೀನ ಸಸ್ಯವಿಜ್ಞಾನಕ್ಕೂ ಹೆಚ್ಚಿನ ಸಹಾಯವೂ ಆಯಿತು. ಅಸಂಖ್ಯಾತ ವಿಜ್ಞಾನ ಸಂಶೋಧನಾ ಪ್ರಬಂಧಗಳು ಬೆಳಕು ಕಂಡವು. ಸುಮಾರು ಮೂರು ಬಾರಿ 'ಇಂಡಿಯನ್ ಅಕೆಡೆಮಿ ಆಫ್ ಸೈನ್ಸಸ್' ಎಂಬ ಸಂಸ್ಥೆಯ ಅಧ್ಯಕ್ಷರಾಗಿ ಚುನಾಯಿತರಾದರು. ಹಲವಾರು ಬಾರಿ 'ಭಾರತೀಯ ಸೈನ್ಸ್ ಕಾಂಗ್ರೆಸ್' ಅಧಿವೇಶನದ ಅಧ್ಯಕ್ಷರಾಗಿಯೂ ಮತ್ತು ಈ ಅಧಿವೇಶನದ ಸಸ್ಯವಿಜ್ಞಾನ ಮತ್ತು ಭೂವಿಜ್ಞಾನ ಶಾಖೆಗಳ ಅಧ್ಯಕ್ಷರಾಗಿಯೂ ಹೆಚ್ಚಿನ ರೀತಿಯಲ್ಲಿ ಗೌರವಿಸಲ್ಪಟ್ಟರು. ಇವರ ವಿಜ್ಞಾನದ ಪ್ರತಿಭೆಗೆ ಮಾರುಹೋದ ಅಮೆರಿಕಾದ ವಿಜ್ಞಾನಿಗಳು ೧೯೪೭ ರಲ್ಲಿ ಇವರನ್ನು ವಿಶೇಷವಾಗಿ ಸನ್ಮಾನಿಸಿದರು. ಇವೆಲ್ಲಕ್ಕೂ ಕಳಶಪ್ರಾಯವೆಂಬಂತೆ ೧೯೫೦ ರಲ್ಲಿ ಸ್ಟಾಕ್ ಹೋಂನಲ್ಲಿ ನಡೆಯಲಿದ್ದ ಅಂತರರಾಷ್ಟ್ರೀಯ ಸಸ್ಯವಿಜ್ಞಾನಿಗಳ ಸಮ್ಮೇಳನದ ಅಧ್ಯಕ್ಷರಾಗಿ ಚುನಾಯಿತರಾದರು. ಈ ಬಗೆಯ ಗೌರವಕ್ಕೆ ಪಾತ್ರರಾದ ಭಾರತೀಯರೇ ಇಲ್ಲವೆನ್ನಬಹುದು. ಆದರೆ ದೈವವಶಾತ್ ಸಹನಿಯವರು ನಿಧನರಾಗಿ ಈ ಸಮ್ಮೇಳನವನ್ನು ವೀಕ್ಷಿಸಲು ಸಾಧ್ಯವಾಗಲಿಲ್ಲ.

ಇದಲ್ಲದೆ ಇಡೀ ವಿಶ್ವದ ಅನೇಕ ಪ್ರಸಿದ್ಧ ವಿಜ್ಞಾನಿಗಳೆಲ್ಲಾ ಸಹನಿಯವರ ಸ್ನೇಹಿತರಾಗಿದ್ದರು.

ಬೀರ್‌ಬಲ್ ಸಹನಿಯವರ ಆಸಕ್ತಿ ಕೇವಲ ಸಸ್ಯ ಜೀವನಕ್ಕೆ ಮೀಸಲಾಗಲಿಲ್ಲ. ಭೂವಿಜ್ಞಾನದಲ್ಲೂ ಅಷ್ಟೇ ಆಸಕ್ತಿಯನ್ನು ತೋರಿಸುತ್ತಿದ್ದರು. 'ಇಂಡಿಯನ್ ಸೈನ್ಸ್ ಕಾಂಗ್ರೆಸಿ'ನ ಭೂವಿಜ್ಞಾನ ಶಾಖೆಯ ಅಧ್ಯಕ್ಷರಾಗಿಯೂ ಸನ್ಮಾನಿತರಾದರು. ಸಹನಿಯವರ ವಿಜ್ಞಾನ ನಾಣ್ಯದ ಎರಡು ಮುಖಗಳೆಂದರೆ ಸಸ್ಯವಿಜ್ಞಾನ ಮತ್ತೊಂದು ಭೂವಿಜ್ಞಾನ. ಡೆಕ್ಕನ್ ಶಿಲಾಸಮುದಾಯದ ಅತ್ಯಂತ ತೊಡಕಿನ ಪ್ರಶ್ನೆಯಾದ ವಯಸ್ಸಿನ ನಿರ್ಣಯಕ್ಕೆ ಸಹನಿಯವರ ಸಲಹೆಗಳು ವಿಶ್ವವಿಖ್ಯಾತ ಭೂವಿಜ್ಞಾನಿಗಳನ್ನೇ ಬೆರಗು ಮಾಡಿದುವು. ವಿಜ್ಞಾನದ ಯಾವ ಭಾಗವನ್ನೇ ಆಗಲಿ ಕಡೆಗಣಿಸಿ ನೋಡುತ್ತಿರಲಿಲ್ಲ. ಆಳವಾಗಿ ಹೊಕ್ಕು ಸಮಸ್ಯೆಯೊಂದರ ಕಾರ್ಯಕಾರಣ ಸಂಬಂಧವನ್ನು ಹೊರಗೆಡಹುತ್ತಿದ್ದರು. ಒಮ್ಮೆ ರೋಹಟಿಕ್ ಸುತ್ತಮುತ್ತಲೂ ಅಡ್ಡಾಡುತ್ತಿದ್ದಾಗ ಪುರಾತನ ನಾಣ್ಯಗಳ ಅಚ್ಚು ಇವರ ಕಣ್ಣಿಗೆ ಬಿತ್ತು. ಪ್ರಾಚ್ಯ ಸಂಶೋಧನೆಯಲ್ಲಿ ಇದೊಂದು ಅಪೂರ್ವ ಶೋಧನೆಯೆಂದು ಪರಿಗಣಿತವಾಗಿದೆ. ಸಹನಿಯವರು ಇದನ್ನೇ ಆಳವಾಗಿ ಅಭ್ಯಾಸಮಾಡಿ ವಿದ್ವತ್ಪೂರ್ಣವಾದ ಲೇಖನವೊಂದನ್ನು ಬರೆದು ಪ್ರಕಟಿಸಿದರು. ಪ್ರಾಚ್ಯ ಸಂಶೋಧಕರೂ ಸಹ ಇವರ ವಿದ್ವತ್ತನ್ನು ಕಂಡು ತಲೆದೂಗಿದರು. ಹೀಗೆ ವಿಜ್ಞಾನದ ಅನೇಕ ಭಾಗಗಳಲ್ಲಿ ಸಹನಿಯವರದು ಮೇಲುಗೈ.

ಇದಲ್ಲದೆ ಲಲಿತಕಲೆಗಳಲ್ಲೂ ಸಹನಿಯವರಿಗೆ ಅಪಾರ ಆಸಕ್ತಿ. ಸಂಗೀತವೆಂದರೆ ಬಹು ಆಸೆ. ತಾವೇ ಸ್ವತಃ ಇಂಪಾಗಿ ಸಿತಾರ್ ಮತ್ತು ಪಿಟೀಲನ್ನು ನುಡಿಸುತ್ತಿದ್ದರು. ಉತ್ತಮ ಚಿತ್ರಕಾರರೂ ಹೌದು. ಶಿಲ್ಪಕಲೆಯಲ್ಲೂ ಅಷ್ಟೇ ಆಸಕ್ತಿ. ಜೇಡಿಮಣ್ಣಿನಲ್ಲಿ ಸುಂದರಮೂರ್ತಿಗಳನ್ನು ಮಾಡುತ್ತಿದ್ದರು. ವಿರಾಮ ದೊರೆತ ವೇಳೆಯಲ್ಲಿ ಲಕ್ನೋವಿನ ಕಲಾಶಾಲೆಯಲ್ಲಿ ವಿದ್ಯಾರ್ಥಿಯಂತೆ ಈ ಕಲೆಯ ಉಪಾಸನೆ ಮಾಡುತ್ತಿದ್ದರು.

ಸಹನಿಯವರಿಗೆ ದೊಡ್ಡದೊಂದು ಆಸೆಯಿತ್ತು. ಯಾವುದೆಂದರೆ ಲಕ್ನೋವಿನಲ್ಲಿ ತಮಗೆ ಅತಿ ಪ್ರಿಯವಾದ ಪ್ರಾಚೀನ ಸಸ್ಯಾವಶೇಷಗಳ ವಿಜ್ಞಾನದ ಸಂಶೋಧನಾಲಯವೊಂದನ್ನು ತೆರೆಯಬೇಕು. ಅದು ಅತ್ಯಾಧುನಿಕ

ವೈಜ್ಞಾನಿಕ ಸಲಕರಣೆಗಳಿಂದ ಸುಸಜ್ಜಿತವಾಗಿರಬೇಕು. ವಿಶ್ವದ ಅನೇಕ ರಾಷ್ಟ್ರಗಳ ವಿಜ್ಞಾನಿಗಳು ಇಲ್ಲಿ ಬಂದು ಕೆಲಸಮಾಡಬೇಕು. ಈ ಸಂಶೋಧನಾಲಯಕ್ಕಾಗಿ ತಮ್ಮ ತನು ಮನ ಧನಗಳನ್ನೆಲ್ಲಾ ಅರ್ಪಿಸಿ ಹಗಲಿರುಳೆನ್ನದೆ ದುಡಿದರು. ನಮ್ಮ ದೇಶದ ಪ್ರಧಾನಿ ಜವಹರಲಾಲ್ ನೆಹರು ಇವರ ನೆಚ್ಚಿನ ಗೆಳೆಯರು. ಅವರಿಗೂ ವಿಜ್ಞಾನದಲ್ಲಿ ವಿಶೇಷ ಆಸಕ್ತಿ. ಭಾರತ ರಾಷ್ಟ್ರ ವೈಜ್ಞಾನಿಕ ದೃಷ್ಟಿಯನ್ನು ಬೆಳೆಸಿಕೊಳ್ಳಬೇಕೆಂಬ ಹಂಬಲ. ಸಹನಿಯವರ ಈ ಉದ್ಯಮಕ್ಕೆ ಉತ್ತರ ಪ್ರಾಂತ್ಯ ಸರಕಾರದವರು ಲಕ್ಷಾಂತರ ರೂಪಾಯಿಗಳನ್ನು ಹಲವಾರು ಎಕರೆ ನಿವೇಶನವನ್ನೂ ಇತ್ತು ಪ್ರೋತ್ಸಾಹಿಸಿದರು. ಭಾರತ ಸರಕಾರದವರೂ ಲಕ್ಷಾಂತರ ಸಹಾಯ ದ್ರವ್ಯ ನೀಡಿದರು. ಸ್ವತಃ ನೆಹರೂ ಅವರೇ ೧೯೪೯ ನೇ ಇಸವಿಯ ಆದಿ ಭಾಗದಲ್ಲಿ ಸಹನಿಯವರ 'ಪೇಲಿಯೋ ಬೆಟಾನಿಕಲ್ ಇನ್‌ಸ್ಟಿಟ್ಯೂಟ್'ನ ಅಸ್ತಿಭಾರ ಶಿಲೆಯನ್ನು ಪ್ರತಿಷ್ಠಾಪಿಸಿ, ತಮ್ಮ ಮಿತ್ರ ವಿಜ್ಞಾನಿ, ದಾರ್ಶನಿಕ ಬೀರ್‌ಬಲ್ ಸಹನಿಯನ್ನು ಬಾಯಿ ತುಂಬ ಹೊಗಳಿ, ಸಂಶೋಧನಾಲಯವನ್ನು ಹರಸಿದರು. ಈ ಸಮಾರಂಭದ ಉತ್ಸಾಹ ಇನ್ನೂ ಎಲ್ಲರ ಮನಸ್ಸಿನಲ್ಲೂ ಹಸಿರಾಗಿದ್ದಾಗಲೇ ಸಹನಿಯವರ ನಿಧನದ ವಾರ್ತೆಯು ಸಿಡಿಲೆರಗಿತು. ಅದೇ ವರ್ಷ ಏಪ್ರಿಲ್ ೯ ರ ನಡುರಾತ್ರಿ ಸಹನಿಯವರು ನಮ್ಮನ್ನಗಲಿದರು. ಪೂರ್ಣ ಚಂದ್ರನನ್ನು ಗ್ರಹಣ ಹಿಡಿದು ಮಬ್ಬಾಗಿಸುವಂತೆ, ಸಂತೋಷದ ಉತ್ಸಾಹವೆಲ್ಲಾ ಕುಗ್ಗಿ ಹೋಯಿತು. ತಾವು ಕೈಕೊಂಡ ಈ ಪವಿತ್ರ ಕಾರ್ಯವನ್ನು, ವಿಜ್ಞಾನ ತಪೋಮಂದಿರವನ್ನು ಮಹರ್ಷಿ ಸಹನಿಯವರು ಕಣ್ಣಾರ ನೋಡಿ ಆನಂದಿಸಲಾಗಲಿಲ್ಲ.

ಈ ಭವ್ಯ ಕಟ್ಟಡದ, ವಿಜ್ಞಾನ ಕೇಂದ್ರದ ಪ್ರಾರಂಭೋತ್ಸವವನ್ನು ೧೯೫೦ ನೇ ಇಸವಿಯಲ್ಲಿ ಪ್ರಧಾನಿ ನೆಹರೂರವರೇ ನೆರವೇರಿಸುತ್ತಾ ಸಹನಿಯವರನ್ನು ಆ ಸಮಾರಂಭದಲ್ಲಿ ಸ್ಮರಿಸಿ ಕೊಂಡಾಡಿದರು. ಇಡೀ ಏಷ್ಯಾದಲ್ಲೇ ಅತ್ಯಂತ ಉತ್ತಮವಾದ ಈ ಭವ್ಯ ವಿಜ್ಞಾನ ಸಂಶೋಧನಾಲಯವನ್ನು ಸಹನಿಯವರ ಧರ್ಮಪತ್ನಿ ಶ್ರೀಮತಿ ಸಾವಿತ್ರಿ ಸಹನಿಯವರು ನೋಡಿಕೊಳ್ಳುತ್ತಿದ್ದಾರೆ. ಇದೊಂದು ಚಿರಸ್ಮರಣೀಯವಾದ ಸ್ಮಾರಕವಾಗಿ ನಿಂತಿದೆ—ಈ ವಿಜ್ಞಾನ ಮಹರ್ಷಿಗೆ.

# ಸರ್ ಎಂ. ವಿಶ್ವೇಶ್ವರಯ್ಯ

ಇಂಡಿಯಾ ದೇಶದ ಚರಿತ್ರೆಯಲ್ಲಿ ೧೮೬೧ ನೇ ಇಸವಿ ಬಹು ಮಹತ್ವ ಪೂರಿತವಾದ ವರ್ಷ. ಭಾರತದ ಪ್ರಧಾನಿಗಳಾದ ಪಂಡಿತ ಜವಾಹರ್‌ಲಾಲ್ ನೆಹರೂರವರ ಪಿತೃ ಮೋತಿಲಾಲ್ ನೆಹರು, ವಿಖ್ಯಾತವಾದ ಕಾಶಿ ಹಿಂದೂ ವಿಶ್ವವಿದ್ಯಾನಿಲಯದ ಸಂಸ್ಥಾಪಕರಾದ ಪಂಡಿತ ಮದನಮೋಹನ ಮಾಳವೀಯ ಮತ್ತು ಭಾರತದ ಕವಿ ಪುಂಗವನೆನಿಸಿಕೊಂಡ ಗುರುದೇವ ರವೀಂದ್ರನಾಥ ಠಾಕೂರ್ ಅವರು ಜನ್ಮತಾಳಿದ ಸುವರ್ಣ ವರ್ಷ. ಮೈಸೂರಿನ ಹಿರಿಮೆಯನ್ನು ಇಡೀ ವಿಶ್ವದ ನಾನಾ ಮೂಲೆಗಳಿಗೂ ಪ್ರಸರಿಸಿ, 'ಮಾದರಿ ಮೈಸೂರು' ಎಂಬ ಹೆಸರುಬರಲು ಕಾರಣ ಕರ್ತರಾದ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಕೂಡ ಹುಟ್ಟಿದ್ದು ಈ ವರ್ಷದಲ್ಲಿಯೆ.

ವಿಶ್ವೇಶ್ವರಯ್ಯನವರು ಮೈಸೂರಿನವರೇ ಆದರೂ ಅವರ ವಂಶಸ್ಥರು ಇಲ್ಲಿಗೆ ಬಂದು ನೆಲಸುವ ಮುನ್ನ ಹೈದರಾಬಾದಿನ ಮೋಕ್ಷಗುಂಡಂ ಎಂಬ ಹಳ್ಳಿಗೆ ಸೇರಿದವರು. ಇದರಿಂದ ಆ ಹಳ್ಳಿಯ ಹೆಸರಿನ ನಂಟು ಇವರಿಗೆ ಅಂಟಿದೆ. ಇವರ ತಂದೆಯವರು ಶ್ರೀನಿವಾಸಶಾಸ್ತ್ರಿಗಳು. ಶಾಸ್ತ್ರಿಗಳು ಅಷ್ಟಾಗಿ ಐಶ್ವರ್ಯವಂತರಲ್ಲ. ಇವರಿಗೆ ಸಾಹಿತ್ಯ, ಸಂಸ್ಕೃತ ಮತ್ತು ಯೋಗಾಭ್ಯಾಸಗಳಲ್ಲಿ ವಿಶೇಷ ಅಭಿರುಚಿ. ಇಂತಹ ಸತ್ಕುಲಪ್ರಸೂತರಾದ ಶಾಸ್ತ್ರಿಗಳಿಗೆ ಮೂವರು ಗಂಡು ಮಕ್ಕಳು ಮತ್ತು ಒಬ್ಬಳು ಹೆಣ್ಣು ಮಗಳು. ಇವರ ಎರಡನೆಯ ಮಗನೇ ವಿಶ್ವೇಶ್ವರಯ್ಯನವರು. ಇವರ ಜನನ ೧೮೬೧ರ ಸೆಪ್ಟೆಂಬರ್ ೧೫ರಲ್ಲಿ.

ವಿಶ್ವೇಶ್ವರಯ್ಯನವರ ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸವು ನಡೆದದ್ದು ಚಿಕ್ಕಬಳ್ಳಾಪುರದ ಶಾಲೆಗಳಲ್ಲಿ. ಅಲ್ಲಿಂದ ಮುಂದೆ ಅವರು ವಿದ್ಯಾಭ್ಯಾಸಕ್ಕೆ ಬೆಂಗಳೂರಿಗೆ ಬಂದರು. ಬೆಂಗಳೂರಿನಲ್ಲಿ ಅವರು ವಿದ್ಯಾಭ್ಯಾಸದ ಖರ್ಚಿಗಾಗಿ ತುಂಬ ತೊಂದರೆ ಪಡಬೇಕಾಯಿತು. ಬಿಡುವು ವೇಳೆಗಳಲ್ಲಿ ಹುಡುಗರಿಗೆ ಮನೆ ಪಾಠಗಳನ್ನು ಹೇಳುತ್ತಾ, ಬಂದ ಹಣದಿಂದ

ವ್ಯಾಸಂಗವನ್ನು ಮಾಡಿದರು. ಇಷ್ಟು ಹಣದ ಮುಗ್ಗಟ್ಟಿಗೆ ಸಿಕ್ಕಿದ್ದರೂ ಪರೀಕ್ಷೆಯಲ್ಲಿ ಎಂದೂ ಹಿಂದೆ ಬಿದ್ದವರಲ್ಲ. ಬೆಂಗಳೂರು ಸೆಂಟ್ರಲ್ ಕಾಲೇಜಿನ ಬಿ. ಎ. ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು. ಸೆಂಟ್ರಲ್ ಕಾಲೇಜಿನಿಂದ ಪ್ರತಿವರ್ಷವೂ ತೇರ್ಗಡೆಹೊಂದಿ ಹೋಗುತ್ತಿರುವ ವಿದ್ಯಾರ್ಥಿಗಳಲ್ಲಿ ಅತ್ಯಂತ ಪ್ರತಿಭಾವಂತರಾದ ಮತ್ತು ಪ್ರಭಾವಶಾಲಿಗಳಾದ ಹಳೆಯ ವಿದ್ಯಾರ್ಥಿ, ವಿಶ್ವೇಶ್ವರಯ್ಯನವರು. ಆಗ ಇವರ ವಯಸ್ಸು ಕೇವಲ ಇಪ್ಪತ್ತು. ಇಂತಹ ಚಿಕ್ಕವಯಸ್ಸಿನಲ್ಲಿಯೇ ಕಾಲೇಜಿನ ಅಧ್ಯಾಪಕವರ್ಗದಿಂದ ಹೆಚ್ಚಿನ ಪ್ರಶಂಸೆಯನ್ನು ಪಡೆದಿದ್ದರು. ಇವರ ಬುದ್ಧಿಶಕ್ತಿಗೆ ಮಾರು ಹೋದ ಪ್ರಾಧ್ಯಾಪಕರಲ್ಲಿ ಗಣಿತಶಾಸ್ತ್ರದ ಛಾರ್ಲೆಸ್ ವಾಟರ್ಸ್ ಅವರು ಒಬ್ಬರು. ವಾಟರ್ಸ್ ಅವರು ನಿವೃತ್ತಿಹೊಂದಿ, ಸ್ವದೇಶವಾದ ಇಂಗ್ಲೆಂಡಿಗೆ ಹಿಂತಿರುಗಿದ ಮೇಲೂ ತಮ್ಮ ಪ್ರತಿಭಾವಂತ ಶಿಷ್ಯನಲ್ಲಿ ಅತುಳ ಪ್ರೀತಿಯನ್ನಿಟ್ಟುಕೊಂಡಿದ್ದು, ತಮ್ಮ ಪರ್ಯವಸಾನ ಕಾಲದಲ್ಲಿ ಅಜೀವಪರ್ಯಂತರ ಉಪಯೋಗಿಸಲಾಗಿದ್ದ ಷರಟಿನ ಗುಂಡಿಗಳನ್ನು ತಮ್ಮ ನೆನಪಿಗಾಗಿ ಶಿಷ್ಯನಿಗೆ ಕೊಡುವಂತೆ ತಾವೇ ಪತ್ನಿಗೆ ತಿಳಿಸಿದರಂತೆ. ಅದರಂತೆ ವಿಶ್ವೇಶ್ವರಯ್ಯನವರಿಗೆ ಗುರುಗಳ ಭವ್ಯನೆನಪಿನ ಗುಂಡಿಗಳು ಅವರ ಅನಂತರ ಸೇರಿದವಂತೆ.

ವಿಶ್ವೇಶ್ವರಯ್ಯನವರು ಬಿ.ಎ. ಡಿಗ್ರಿ ಪರೀಕ್ಷೆಯಲ್ಲಿ ಉತ್ತಮದರ್ಜೆಯಲ್ಲಿ ತೇರ್ಗಡೆ ಹೊಂದಿದ್ದರಿಂದ ಮುಂದಿನ ವ್ಯಾಸಂಗಕ್ಕೆ ಅಷ್ಟು ತೊಂದರೆಯಾಗಲಿಲ್ಲ. ಆಗ್ಗೆ ಮೈಸೂರು ದೇಶದ ದಿವಾನರಾಗಿದ್ದ ರಂಗಚಾರ್ಲು ಅವರಿಂದ ವಿಶೇಷ ವೇತನ ದೊರೆತು, ಪೂನಾ ಕಾಲೇಜೊಂದರಲ್ಲಿ ಇಂಜನಿಯರಿಂಗ್ ವ್ಯಾಸಂಗವನ್ನು ಮುಂದುವರಿಸಿದರು. ಆ ಪರೀಕ್ಷೆಗಳಲ್ಲೂ ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದಿ, ಬೊಂಬಾಯಿ ವಿಶ್ವವಿದ್ಯಾನಿಲಯದ ಎಲ್.ಸಿ.ಇ. ಮತ್ತು ಎಫ್.ಸಿ.ಇ. ಡಿಗ್ರಿಗಳನ್ನೂ ಪಡೆದರು. ಜೊತೆಗೆ ಉತ್ತಮ ಶ್ರೇಣಿಯಲ್ಲಿ ತೇರ್ಗಡೆ ಹೊಂದಿದ್ದರಿಂದ "ಬರ್ಕ್ಲೀ" ಬಹುಮಾನವೂ ಕೂಡ ಸಿಕ್ಕಿತು. ಆಗ್ಗೆ ಬೊಂಬಾಯಿ ವಿಶ್ವವಿದ್ಯಾನಿಲಯದಿಂದ ಇಂಜನಿಯರ್ ಪರೀಕ್ಷೆಯಲ್ಲಿ ಉತ್ತೀರ್ಣನಾದ ಪ್ರಪ್ರಥಮ ವಿದ್ಯಾರ್ಥಿಗೆ ಮರಾಮತ್ ಇಲಾಖೆಯಲ್ಲಿ ಅಸಿಸ್ಟೆಂಟ್ ಇಂಜನಿಯರ್ ಸ್ಥಾನ ಕಾದಿರುತ್ತಿತ್ತು.

ಅದರಂತೆ ವಿದ್ಯಾರ್ಥಿ ದೆಸೆಯಲ್ಲಿ ಪ್ರತಿಭಾಶಾಲಿಯಾಗಿದ್ದ ವಿಶ್ವೇ

ಶ್ವರಯ್ಯನವರು ಬೊಂಬಾಯಿ ಸರ್ಕಾರದಲ್ಲಿ ಅಸಿಸ್ಟೆಂಟ್ ಇಂಜನಿಯರ್ ಆಗಿ ನಾಸಿಕ್ ಜಿಲ್ಲೆಯಲ್ಲಿ ತಮ್ಮ ಅಧಿಕಾರವನ್ನು ೧೮೮೪ ರಲ್ಲಿ ಪ್ರಾರಂಭ ಮಾಡಿದರು. ತಾವು ವಿದ್ಯಾರ್ಥಿಯಾಗಿದ್ದಾಗ ಗುರುಹಿರಿಯರಲ್ಲಿ ಎಷ್ಟು ಗೌರವ ಭಕ್ತಿಗಳನ್ನಿಟ್ಟುಕೊಂಡಿದ್ದರೋ ಅಷ್ಟೇ ಗೌರವವನ್ನು ಮೇಲಿನ ಅಧಿಕಾರಿಗಳಲ್ಲಿಟ್ಟದ್ದರು. ಆದಾಗ್ಗೂ ಭಿನ್ನಾಭಿಪ್ರಾಯವಿದ್ದಾಗ ಮುಚ್ಚು ಮರೆಯಿಲ್ಲದೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದರು ಹಾಗೆಯೇ ತಮ್ಮ ಕೆಳಗಿನ ಅಧಿಕಾರಿಗಳಿಗೂ ಸಹ ಅದೇ ಸ್ವಾತಂತ್ರ್ಯವನ್ನು ನೀಡಿದ್ದರು. ನೌಕರಿಯ ತಾರುಣ್ಯದಲ್ಲಿಯೇ ಇವರಿಗೆ ನಾಸಿಕ್ ಜಿಲ್ಲೆಯಿಂದ ಖಾಸ್ ದೇಶ ಜಿಲ್ಲೆಗೆ ವರ್ಗವಾಯಿತು. ಪಂಜ್ರಾ ನದಿಯಿಂದ "ಸೈಫನ್" ಮೂಲಕ ನೀರು ಪಡೆಯುವ ಮುಖ್ಯವಾದ ಕೆಲಸದ ಜವಾಬ್ದಾರಿಯನ್ನೂ ಇವರು ಹೊರಬೇಕಾಯಿತು. ಕೆಲಸದ ಆರಂಭದಲ್ಲಿಯೆ ಮಳೆಯಿಂದ ಬಹಳ ಅನಾನುಕೂಲವಾಯಿತು. ಆದರೂ ಇಂತಹ ನಿಷ್ಠಾವಂತ ಅಧಿಕಾರಿಗೆ, ಸುಸೂತ್ರವಾಗಿ "ಸೈಫನ್" ಕೆಲಸವನ್ನು ಮುಗಿಸಲು ತೊಂದರೆಯಾಗಲಿಲ್ಲ. ಇದರಿಂದ ಸಕಾಲದಲ್ಲಿ ನೂರಾರು ಎಕರೆ ಭೂಮಿಗೆ ನೀರನ್ನು ಒದಗಿಸಿ, ಮೇಲಧಿಕಾರಿಗಳ ಮೆಚ್ಚುಗೆಗೆ ಪಾತ್ರರಾದರು.

ಇಂಜನಿಯರ್ ಶಾಖೆಯಲ್ಲಿರುವ ಅಧಿಕಾರಿಗಳು ತಮ್ಮ ಇಲಾಖೆಯ ಪರೀಕ್ಷೆಗೆ ಕುಳಿತು ಅರ್ಹತೆ ಪಡೆಯಬೇಕು. ಅದರಂತೆ ವಿಶ್ವೇಶ್ವರಯ್ಯನ ವರು ನೌಕರಿಗೆ ಸೇರಿದ ವರ್ಷದಲ್ಲಿಯೇ, ಇಲಾಖೆಯ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಇದರಿಂದ ಇವರಿಗೆ ಬಡ್ತಿದೊರೆತು, ಮೊದಲನೆಯ ದರ್ಜೆಯ ಇಂಜನಿಯರಾದರು. ಈ ಕಾರಣ ತಮ್ಮಲ್ಲಿ ಸ್ವಾಭಾವಿಕವಾಗಿ ಹುದುಗಿದ್ದ ಪ್ರತಿಭೆಯನ್ನು, ತೋರಿಸುವ ಸದವಕಾಶ ದೊರೆಯಿತು. ಸಿಂಧೂ ನದಿಯಿಂದ ಸಕ್ಕೂರಿಗೆ ನೀರಿನ ಸರಬರಾಜಾಗಬೇಕಾಗಿತ್ತು. ತಮ್ಮದೇ ಆದ ಹೊಸ ಯೋಜನೆಯಿಂದ ಬಗ್ಗಡವಾದ ನದಿಯ ನೀರನ್ನು ಮರಳು ತುಂಬಿದ ಭಾವಿಗಳಿಗೆ ಕೆಳಭಾಗದಿಂದ ಬಿಟ್ಟು, ಅದರ ಮೂಲಕ ಶುದ್ಧಿಯಾಗಿ ಬಂದ ನೀರನ್ನು ಕೊಳವೆಗಳ ಮೂಲಕ ಸರಬರಾಜು ಮಾಡಿ, ಶುದ್ಧಿ ಮಾಡುವುದಕ್ಕೆ ತಗಲಬಹುದಾದ ಅನಾವಶ್ಯಕವಾದ ಖರ್ಚನ್ನು ಉಳಿತಾಯ ಮಾಡಿದರು. ಹೀಗೆಯೇ ಸೂರತ್ ನಗರದ ನೀರಿನ ಯೋಜನೆ

ಯನ್ನು ಯಶಸ್ವಿಯಾಗಿ ಪೂರೈಸಿದರು. ಇದನ್ನು ಕಂಡ ಬೊಂಬಾಯಿ ಸರ್ಕಾರದ ಎಲ್ಲಾ ಉನ್ನತಾಧಿಕಾರಿಗಳೂ ಬಾಯಿತುಂಬ ಹೊಗಳಿದರು. ಈ ಖ್ಯಾತಿಯಿಂದ ೧೮೯೯ ರಲ್ಲಿ ಸಿಂಧ್ ಜಿಲ್ಲೆಯ ಮುಖ್ಯ ಇಂಜನಿಯರಾಗಿ ಬಡ್ತಿ ಪಡೆದರು.

ಜಿಲ್ಲಾ ಇಂಜನಿಯರ್ ಆಗಿ ಅಧಿಕಾರಕ್ಕೆ ಬಂದಮೇಲೆ ಇವರ ಪ್ರತಿಭೆ ಮತ್ತು ದಕ್ಷತೆಗೆ ದಾರಿ ತೋರಿಸಿಕೊಟ್ಟಂತಾಯಿತು. ಸಿಂಧ್ ಜಿಲ್ಲೆಯಲ್ಲಿ ನೀರು ಸರಿಯಾದ ರೀತಿಯಲ್ಲಿ ವಿನಿಯೋಗವಾಗದೆ, ಹೆಚ್ಚು ಜಮೀನುಗಳಿಗೆ ನೀರಿನ ಮುಗ್ಗಟ್ಟುಂಟಾಗಿ ಬಹು ತೊಂದರೆಯಾಗುತ್ತಿತ್ತು. ಇದರ ನಿವಾರಣೆಗಾಗಿ ಬೆಳೆಗಳಿಗನುಗುಣವಾಗಿ ನೀರನ್ನು ಪಡೆಯುವ "ಬ್ಲಾಕ್‌ಸಿಸ್ಟಂ" ಎಂಬ ಹೊಸ ಯೋಜನೆಯನ್ನು ಜಾರಿಗೆ ತಂದರು. ಈ ಯೋಜನೆ ಮೊದಮೊದಲು ಪರಿಹಾಸ್ಯಕ್ಕೆ ಈಡಾಯಿತು. ಅನೇಕ ಬಂಡವಾಳಗಾರರ ಆಕ್ಷೇಪಣೆಗೂ, ಪ್ರಮುಖ ಪತ್ರಿಕೆಗಳ ಟೀಕೆಗೂ ಗುರಿಯಾಯಿತು. ಆದರೂ ಕಾರ್ಯಾಚರಣೆಯಲ್ಲಿ ಪ್ರತಿಯೊಬ್ಬರಿಗೂ ವ್ಯವಸಾಯಕ್ಕೆ ನೀರು ದೊರಕಿ, ಇಡಿ ಜಿಲ್ಲೆಯ ರೈತರಿಂದ ಮೆಚ್ಚುಗೆ ಬಂದಿತು. ಇದಾದ ಮೇಲೆ ಸರ್ಕಾರದಿಂದ ಇಂತಹ ಉನ್ನತಾಧಿಕಾರಿ ಇಡೀ ಭಾರತ ಹಾಗೂ ಇಂಗ್ಲೇಡಿನಲ್ಲಿಯೆ ಇಲ್ಲವೆಂದು ಖ್ಯಾತಿ ದೊರೆಯಿತು.

ಪೂನಾ ದಂಡಿನ ಪ್ರದೇಶದ ಒಂದು ಭಾಗಕ್ಕೆ ನೀರು ಸರಬರಾಜು ಮಾಡುತ್ತಿದ್ದ ಫೈಪ್ ಸರೋವರ ಮಳೆಗಾಲದಲ್ಲಿ ಕೋಡಿಬಿದ್ದು, ನೀರೆಲ್ಲವೂ ವ್ಯರ್ಥವಾಗಿ ಹೋಗುತ್ತಿತ್ತು. ಇದಕ್ಕಾಗಿ ಜಲಾಶಯದ ಕಟ್ಟೆಯನ್ನು ಎತ್ತರ ಮಾಡದೆ, ಹಾಗೆಯೆ ತಡೆಯಬಲ್ಲ 'ಆಟೊಮ್ಯಾಟಿಕ್ ಗೇಟು' ಗಳನ್ನು ಸ್ವಯಂ ಶಕ್ತಿಯಿಂದ ನಿರ್ಮಿಸಿದರು. ಇವುಗಳ ಉಪಯೋಗದಿಂದ ಮಳೆಗಾಲದಲ್ಲಿ ಪ್ರವಾಹ ಬಂದು, ಕೋಡಿಯ ಮೇಲೆ ನೀರು ಹೆಚ್ಚಿದಂತೆಲ್ಲಾ, ಈ ಗೇಟುಗಳು ತಾವಾಗಿಯೇ ಬಾಗಿಲು ತೆರೆದುಕೊಳ್ಳುತ್ತಿದ್ದವು. ಇದರಿಂದ ಸರೋವರದ ಕಟ್ಟೆಗೆ ಯಾವ ಅಪಾಯವೂ, ಆಗುವಂತಿರಲ್ಲಿಲ್ಲ. ತಾನಾಗಿಯೆ ನೀರು ಹೆಚ್ಚಿದಂತೆಲ್ಲಾ ತೆರೆದು, ನೀರು ಕಡಿಮೆಯಾದಂತೆಲ್ಲಾ ಮುಚ್ಚಿಕೊಳ್ಳುವ 'ಆಟೊಮ್ಯಾಟಿಕ್ ಗೇಟು'ಗಳನ್ನು ತಮ್ಮದೆ ಆದ ಕಲಾ ಕೌಶಲ್ಯದಿಂದ ಮೊಟ್ಟ ಮೊದಲಿಗೆ ತೋರಿಸಿಕೊಟ್ಟರು. ಇದನ್ನು ಅನು

ಸರಿಸಿಯೇ, ಮೈಸೂರಿನ ಹತ್ತಿರವಿರುವ ಕೃಷ್ಣರಾಜಸಾಗರದ ಅಣೆಕಟ್ಟಿನಲ್ಲಿಯೂ ಈ ಬಗೆಯ ಬಾಗಿಲುಗಳನ್ನು ಉಪಯೋಗಿಸಿದ್ದಾರೆ.

ಹೀಗೆ ವಿಶ್ವೇಶ್ವರಯ್ಯನವರು ತಮ್ಮ ಪಾಲಿಗೆ ಬಂದ ಪ್ರತಿಯೊಂದು ಅಧಿಕಾರದಲ್ಲೂ ನೀರಾವರಿ ಯೋಜನೆಗಳಲ್ಲಿ ತಮಗಿರುವ ಮೇಧಾಶಕ್ತಿ ಮತ್ತು ಕಲಾಕೌಶಲ್ಯವನ್ನು ತೋರಿಸುತ್ತಾ ಬರಲು, ಪ್ರಾಂತ ಹಾಗೂ ಭಾರತ ಸರ್ಕಾರಗಳಿಂದ ವಿಶೇಷ ಮೆಚ್ಚುಗೆಯನ್ನು ಪಡೆದು, ಅತಿ ಶೀಘ್ರದಲ್ಲಿಯೇ, ಉನ್ನತ ಹುದ್ದೆಗಳಿಗೆ ಬಡ್ತಿ ದೊರೆಯುತ್ತಾ ಬಂದು, ೧೯೦೪ ರಲ್ಲಿ ಬೊಂಬಾಯಿ ಪ್ರಾಂತದ ಸ್ಯಾನಿಟರಿ ಇಂಜನಿಯರಾಗಿ ನೇಮಿತರಾದರು. ಈ ಕಾಲದಲ್ಲಿ ಕರಾಚಿ, ಅಹಮದಾಬಾದ್, ಧಾರವಾಡ, ಬಿಜಾಪುರ, ಕೊಲ್ಲಾಪುರ ನಗರಗಳಿಗೆ ಕುಡಿಯುವ ನೀರಿನ ವ್ಯವಸ್ಥೆಗಳು ಇವರ ಸಲಹೆ ಮೇರೆ ಆದುವು. ಇದಲ್ಲದೆ ಆಗಿಂದಾಗ್ಗೆ ಅನೇಕ ಸಾರ್ವಜನಿಕ ಸಮಿತಿಗಳಲ್ಲಿ ತಮ್ಮ ಉತ್ತಮ ಸಲಹೆಗಳನ್ನು ನೀಡಿ ವಿಶೇಷ ಸಹಾಯ ಮಾಡಿದ್ದಾರೆ. ಬೊಂಬಾಯಿ ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯರಾಗಿಯೂ ತಮ್ಮ ಪಾತ್ರವನ್ನು ನಿರ್ವಹಿಸಿದ್ದಾರೆ. ಇದರಿಂದ ಇವರ ಖ್ಯಾತಿಯು ವಿಶ್ವದ ನಾನಾ ಮೂಲೆಗಳಿಗೂ ಹಬ್ಬಿ, ಅಮೇರಿಕಾ ದೇಶದವರು ಕೂಡ ಆಗಿಂದಾಗ್ಗೆ ಇವರಿಂದ ಸಲಹೆ ಪಡೆಯುತ್ತಿದ್ದರು. ಆ ಕಾಲಕ್ಕೆ ಪ್ರಪಂಚದಲ್ಲಿ ಈ ಉನ್ನತ ಶ್ರೇಣಿಯ ಇಂಜನಿಯರ್‌ಗಳು ಅತಿ ವಿರಳವೆನ್ನಬಹುದು.

ಇಂತಹ ವಿಶ್ವವಿಖ್ಯಾತ ಶಿಲ್ಪಿಯ ನೆರವು ಏಡನ್ ಪಟ್ಟಣಕ್ಕೂ ಬೇಕಾಯಿತು. ಈ ಪಟ್ಟಣ ಅತಿ ಚಿಕ್ಕದಾದರೂ ಕುಡಿಯುವ ನೀರಿಗೆ ಬಹಳ ಶ್ರಮಪಡಬೇಕಾಗಿತ್ತು. ಸಮುದ್ರದ ನೀರನ್ನೇ ಕಾಯಿಸಿ, ಉಪ್ಪುತೆಗೆದು, ನೀರನ್ನು ಉಪಯೋಗಿಸುತ್ತಿದ್ದರು. ಇದರಿಂದ ಲಕ್ಷಾಂತರ ರೂಪಾಯಿಗಳು ವ್ಯಯವಾಗಿ, ಸೌಕರ್ಯವೂ ಕೂಡ ಅಷ್ಟಾಗಿ ಉತ್ತಮವಾಗಿರಲಿಲ್ಲ. ವಿಶ್ವೇಶ್ವರಯ್ಯನವರು ಅಲ್ಲಿಗೆ ಹೋದ ಮೇಲೆ ನಗರಕ್ಕೆ ೬೦ ಮೈಲಿ ದೂರದ ಬೆಟ್ಟಗುಡ್ಡಗಳ ಪ್ರದೇಶದಲ್ಲಿ ಬೀಳುವ ಮಳೆಯ ನೀರಿಗೆ ತಡೆಕಟ್ಟಿ, ಅಲ್ಲಿಂದ ಕೊಳವೆಗಳ ಮೂಲಕ ಕಳುಹಿಸುವ ಏರ್ಪಾಡು ಮಾಡಿದರು. ಏಡನ್‌ಗೆ ನೀರಿನ ಮುಗ್ಗಟ್ಟೇ ಅಲ್ಲದೆ ಕಶ್ಮಲವನ್ನು ಒಯ್ಯುವ ಒಳ ಚರಂಡಿಯ ವ್ಯವಸ್ಥೆಯು ಕೂಡ ಇರಲಿಲ್ಲ. ಈ ಕಾರಣ ನಗರದ ನೈರ್ಮಲ್ಯ ಕೆಟ್ಟು,

ಜನರು ಅಕಾಲ ಮರಣಕ್ಕೆ ತುತ್ತಾಗುತ್ತಿದ್ದರು. ವಿಶ್ವೇಶ್ವರಯ್ಯನವರು ಒಳ ಚರಂಡಿಗಳ ವ್ಯವಸ್ಥೆಯನ್ನು ಶೀಘ್ರದಲ್ಲಿಯೇ ಮಾಡಿ ಮುಗಿಸಿದರು. ಇವರ ಕಾರ್ಯತತ್ಪರತೆ, ಕಲಾಕೌಶಲ್ಯ, ಬುದ್ಧಿಶಕ್ತಿ ಇವನ್ನು ಮೆಚ್ಚಿ, ಸರ್ಕಾರ "ಕೈಸರ್-ಎ-ಹಿಂದ್" ಎಂಬ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿತು.

ವಿಶ್ವೇಶ್ವರಯ್ಯನವರು ಪ್ರತಿಯೊಂದು ಉದ್ಯಮದಲ್ಲೂ ಯಶಸ್ವಿಯಾಗಿ ಪ್ರಗತಿಗಳಿಸಿ, ಸರ್ಕಾರದಲ್ಲಿ ಉನ್ನತಾಧಿಕಾರಕ್ಕೆ ಏರುತ್ತಾ ಬಂದದ್ದು, ಹಲವರಿಗೆ ಸಹಿಸದಾಯಿತು. ಇದನ್ನರಿತ ವಿಶ್ವೇಶ್ವರಯ್ಯನವರು ತಮಗೆ ಚೀಫ್ ಇಂಜನೀಯರ್ ಹುದ್ದೆಗೆ ಬಡ್ತಿ ಕೊಡಬೇಕೆಂದೂ, ಹಾಗಲ್ಲದೆ ಇದ್ದಲ್ಲಿ ತಮ್ಮ ರಾಜೀನಾಮೆಯನ್ನು ಅಂಗೀಕರಿಸಬೇಕೆಂದು ಸೂಚಿಸಿದರು. ವಿಶೇಷವಾದ ರೀತಿಯಲ್ಲಿ ಬಡ್ತಿಯನ್ನು ಕೊಡುತ್ತಿದ್ದರೂ, ಇವರಿಂದ ಬಂದಿರುವ ರಾಜಿನಾಮೆಯ ಪತ್ರವನ್ನು ನೋಡಿ, ಸರ್ಕಾರಕ್ಕೆ ಆಶ್ಚರ್ಯವಾಯಿತು. ವಿಶ್ವೇಶ್ವರಯ್ಯನವರು ದಕ್ಷತೆ, ಸಾಮರ್ಥ್ಯ, ಕಲಾಕೌಶಲ್ಯದಲ್ಲಿ ಯಾವ ಭಾರತೀಯ ಹಾಗೂ ಆಂಗ್ಲೇಯ ಅಧಿಕಾರಿಗೂ ಕಡಿಮೆಯಿರಲ್ಲಿಲ್ಲ. ಇದರಿಂದ ಮತ್ತೊಬ್ಬ ಆಂಗ್ಲೇಯ ಚೀಫ್ ಇಂಜನಿಯರ್ ಕೈಕೆಳಗೆ ಕೆಲಸ ಮಾಡಲು ಕೊಂಚವೂ ಇಚ್ಛಿಸಲ್ಲಿಲ್ಲ. ಇದನ್ನು ತಿಳಿದ ಬೊಂಬಾಯಿ ಸರ್ಕಾರ, ನಿವೃತ್ತಿ ಹೊಂದಲು ಪೂರ್ಣ ಅವಧಿಯೂ ಮುಗಿಯದೆ ಇದ್ದರೂ ಕೂಡ, ಅವರಿಗೆ ನಿವೃತ್ತಿ ವೇತನವನ್ನು ಮಂಜೂರು ಮಾಡಿ, ರಾಜೀನಾಮೆಯನ್ನು ಅಂಗೀಕರಿಸಿತು.

ವಿಶ್ವೇಶ್ವರಯ್ಯನವರಿಗೆ ಮೊದಲಿನಿಂದಲೂ ಪ್ರಗತಿ ಪಥದ ಹಾದಿಯಲ್ಲಿರುವ ಪರದೇಶಗಳನ್ನು ನೋಡಬೇಕು, ಅವುಗಳ ವಿಜ್ಞಾನ ಮತ್ತು ಯಾಂತ್ರಿಕ ಸಂಶೋಧನೆಗಳನ್ನು ಅರಿಯಬೇಕು, ನಂತರ ಸ್ವದೇಶದಲ್ಲಿ ಆ ಅನುಭವವನ್ನು ಕಾರ್ಯಾಚರಣೆಯಲ್ಲಿ ತೋರಿಸಬೇಕು ಎಂಬ ಹೆಬ್ಬಯಕೆ. ಬೊಂಬಾಯಿ ಸರ್ಕಾರದಲ್ಲಿ ನಿವೃತ್ತಿ ಹೊಂದಿದ ಮೇಲೆ ಈ ಬಯಕೆಯನ್ನು ಈಡೇರಿಸಲು ಅವಕಾಶ ಒದಗಿತು. ತಮ್ಮ ಸ್ವಂತ ಖರ್ಚಿನ ಮೇಲೆ ಯುರೋಪು ಮತ್ತು ಅಮೇರಿಕಾ ದೇಶಗಳ ಪ್ರವಾಸವನ್ನು ಕೈಗೊಂಡರು. ಇವರು ಪ್ರವಾಸದಲ್ಲಿರುವಾಗಲೆ ಹೈದರಾಬಾದ್ ಸರ್ಕಾರದಿಂದ ಕರೆಬಂತು.

ಆಗ ಹೈದರಾಬಾದಿಗೆ ದಕ್ಷರಾದ ಇಂಜನಿಯರೊಬ್ಬರ ನೆರವು ಅತ್ಯಾವಶ್ಯಕ ವಾಗಿ ಬೇಕಾಗಿತ್ತು. ಇದಕ್ಕೆ ಇವರು ಕೆಲವು ಷರತ್ತುಗಳನ್ನು ಹಾಕಿ, ಅವುಗಳನ್ನು ಒಪ್ಪಿಕೊಳ್ಳುವುದಾದರೆ, ಅಮೇರಿಕಾ ಪ್ರವಾಸವನ್ನೂ ಮುಗಿಸಿ ಕೊಂಡು ಅಲ್ಲಿಗೆ ಬರುವುದಾಗಿ ತಿಳಿಸಿದರು. ಅದಕ್ಕೆ ಹೈದರಾಬಾದ್ ಸರ್ಕಾರ ಒಪ್ಪಿಗೆ ನೀಡಿದುದರಿಂದ ಪ್ರವಾಸ ಮುಗಿಸಿಕೊಂಡು ಬಂದು ೧೯೦೯ ರಲ್ಲಿ ವಿಶೇಷ ಇಂಜನಿಯರಾಗಿ ಸೇರಿದರು. ಇಷ್ಟರಲ್ಲಿ ಮೈಸೂರು ಸರ್ಕಾರದಿಂದಲೂ ಕರೆಬಂದಿತ್ತು. ಆದರೆ ಮೊದಲೇ ಹೈದರಾಬಾದ್ ಸರ್ಕಾರಕ್ಕೆ ಒಪ್ಪಿಗೆ ಕೊಟ್ಟಿದ್ದರಿಂದ ಸಾಧ್ಯವಾಗಲ್ಲಿಲ್ಲ.

ಹೈದರಾಬಾದು ನಗರಕ್ಕೆ ಹತ್ತಿರದಲ್ಲಿ ಮೂಸಾ ಮತ್ತು ಅದರ ಉಪನದಿ ಇಯಾಸಾ ನದಿಗಳಿದ್ದು ಪ್ರತಿ ವರ್ಷವೂ ಪ್ರವಾಹ ಕಾಲದಲ್ಲಿ ಬಹಳ ನಷ್ಟವಾಗುತ್ತಿತ್ತು. ಇವರು ಅಧಿಕಾರ ವಹಿಸಿಕೊಂಡ ತರುವಾಯ, ಕೇವಲ ಅಲ್ಪಾವಧಿಯಲ್ಲಿ, ಬೇಕಾದ ಅಂಕಿ ಅಂಶಗಳೆಲ್ಲವನ್ನೂ ಸಂಗ್ರಹಿಸಿ, ಎರಡು ನದಿಗಳಿಗೂ, ಅಣೆಕಟ್ಟುಗಳನ್ನು ಕಟ್ಟಿಸುವ ಯೋಜನೆಯೊಂದನ್ನು ಸರ್ಕಾರಕ್ಕೆ ಕಳುಹಿಸಿಕೊಟ್ಟರು. ಸರ್ಕಾರ ಖರ್ಚುವೆಚ್ಚಕ್ಕೆ ಹೆದರಿ, ಯೋಜನೆಯನ್ನು ಅಂಗೀಕರಿಸಲು ಹಿಂದುಮುಂದು ನೋಡಿ, ತಮ್ಮ ಸರ್ಕಾರದಿಂದ ನಿವೃತ್ತಿಹೊಂದಿದ್ದ ಚೀಫ್ ಇಂಜನಿಯರೊಬ್ಬರಿಗೆ ಅಭಿ ಪ್ರಾಯಕ್ಕಾಗಿ ಕಳುಹಿಸಿಕೊಟ್ಟರು. ಅವರು ಈ ಯೋಜನೆಯನ್ನು ಪುಷ್ಟೀ ಕರಿಸಿ, ಕೊಂಚವೂ ಕಾಲ ವಿಳಂಬಮಾಡದೆ, ಕಾರ್ಯರೂಪಕ್ಕೆ ತರಬೇಕೆಂದು ಮರುತ್ತರ ಕೊಟ್ಟರು. ನಂತರ ಸರ್ಕಾರದಿಂದ ಯೋಜನೆಯು ಅಂಗೀಕಾರ ವಾಗಿ ತಡವಾಗಿಯಾದರೂ, ೧೯೧೩ರಲ್ಲಿ ಈ ಕಾರ್ಯ ಮೊದಲಾಯಿತು.

ವಿಶ್ವೇಶ್ವರಯ್ಯನವರು ಹೈದರಾಬಾದಿನಲ್ಲಿದ್ದ ಅವಧಿಯಲ್ಲಿ ನೀರಾವರಿ ಯೋಜನೆ ಅಲ್ಲದೆ ನಗರದ ರಸ್ತೆಗಳ ವಿಸ್ತರಣ, ಟಾರ್ ಹಾಗೂ ಸಿಮೆಂಟು ಹಾಕುವುದು, ಕಟ್ಟಡಗಳ ಮತ್ತು ಉದ್ಯಾನವನಗಳ ನಿರ್ಮಾಣ, ನಗರದ ನೀರಿನ ಸರಬರಾಜು, ವಿದ್ಯುತ್ ಸಲಕರಣೆ, ಇವೆಲ್ಲಕ್ಕೂ ಸೂಕ್ತ ಯೋಜನೆ ಯನ್ನು ತಯಾರಿಸಿದರು. ಇವೆಲ್ಲವೂ ಕಾರ್ಯರೂಪಕ್ಕೆ ಬರುವ ಮುನ್ನವೇ ಚೀಫ್ ಇಂಜನಿಯರ್ ಹುದ್ದೆಯಿಂದ ನಿವೃತ್ತಿಹೊಂದಿದರು. ನಂತರ ಮೈಸೂರು ಸಂಸ್ಥಾನದಲ್ಲಿ ಹಲವಾರು ವರ್ಷ ಸೇವೆ ಸಲ್ಲಿಸಿ, ಮತ್ತೆ

ಹೈದರಾಬಾದಿಗೆ ಹಿಂತಿರುಗಿ, ಅವುಗಳೆಲ್ಲವನ್ನು ಯಶಸ್ವಿಯಾಗಿ ಕಾರ್ಯ ರೂಪಕ್ಕೆ ತಂದರು. ಅವರ ಈ ತೆರನಾದ ಕ್ರಿಯಾತ್ಮಕ ಯೋಜನೆಯ ಪರಿ ಪೂರ್ಣತೆಯಿಂದಲೇ ಹೈದರಾಬಾದು ನಗರವು ಇಂದು ಭಾರತದ ಹಲವು ಸುಂದರ ನಗರಗಳಲ್ಲೊಂದಾಗಿ ರಂಜಿಸುತ್ತಿದೆ.

ವಿಶ್ವೇಶ್ವರಯ್ಯನವರಿಗೆ ಮೊದಲಿನಿಂದಲೂ ತೀವ್ರವಾದ ಆಶೆ ಯೊಂದಿತ್ತು. ತಮ್ಮ ಪ್ರವಾಸ ಕಾಲದಲ್ಲಿ ಹೊರದೇಶಗಳಲ್ಲಿ ಗಳಿಸಿ ಬಂದ ಅನುಭವವನ್ನು ತಮ್ಮ ನೆಚ್ಚಿನ ಪ್ರಾಂತವಾದ ಮೈಸೂರಿಗೆ ಉಪಯೋಗಿಸ ಬೇಕೆಂದು. ಆದರೆ ಮೈಸೂರು ಸರ್ಕಾರವು ಅವರ ಆಶೋತ್ತರಗಳಿಗೆ ಬೆಂಬಲ ನೀಡುತ್ತದೆಯೋ ಇಲ್ಲವೋ ಎಂಬ ಶಂಕೆಯಿತ್ತು. ಇಷ್ಟರಲ್ಲಿ ಮೈಸೂರಿನ ಆಂಗ್ಲೇಯ ಚೀಫ್ ಇಂಜನಿಯರ್ ನಿವೃತ್ತಿಹೊಂದಿದ್ದು, ಅಂದಿನ ದಿವಾನ ರಾದ ಶ್ರೀ ಆನಂದರಾಯರೂ ಶ್ರೀಮನ್ಮಹಾರಾಜರವರೂ ಯೋಚಿಸಿ, ದಕ್ಷರಾದ ಮೈಸೂರಿನವರೊಬ್ಬರಿಗೆ ಈ ಸ್ಥಾನವನ್ನು ಕೊಡಬೇಕೆಂದೂ ವಿಶ್ವೇಶ್ವರಯ್ಯನವರೇ ಇದಕ್ಕೆ ಸಮರ್ಥರೆಂದೂ ತೀರ್ಮಾನಮಾಡಿ, ಹೈದರಾ ಬಾದಿನಲ್ಲಿ ಚೀಫ್ ಇಂಜನೀಯರ್ ಆಗಿದ್ದ ಇವರಿಗೆ ಮಹಾರಾಜರವರಿಂದಲೇ ಪತ್ರ ಬರೆಸಿದರು. ಈ ಕಾರಣ ಹೈದರಾಬಾದಿನಲ್ಲಿ ನಿವೃತ್ತಿಹೊಂದಿ, ೧೯೦೯ರ ಸೆಪ್ಟೆಂಬರ್ ತಿಂಗಳಲ್ಲಿ ಮೈಸೂರಿನ ಚೀಫ್ ಇಂಜನಿಯರ್ ಹಾಗೂ ಇಂಜನಿಯರಿಂಗ್ ಮತ್ತು ರೈಲ್ವೆ ಇಲಾಖೆಗಳ ಕಾರ್ಯದರ್ಶಿಗಳಾಗಿ ಅಧಿಕಾರಕ್ಕೆ ಬಂದರು. ಹೀಗೆ ಭಾರತದ ಆದ್ಯಂತ ಆಂಗ್ಲೇಯರಿಗಾಗಿಯೇ ಮೀಸಲಾಗಿದ್ದ ಇಂಜನಿಯರ್ ಸ್ಥಾನಗಳೆಲ್ಲವೂ ಮೊಟ್ಟ ಮೊದಲಿಗೆ ವಿಶ್ವೇಶ್ವ ರಯ್ಯನವರ ಪಾಲಿಗೆ ಬಂದುವು. ಇಂತಹ ಮೇಧಾವಿ ಶಿಲ್ಪಿಯೊಬ್ಬರ ಸಲಹೆಗಳನ್ನು ಬೇರೆ ಪ್ರಾಂತಗಳೂ ಉಪಯೋಗಿಸಿಕೊಳ್ಳಲು ಹಿಂದೆ ಬೀಳ ಲಿಲ್ಲ. ಬರೋಡ, ಭೂಪಾಲ್, ಗ್ವಾಲಿಯರ್, ಕಾಥೆವಾಡ, ಭಾವನಗರ, ಸಾಂಗ್ಲಿ, ಅಕ್ಕಲಕೋಟೆ, ಮೋರ್ವಿ, ಫಲ್ಟನ್, ವಂಕನೇರ ಮುಂತಾದ ಸಂಸ್ಥಾನ ಗಳು, ಫಂಡರಾಪುರ, ಬೆಳಗಾಂ, ನಾಗಪುರ ಮುಂತಾದ ನಗರಗಳು ಇವ ರಿಂದ ವಿಶೇಷ ಸಹಾಯ ಪಡೆದಿವೆ.

ವಿಶ್ವೇಶ್ವರಯ್ಯನವರು ಈ ರೀತಿಯಾಗಿ ತಮ್ಮ ಕಾರ್ಯರಂಗದಲ್ಲಿ ಅದ್ಭುತವಿಜಯ ಪಡೆದು, ಪವಾಡ ಪುರುಷನಂತೆ ಖ್ಯಾತಿಗಳಿಸಲು ಅವರಲ್ಲಿದ್ದ

ಸದ್ಗುಣಗಳೇ ಕಾರಣ. ಅವರಲ್ಲಿ ಕಂಡು ಬರುವ ಗುಣಗಳು ಪ್ರತಿಯೊಬ್ಬರಿಗೂ ಮಾದರಿಯಾಗಿವೆ. ಅವರಿಗೆ ಸೋಮಾರಿತನವೆಂದರೆ ಕಡುಗೋಪ. ಯಾವಾಗಲೂ ದುಡಿಯುವ ಸ್ವಭಾವದವರು. ದುಡಿದು ಕೆಟ್ಟವನಿಲ್ಲವೆಂಬುದೇ ಅವರ ಮೂಲ ಮಂತ್ರ. ಈಗಲೂ ಅವರ ಇಳಿ ವಯಸ್ಸಿನಲ್ಲಿಯೂ ಅದೇ ಅವಿಶ್ರಾಂತ ಕ್ರಿಯಾಶಕ್ತಿ ಕಾಣುತ್ತಿದೆ. ಮಾಡುವ ಕೆಲಸದಲ್ಲಿ ದೃಢವಾದ ನಂಬಿಕೆಯುಳ್ಳವರು. ಅವರ ದಿನಚರಿಯಲ್ಲಿ ದುಡಿಮೆಗಾಗಿ ೧೦-೧೨ ಗಂಟೆ ಕಾಲ ಮೀಸಲು. ಮೊದಲಿನಿಂದಲೂ ಆಂಗ್ಲೇಯರ ಸಹದ್ಯೋಗಿಗಳಾಗಿ ಕೆಲಸಮಾಡಿರುವುದರಿಂದ ವೇಳೆಯನ್ನು ಬಹುವಾಗಿ ಗೌರವಿಸುವರು. ಅವರಿಗೆ ನಿಯಮಶೀಲತೆ ಮತ್ತು ನಿಯತ ಕಾರ್ಯಕ್ರಮ ಇವುಗಳಲ್ಲಿ ಪೂರ್ಣ ನಂಬಿಕೆ. ಆಯಾ ವೇಳೆಗೆ ಕೆಲಸಗಳು ಜರುಗಲೇಬೇಕು. ಯಾವ ಸಭೆಗೆ ಬರಬೇಕಾಗಿದ್ದರೂ ನಿಯಮಿತ ಕಾಲಕ್ಕೆ ಸರಿಯಾಗಿ ಬರುವರೇ ಹೊರತು ಕೊಂಚ ಮುನ್ನ ಅಥವಾ ಕೊಂಚ ತಡವಾಗಿ ಎಂದೂ ಬಂದವರಲ್ಲ. ಇದನ್ನೇ ಅವರು ಅಧಿಕಾರಿಗಳಿಂದಲೂ ಮತ್ತು ಇತರರಿಂದಲೂ ಬಯಸುತ್ತಿದ್ದರು. ಈಗಲೂ ಅವರಲ್ಲಿ ದಿನ, ವಾರ, ತಿಂಗಳುಗಳ ನಿಯಮಿತ ಕಾರ್ಯಕ್ರಮದ ಪಟ್ಟಿಯಿಲ್ಲದೆ ಇಲ್ಲ.

ಇವೆಲ್ಲಕ್ಕೂ ಮಿಗಿಲಾಗಿ ಅವರ ಆರೋಗ್ಯಭಾಗ್ಯ. ಅವರು ಮಿತ ಆಹಾರಿಗಳು. ಜೊತೆಗೆ ಸಾಕಾದಷ್ಟು ವ್ಯಾಯಾಮ. ಈಗ ಅವರ ೯೫ನೇ ವಯಸ್ಸಿನಲ್ಲಿಯೂ ರೈಲು, ವಿಮಾನ, ಮೋಟಾರುಗಳಲ್ಲಿ ಸಂಚರಿಸುತ್ತಾರೆ. ಸಭೆಗಳಲ್ಲಿ ಕುಳಿತು ಮಾತನಾಡುವ ಅಭ್ಯಾಸವಿಲ್ಲ. ಕಣ್ಣುಗಳು ಇಂದೂ ಪ್ರಕಾಶಮಾನವಾಗಿ ಹೊಳೆಯುತ್ತವೆ. ಕನ್ನಡದ ಸಹಾಯವಿಲ್ಲದೆ ಓದುತ್ತಾರೆ. ಕಿವಿ ಮಾತ್ರ ಕೊಂಚ ಮಂದವಾಗಿದೆ. ದೇಹ ಮಾತ್ರ ಮೊದಲಿನಂತೆಯೆ ಕೃಶವಾದದ್ದು. ಇಂತಹ ಸಣ್ಣ ಶರೀರದಲ್ಲಿ ಹುದುಗಿರುವ ಸಾಮರ್ಥ್ಯ ಎಷ್ಟು ಅಪಾರ ಎಂದು ಆಶ್ಚರ್ಯವಾಗುತ್ತದೆ.

ವಿಶ್ವೇಶ್ವರಯ್ಯನವರು ಆರುಬಾರಿ ಪಾಶ್ಚಿಮಾತ್ಯ ದೇಶಗಳಿಗೆ ಹೋಗಿ ಬಂದಿದ್ದಾರೆ. ಅವರಲ್ಲಿರುವ ಅನೇಕಾನೇಕ ಸದ್ಗುಣಗಳನ್ನು ಹೊತ್ತು ತಂದಿದ್ದಾರೆ. ಆದರೆ ಮಾಂಸಾಹಾರ, ಮಾದಕ ದ್ರವ್ಯಗಳ ಸೇವನೆ ಇವುಗಳ ಕಡೆ ಎಂದೂ ಗಮನಕೊಟ್ಟವರಲ್ಲ. ಅಷ್ಟುಸಾರಿಯ ಪ್ರವಾಸಗಳಲ್ಲೂ

ಬರಿಯ ಶಾಕಾಹಾರದಲ್ಲೇ ಇದ್ದರು ಎಂದರೆ ಆಶ್ಚರ್ಯವಾಗುತ್ತದೆ. ಸಿಗರೇಟಿನ ಹವ್ಯಾಸ ಕಂಡವರೇ ಅಲ್ಲ. ಪಾಶ್ಚಿಮಾತ್ಯಪದ್ಧತಿಗಳಲ್ಲಿ ವಿಶೇಷ ಗೌರವವಿಟ್ಟುಕೊಂಡಿದ್ದಾರೆ. ಮೈಸೂರಿನ ವೈಶಿಷ್ಟ್ಯವಾದ ಜರಿ ರುಮಾಲು ಬಿಟ್ಟು, ಮಿಕ್ಕೆಲ್ಲಾ ಉಡುಪು ಪಾಶ್ಚಿಮಾತ್ಯರಂತೆಯೇ ಇರುತ್ತದೆ.

ಅವರದು ಸರಳವಾದ ನಿಷ್ಕಳಂಕ ಹೃದಯ. ದುಡ್ಡಿಗಾಗಿ ಎಂದೂ ಆಶಿಪಟ್ಟವರಲ್ಲ. ತಮ್ಮ ಸಂಬಳದಲ್ಲಿ ಬಂದ ಬಹುಭಾಗವನ್ನು ತಮ್ಮ ಬಂಧುಗಳಿಗೂ ಆಪ್ತರಿಗೂ ಹಂಚುತ್ತಿದ್ದರು. ವರ್ಷಕ್ಕೆ ಸುಮಾರು ೨೫,೦೦೦ ರೂಪಾಯಿಗಳೂ ಈ ರೀತಿ ಸದ್ವಿನಿಯೋಗವಾಗುತ್ತಿತ್ತು. ಈಗಲೂ ತಮಗೆ ವೇತನದಲ್ಲಿ ಕೊಂಚ ಮಾತ್ರ ಇಟ್ಟುಕೊಂಡು, ಉಳಿದುದನ್ನು ಬಂಧುಗಳಿಗೆ ಕೊಡುತ್ತಿದ್ದಾರೆ. ಸರ್ಕಾರದ ಹಾಗೂ ಸಾರ್ವಜನಿಕರ ಹಣವನ್ನಾಗಲೀ ಅಥವಾ ವಸ್ತುಗಳನ್ನಾಗಲೀ ಎಂದೂ ದುರ್ವ್ಯಯ ಮಾಡಿದವರಲ್ಲ. ಅವರ ಸತ್ಯ, ನಿಸ್ಪೃಹ ಜೀವನಕ್ಕೆ ಸರ್ಕಾರದ ಮೋಟಾರುಕಾರು, ಕಾಗದ ಇವುಗಳನ್ನೂ ಕೂಡ ಸರ್ಕಾರದ ಕೆಲಸ ಇಲ್ಲದೆ ತಮ್ಮ ಸ್ವಂತ ಕೆಲಸಕ್ಕೆ ಉಪಯೋಗಿಸುತ್ತಿರಲಿಲ್ಲ. ಇದಕ್ಕೆ ಅನೇಕ ನಿದರ್ಶನಗಳಿವೆ. ಅಧಿಕಾರಿಯಾಗಿ ಹೊರಗಡೆ ಹೋದಾಗಲೂ ಬೇರೆಯವರಿಂದ ಊಟ ಉಪಚಾರಗಳನ್ನು ಸ್ವೀಕರಿಸದೆ, ಅಡಿಗೆಯವನನ್ನು ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿದ್ದರು. ತಮ್ಮ ರಾಜಿನಾಮೆಯನ್ನು ಮಹಾರಾಜರವರಿಗೆ ಸಲ್ಲಿಸಲು ಹೋಗುವಾಗ ಮೈಸೂರಿಗೆ ಸರ್ಕಾರದ ಕಾರಿನಲ್ಲಿ ಹೋದರಂತೆ. ಹಿಂತಿರುಗಿ ಬರುವಾಗ ತಮ್ಮ ಸ್ವಂತ ಕಾರಿನಲ್ಲೇ ಬಂದರಂತೆ. ಇವರು ಕಬ್ಬಿಣದ ಕಾರ್ಖಾನೆಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿ, ನಿವೃತ್ತಿಯಾಗುವಾಗ ಗೌರವ ಸಂಭಾವನೆಯಾಗಿ ಸುಮಾರು ಎರಡು ಲಕ್ಷ ರೂಪಾಯಿಗಳು ಬರಬೇಕಾಗಿತ್ತು. ಆ ಹಣವನ್ನೆಲ್ಲಾ ಸ್ವಂತಕ್ಕೆ ತೆಗೆದುಕೊಳ್ಳದೆ, ಆ ಮೊಬಲಗಿನಿಂದ ಬೆಂಗಳೂರಿನಲ್ಲಿ ಔದ್ಯೋಗಿಕ ಶಿಕ್ಷಣಾ ಶಾಲೆಯನ್ನು ಕಟ್ಟಲು ಸರ್ಕಾರವನ್ನು ಕೇಳಿಕೊಂಡರು. ಇಂತಹ ನಿಷ್ಕಳಂಕ, ನಿಸ್ಪೃಹ, ದಯಾಮಯ ವ್ಯಕ್ತಿ ದೊರೆಯುವುದು ಅತಿ ವಿರಳ.

ವಿಶ್ವೇಶ್ವರಯ್ಯನವರು ಮೈಸೂರಿನಲ್ಲಿ ಮೂರುವರ್ಷಗಳ ಕಾಲ ಚೀಫ್ ಇಂಜನಿಯರ್‌ರಾಗಿಯೂ,ಆರುವರ್ಷಗಳ ಕಾಲ ದಿವಾನರಾಗಿಯೂ ಅಧಿಕಾರ

ದಲ್ಲಿದ್ದು, ನೂರಾರು ವರ್ಷಗಳಲ್ಲಿ ಸಾಧ್ಯವಾಗದ ಮಾರ್ಪಾಟುಗಳನ್ನು ಕೇವಲ ಒಂಭತ್ತು ವರ್ಷಗಳಲ್ಲಿ ಮುಗಿಸಿ, 'ಮಾದರಿ ಮೈಸೂರಿ'ನ ನಿರ್ಮಾಪಕರಾದರು, ಇವರ ಸ್ಥೈರ್ಯ, ಕಲಾಕೌಶಲ್ಯ, ದಕ್ಷತೆ ಮತ್ತು ಮುಂದಾಲೋಚನೆ ಇವುಗಳಿಂದ ಹಲವಾರು ಯೋಜನೆಗಳು ಕಾರ್ಯಗತವಾಗಿ, ಆಡಳಿತ ಎಲ್ಲಾ ವಿಧಗಳಲ್ಲೂ ಮುಂದುವರಿದಿದೆ. ಇವರ ಕಾಲದಲ್ಲಿ ಕೈಗಾರಿಕೆಗಳು, ಜಲಾಶಯಗಳು, ಹಳ್ಳಿಗಳ ಅಭಿವೃದ್ಧಿ, ಆರ್ಥಿಕಾಭಿವೃದ್ಧಿ, ಶಿಕ್ಷಣ ಇವುಗಳಿಗೆ ಮುಖ್ಯವಾಗಿ ಗಮನಕೊಡಲಾಯಿತು. ಇವರು ಅಧಿಕಾರ ವಹಿಸಿಕೊಂಡಾಗ ಮೈಸೂರು ಕೈಗಾರಿಕೆಯಲ್ಲಿಯೇ ಆಗಲಿ, ವ್ಯವಸಾಯದಲ್ಲಿಯೇ ಆಗಲಿ ಅಷ್ಟು ಮುಂದುವರಿದಿರಲಿಲ್ಲ. ಹೀಗಾಗಿ, ಇಂದು ಭಾರತ ಸರ್ಕಾರ ತಯಾರಿಸಿರುವ ಪಂಚವಾರ್ಷಿಕ ಯೋಜನೆಯಂತೆಯೇ, ಮೊಟ್ಟ ಮೊದಲಿಗೆ ಮೈಸೂರಿಗಾಗಿ ಈ ತೆರನಾದ ಯೋಜನೆಯೊಂದು ವಿಶ್ವೇಶ್ವರಯ್ಯನವರಿಂದ ಸಿದ್ಧವಾಯಿತು. ಅಂತಹ ಬೃಹದ್ ಯೋಜನೆಯಲ್ಲಿ ಕಾರ್ಯಗತವಾದ ಮುಖ್ಯಾಂಶಗಳನ್ನು ತಿಳಿಯೋಣ.

ಕೃಷ್ಣರಾಜಸಾಗರ ಅಥವಾ ಕನ್ನಂಬಾಡಿ ಕಟ್ಟೆ ಇವರ ಕಾಲದಲ್ಲಿ ಪ್ರಾರಂಭವಾದ ಭಾರಿ ಅಣೆಕಟ್ಟು. ಮೈಸೂರಿಗೆ ಸುಮಾರು ೧೨ ಮೈಲಿ ದೂರದಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ಹಾಕಿರುವ ಕಟ್ಟೆ ಇದು. ಇದರ ಉದ್ದ ಒಂದೂಮುಕ್ಕಾಲು ಮೈಲಿಯಿದ್ದು, ಎತ್ತರ ನೂರನಲವತ್ತು ಅಡಿಗಳಿವೆ. ಈ ಕೆಲಸ ಪ್ರಾರಂಭವಾದದ್ದು ೧೯೧೧ರಲ್ಲಿ. ಪ್ರಾರಂಭಕ್ಕೆ ಮುಂಚೆ ಬಹಳ ಅಡಚಣೆಗಳುಂಟಾದುವು. ಕಾವೇರಿ ನದಿಯು ಇಲ್ಲಿಂದ ಮುಂದೆ ಹರಿದು, ಮದರಾಸು ಪ್ರಾಂತದಲ್ಲಿ ಪ್ರವೇಶಿಸುತ್ತದೆ. ಇಲ್ಲಿ ಕಟ್ಟೆ ಹಾಕುವುದರಿಂದ ನೀರಿಗೆ ತೊಂದರೆಯಾಗುವುದೆಂದು ಮದರಾಸು ಸರ್ಕಾರದಿಂದ ತಕರಾರು ಬಂದಿತು. ಜೊತೆಗೆ ೨೫೩ ಲಕ್ಷ ರೂಪಾಯಿಗಳು ಅಂದಾಜಾಗಿದ್ದ ಈ ಬೃಹದ್ ಯೋಜನೆಯನ್ನು ಅಂಗೀಕರಿಸಲು, ಮೈಸೂರು ಸರ್ಕಾರಕೂಡ ತಕ್ಷಣ ಮನಸ್ಸುಮಾಡಿರಲಿಲ್ಲ. ಇಂತಹ ಅಡಚಣೆಗಳೆಲ್ಲಕ್ಕೂ ಎದೆಗುಂದದೆ, ತಾಳ್ಮೆಯಿಂದ ಸಮಾಧಾನ ಕೊಟ್ಟು, ತಮ್ಮ ಉದ್ದೇಶ ಸಾಧನೆ ಮಾಡಿದರು. ಅಂದು ಅವರು ತೋರಿಸಿದ ಧೈರ್ಯ, ಸಾಮರ್ಥ್ಯ ದೂರದೃಷ್ಟಿ ಇಂದಿಗೂ ಚಿರಸ್ಮರಣೀಯವಾಗಿವೆ.

ಈ ಭಾರಿ ಅಣೆಕಟ್ಟೆಯ ಕೆಲಸ ೧೯೩೧ ರಲ್ಲಿ ಮುಕ್ತಾಯವಾಯಿತು. ಇದಕ್ಕೆ ತಗಲಿದ ವೆಚ್ಚ ಸುಮಾರು ೧೦ ೧/೨ ಕೋಟಿ ರೂಪಾಯಿಗಳು. ಈ ಕಟ್ಟೆಯ ವೈಶಿಷ್ಟ್ಯವೆಂದರೆ ಸಿಮೆಂಟು ಉಪಯೋಗಿಸದೆಯಿರುವುದು. ಸುಣ್ಣ ಮತ್ತು ಇಟ್ಟಿಗೆ ಪುಡಿಗಳಿಂದ ನಯವಾಗಿ ಅರೆದ ಸುರ್ಕಿ ಗಾರೆಯಿಂದ ನಿರ್ಮಿತವಾಗಿದೆ. ಈ ಕಟ್ಟೆಗೆ ೧೨೪ ಅಡಿಗಳಷ್ಟು ನೀರು ಹಿಡಿದಿಡುವ ಶಕ್ತಿಯಿದೆ. ಇದರಲ್ಲಿನ ೧೭೧ ತೂಬುಗಳಲ್ಲಿ ವಿಶ್ವೇಶ್ವರಯ್ಯನವರಿಂದಲೇ ಮೊಟ್ಟಮೊದಲಿಗೆ ಸೂಚಿತವಾದ ಆಟೋಮ್ಯಾಟಿಕ್ ಬಾಗಿಲುಗಳಿವೆ. ಕಟ್ಟೆಯ ಎಡಭಾಗದಿಂದ ಹೊರಡುವ ೭೦ ಮೈಲಿ ಉದ್ದದ ವಿಶ್ವೇಶ್ವರಯ್ಯನಾಲೆಯಿಂದ ೧,೨೦,೦೦೦ ಎಕರೆಯಷ್ಟು ಜಮೀನಿಗೆ ನೀರು ಸರಬರಾಜಾಗುತ್ತದೆ. ಇದರಿಂದ ಸರ್ಕಾರಕ್ಕೆ ಬರುವ ವಾರ್ಷಿಕ ವರಮಾನ ಸುಮಾರು ಒಂದೂವರೆ ಕೋಟಿ ರೂಪಾಯಿಗಳು, ಅಲ್ಲದೆ ರೈತರಿಗೆ ಬರುವ ವಾರ್ಷಿಕ ವರಮಾನ ಸುಮಾರು ೧೫ ಕೋಟಿ ರೂಪಾಯಿಗಳೆಂದು ಅಂದಾಜು ಮಾಡಲಾಗಿದೆ. ಈ ಕಟ್ಟೆಯಿಂದ ಮಂಡ್ಯ ಜಿಲ್ಲೆಯ ರೈತರಿಗೆ ಉಂಟಾದ ಪ್ರಯೋಜನ ಅಷ್ಟಿಷ್ಟಲ್ಲ. ಆ ಜಿಲ್ಲೆಯ ಜನರಿಗೆ ಪ್ರತ್ಯಕ್ಷನಾಗಿ ವರಕೊಟ್ಟ ದೇವರು, ವಿಶ್ವೇಶ್ವರಯ್ಯನವರು.

ಮತ್ತೊಂದು ಮಹತ್ತರವಾದ ಉದ್ಯಮ ಅಂದರೆ ಭದ್ರಾವತಿಯ ಕಬ್ಬಿಣದ ಮತ್ತು ಉಕ್ಕಿನ ಕಾರ್ಖಾನೆ. ಆಗ್ಗೆ ಇಂಡಿಯಾ ದೇಶದಲ್ಲಿ ಟಾಟಾ ಕಬ್ಬಿಣದ ಕಾರ್ಖಾನೆಯನ್ನು ಬಿಟ್ಟರೆ ಈ ತೆರನಾದ ಕಾರ್ಖಾನೆ ಮತ್ತೊಂದಿರಲಿಲ್ಲ. ಈ ಕಾರಣ ಬಾಬಾಬುಡನ್ ಬೆಟ್ಟದಲ್ಲಿ ದೊರಕುವ ಕಬ್ಬಿಣದ ಅದುರನ್ನು ಉಪಯೋಗಿಸಿಕೊಂಡು, ಕಬ್ಬಿಣವನ್ನು ತಯಾರಿಸುವ ಯೋಜನೆಯನ್ನು ವಿಶ್ವೇಶ್ವರಯ್ಯನವರು ಕಾರ್ಯರೂಪಕ್ಕೆ ತಂದರು. ಕಾರ್ಖಾನೆಯು ಇನ್ನೂ ಆರಂಭ ದೆಸೆಯಲ್ಲಿರುವಾಗಲೇ, ಯುದ್ಧಾನಂತರ ಧಾರಣೆವಾಸಿಗಳ ಇಳಿತಾಯದ ಪರಿಣಾಮವಾಗಿ, ಈ ಉದ್ಯಮ ಲಾಭದಾಯಕವಲ್ಲವೆಂದು ಸರ್ಕಾರದ ಸಲಹೆಗಾರರು ತೀರ್ಮಾನಕೊಟ್ಟರು. ಆದರೂ ಮೈಸೂರು ದಿವಾನ್ ಪದವಿಯಿಂದ ನಿವೃತ್ತರಾಗಿ ಬೊಂಬಾಯಿಯಲ್ಲಿದ್ದ ವಿಶ್ವೇಶ್ವರಯ್ಯನವರನ್ನು ಕರೆಯಿಸಿಕೊಂಡು, ಕಾರ್ಖಾನೆಯ ಪೂರ್ಣ ಜವಾಬ್ದಾರಿಯನ್ನು ಅವರಿಗೆ ವಹಿಸಿಕೊಟ್ಟರು. ಇವರು ಕಾರ್ಖಾನೆಯ

ಆಡಳಿತವನ್ನು ವಹಿಸಿಕೊಂಡ ಮೇಲೆ ಭದ್ರಾನದಿಯಲ್ಲಿ ಪ್ರವಾಹವುಂಟಾಗಿ ಕಾರ್ಖಾನೆಯೊಳಕ್ಕೆಲ್ಲಾ ನೀರು ನುಗ್ಗಿ, ಬಹಳ ನಷ್ಟವಾಯಿತು. ಇದರಿಂದ ಕಾರ್ಖಾನೆಯ ಜನರಲ್ ಮ್ಯಾನೇಜರ್ ಕೂಡ ಕೆಲಸ ಮುಂದುವರಿಸದೆ ಸುಮ್ಮನಾಗಬೇಕಾಯಿತು. ಈ ಬಗ್ಗೆ ಪ್ರಜಾಪ್ರತಿನಿಧಿ ಸಭೆಯಲ್ಲಿ ಟೀಕೆಗಳಾದುವು. ಎಲ್ಲರೂ 'ಈ ಉದ್ಯಮ ಸರಿಯಲ್ಲ, ಇದೊಂದು ಬಿಳಿ ಆನೆ ಎಂದು ಮೂದಲಿಸಿದರು. ಇಷ್ಟಾದರೂ ವಿಶ್ವೇಶ್ವರಯ್ಯನವರು ಸಾಮಾನ್ಯ ವ್ಯಕ್ತಿಯಂತೆ ಹೆದರಲ್ಲಿಲ್ಲ. ತಮ್ಮ ಪ್ರತಿಭೆಯನ್ನು ತೋರಿಸುವ ಕಾಲವೆಂದು ಇದನ್ನು ಗಣಿಸಿದರು. ತ್ಯಾಗ ಮನೋಭಾವ ಅವರಲ್ಲಿ ತುಂಬಿ ತುಳುಕುತ್ತಿತ್ತು. ಕಾರ್ಖಾನೆಯ ಭವಿಷ್ಯವನ್ನು ಅರಿತು ಪಣತೊಟ್ಟು ಕಾರ್ಖಾನೆಯ ಶ್ರೇಯಸ್ಸಿನಲ್ಲಿ ನಿರತರಾಗಿ, ಕಾರ್ಯವನ್ನು ಮುಂದುವರಿಸಿದರು. ಈ ಮಧ್ಯೆ ಮಲೇರಿಯಾ ಕಾಯಿಲೆಯಿಂದ ನೊಂದು ಬಳಲಿದ ಅನೇಕ ಕೆಲಸಗಾರರು ಸಂಪು ಹೂಡಿದರು. ಆದರೂ ಕೆಚ್ಚೆದೆಯಿಂದ, ವಿಶೇಷ ಸಾಮರ್ಥ್ಯದಿಂದ ಆರುವರ್ಷಗಳ ಕಾಲ ಅವಿಶ್ರಾಂತರಾಗಿ ಕಾರ್ಖಾನೆಯ ಕಾರ್ಯಕಾರಿ ಸಮಿತಿಯ ಅಧ್ಯಕ್ಷರಾಗಿ ದುಡಿದರು.

ಕಾರ್ಖಾನೆಯ ಹಿತ ದೃಷ್ಟಿಯಿಂದ ಹಲವು ತಜ್ಞರಾದ ಅಮೇರಿಕಾದ ನಿಪುಣರನ್ನು ನೇಮಿಸಿಕೊಂಡರು. ಜೊತೆಗೆ ಅಮೇರಿಕಾಕ್ಕೆ ತಾವೇ ಹೋಗಿ, ಇದ್ದಿಲನ್ನು ಉಪಯೋಗಿಸಿಕೊಂಡು ತಯಾರಿಸುತ್ತಿರುವ ಭದ್ರಾವತಿ ಕಾರ್ಖಾನೆಯ ಕಬ್ಬಿಣದ ಗುಣಗಳನ್ನು ವಿವರಿಸಿ, ಈ ಕಬ್ಬಿಣಕ್ಕೆ ಸರಿಯಾದ ಬೆಲೆ ಕೊಡುವ ವ್ಯಾಪಾರದ ಸ್ಥಳವನ್ನು ಸಹ ಗೊತ್ತು ಮಾಡಿಕೊಂಡು ಬಂದರು. ಈರೀತಿಯಾದ ವಿಚಕ್ಷಣತೆ ಮತ್ತು ವಿಶೇಷ ಸಾಮರ್ಥ್ಯಗಳಿಂದ ಆರುವರ್ಷಗಳ ಕಾಲ ಅವಿಶ್ರಾಂತರಾಗಿ ಕಾರ್ಖಾನೆಯ ಕಾರ್ಯ ಕಾರಿ ಸಮಿತಿಯ ಅಧ್ಯಕ್ಷರಾಗಿ ದುಡಿದರು. ಇದರ ಫಲವಾಗಿಯೆ, ಮೊದಮೊದಲು ಎಲ್ಲರ ಮೂದಲಿಕೆಗೂ ಕಾರಣವಾಗಿದ್ದ ಕಾರ್ಖಾನೆ, ಭಾರತದಲ್ಲಿಯೇ ಅಗ್ರಸ್ಥಾನವನ್ನು ಪಡೆದು, ಸರ್ಕಾರಕ್ಕೆ ಬಂಡವಾಳದ ಮೇಲೆ ಶೇಕಡ ೬ ರಂತೆ, ಲಾಭವನ್ನೂ ಕೊಡುತ್ತಿದೆ. ಈಗಿನ ಭಾರತದ ಪಂಚವಾರ್ಷಿಕ ಯೋಜನೆಯಲ್ಲಿ ಈ ಕಾರ್ಖಾನೆಯ ವಿಸ್ತರಣೆಗೆ ಬೇಕಾದಷ್ಟು ಹಣವನ್ನು ಒದಗಿಸಲಿದ್ದಾರೆ. ಈಗ ಕಾರ್ಖಾನೆಯನ್ನು ನೋಡಿದ ಪ್ರತಿಯೊಬ್ಬ

ವ್ಯಕ್ತಿಯೂ ವಿಶ್ವೇಶ್ವರಯ್ಯನವರನ್ನು ಕೊಂಡಾಡುತ್ತಾನೆ.

ದೇಶದ ಪ್ರಗತಿಗೆ ರೈಲುಮಾರ್ಗಗಳು ಅತ್ಯಾವಶ್ಯಕವೆಂದು ವಿಶ್ವೇಶ್ವರಯ್ಯನವರು ಪರಿಗಣಿಸಿದ್ದರು. ಇದಕ್ಕಾಗಿಯೇ ಅವರ ಕಾಲದಲ್ಲಿ ಪ್ರತ್ಯೇಕ ಇಲಾಖೆಯೇ ನಿಯಮಿತವಾಯಿತು. ಇದರಿಂದ ಮೈಸೂರಿನಲ್ಲಿ ಅನೇಕ ರೈಲುಮಾರ್ಗಗಳ ರಚನೆಗಾಗಿ ಸರ್ವೆಮಾಡಲಾಯಿತು. ಅವರ ಯೋಜನೆಯ ಪ್ರಕಾರ ನಿರ್ಮಿತವಾದ ರೈಲುಮಾರ್ಗಗಳು, ಮೈಸೂರು—ಅರಸೀಕೆರೆ, ಬೆಂಗಳೂರು—ಕೋಲಾರ (ಚಿಕ್ಕಬಳ್ಳಾಪುರದ ಮಾರ್ಗವಾಗಿ) ಮತ್ತು ಚಿತ್ರದುರ್ಗ—ಚಿಕ್ಕಜಾಜೂರು, ಇವು ಮೂರು ಮಾತ್ರ. ಇದಲ್ಲದೆ, ಸಮುದ್ರತೀರದ (ರೇವು) ಬಂದರಿನ ಸಂಪರ್ಕವನ್ನು ಇಟ್ಟುಕೊಂಡರೆ ಮೈಸೂರಿನ ವ್ಯಾಪಾರ ವಾಣಿಜ್ಯಕ್ಕೆ ಸಹಾಯಕವಾಗುತ್ತದೆಂದು, ಭಟ್ಕಲ್ ಎಂಬ ಕಡೆ ಪಶ್ಚಿಮತೀರದಲ್ಲಿ ಬಂದರನ್ನು ನಿರ್ಮಿಸುವ ಯೋಜನೆಯನ್ನು ಸಲಹೆಮಾಡಿದ್ದರು. ಈಗ ಬೆಂಗಳೂರಿನಲ್ಲಿ ಸ್ಥಾಪಿತವಾಗಿರುವ ವಿಮಾನ ಕಾರ್ಖಾನೆಯೂ ಕೂಡ ವಿಶ್ವೇಶ್ವರಯ್ಯನವರ ಸಲಹೆಯಿಂದಲೇ ಪ್ರಾರಂಭವಾದುದ್ದು.

ಹೀಗೆ ಮೈಸೂರಿನಲ್ಲಿ ಇಂತಹ ಭಾರಿ ಉದ್ಯಮಗಳಲ್ಲದೆ ಅವರ ಹೆಸರನ್ನು ಸ್ಥಿರವಾಗಿ ಉಳಿಯುವಂತೆ ಮಾಡಿರುವ ಇನ್ನೂ ಅನೇಕ ಕಾರ್ಖಾನೆಗಳೂ, ಸಂಸ್ಥೆಗಳೂ ಇವೆ. ಹೆಸರುವಾಸಿಯಾದ ಮೈಸೂರು ಸಾಬೂನಿನ ಮತ್ತು ಗಂಧದೆಣ್ಣೆಯ ಕಾರ್ಖಾನೆಗಳೂ, ಹತ್ತಿಯ ಮತ್ತು ಎಣ್ಣೆಯ ಗಿರಣಿಗಳು, ಮೈಸೂರು ಬ್ಯಾಂಕು, ಇಂಡಸ್ಟ್ರಿಯಲ್ ವರ್ಕಷಾಪ್, ಮಿಂಟೋ ಕಣ್ಣಾಸ್ಪತ್ರೆ, ಮೈಸೂರು ನಗರಕ್ಕೆ ನೀರೊದಗಿಸುವ ಜ್ಯೂಯಲ್ ಫಿಲ್ಟರ್ಸ್, ನೇಯ್ಗೆ ಕಾರ್ಖಾನೆ, ಪಾತ್ರೆ ಕಾರ್ಖಾನೆ, ಕಾಗದ ಕಾರ್ಖಾನೆ ಇವೆಲ್ಲಕ್ಕೂ ಅವರೇ ಕಾರಣಕರ್ತರು. ಇಷ್ಟಲ್ಲದೆ ಅವರ ಕಾಲದಲ್ಲಿ ಖಾಸಗೀ ಸಂಸ್ಥೆಗಳಿಗೂ ವ್ಯಕ್ತಿಗಳಿಗೂ ಪೂರ್ಣವಾದ ಪ್ರೋತ್ಸಾಹ ದೊರೆತು, ಅನೇಕ ಗಿರಿಣಿಗಳು ಮತ್ತು ಕಾರ್ಖಾನೆಗಳು ನಿರ್ಮಿತವಾದುವು. ಮುದ್ರಾಣಾಲಯಗಳು, ಹತ್ತಿಯ ಮತ್ತು ನೂಲಿನ ಗಿರಿಣಿಗಳು, ಹೆಂಚಿನ ಕಾರ್ಖಾನೆಗಳು ಮತ್ತು ಔಷಧ ತಯಾರಿಕೆಯ ಕಾರ್ಖಾನೆಗಳು ಸ್ಥಾಪಿತವಾದುವು.

ಇಂತಹ ಪ್ರಗತಿದಾಯಕ ಕೆಲಸಗಳನ್ನು ಮಾಡಿದ ಮಹಾವ್ಯಕ್ತಿಗೆ ಬಡರೈತನ ಕಡೆ ದೃಷ್ಟಿ ಹರಿಯದೆ ಇರಲಿಲ್ಲ. ನಮ್ಮ ದೇಶದಲ್ಲಿ ಮುಕ್ಕಾಲು ಮೂರುವೀಸೆ ಜನರು ರೈತರು. ವ್ಯವಸಾಯವನ್ನೇ ನಂಬಿರುವವರು. ಅವರ ಅಭಿವೃದ್ಧಿಯೇ ದೇಶದ ಅಭಿವೃದ್ಧಿ. ಆದ್ದರಿಂದ ಅವರ ಮತ್ತು ಅವರು ವಾಸಿಸುವ ಗ್ರಾಮಾಂತರಗಳ ಹೀನಸ್ಥಿತಿಯೇ ದೇಶದ ಹೀನಸ್ಥಿತಿ ಎಂದು ಅರಿತುಕೊಂಡಿದ್ದರು. ಇದಕ್ಕಾಗಿ ಅವರಿಂದ ಅಮೂಲ್ಯವಾದ ಸಲಹೆಗಳು ಪ್ರಕಾಶಕ್ಕೆ ಬಂದುವು. ಹಳೆಯ ಕಂದಾಚಾರದ ವ್ಯವಸಾಯದ ಪದ್ಧತಿಗಳಿಗೆ ಬದಲಾಗಿ ಹೊಸ ಪದ್ಧತಿಯನ್ನು ಜಾರಿಗೆ ತಂದರು. ಗೊಬ್ಬರ ಉಪಯೋಗಿಸುವ ಕ್ರಮಗಳನ್ನು ಸ್ಪಷ್ಟಪಡಿಸಲಾಯಿತು. ಸಾಲದ ಹೊರೆಯನ್ನು ಹೊತ್ತು ಬಳಲುತ್ತಿರುವ ರೈತನ ಸಹಾಯಕ್ಕೆ ಕಡಿಮೆ ಬಡ್ಡಿಯಲ್ಲಿ ಸುಲಭ ಕಂತುಗಳಲ್ಲಿ ಸಾಲವನ್ನು ಕೊಡುವ ಅಡಮಾನ ಬ್ಯಾಂಕುಗಳು ನಿರ್ಮಿತವಾದುವು. ವ್ಯವಸಾಯಕ್ಕೆ ಬೇಕಾದ ಆಧುನಿಕ ಉಪಕರಣಗಳು ಸುಲಭ ಬೆಲೆಗೆ ದೊರೆಯುವಂತಾದುವು. ಗೊಬ್ಬರ ಸಾಲದ ಕಡೆ ರಾಸಾಯನಿಕ ಗೊಬ್ಬರ ಅಥವಾ ಉಪ್ಪನ್ನು ಉಪಯೋಗಿಸುವ ಕ್ರಮವನ್ನು ಪ್ರಚಾರಮಾಡಿದರು. ದನಗಳೇ ರೈತನ ಆಸ್ತಿ ಎಂದು ಅರಿತು, ಉತ್ತಮ ತಳಿಗಳ ಅಭಿವೃದ್ಧಿಯ ಕಡೆಗೆ ಗಮನ ಕೊಡಲಾಯಿತು. ಭಾವಿ ಪ್ರಜೆಗಳೇ ರೈತನ ಮಕ್ಕಳು ಎಂಬುದನ್ನು ತಿಳಿದು, ಅವರ ವಿದ್ಯಾಭ್ಯಾಸಕ್ಕೆ ಅನುಕೂಲವಾಗಿ, ಪ್ರತಿಗ್ರಾಮದಲ್ಲೂ ಶಾಲೆಗಳೂ ಪ್ರಾರಂಭವಾದುವು. ರೈತನ ಸಂಸಾರದ ಆರೋಗ್ಯವನ್ನು ಕಾಪಾಡಲು ಅಲ್ಲಲ್ಲೆ ಆಸ್ಪತ್ರೆಗಳೂ, ಮಲೇರಿಯಾ ನಿವಾರಣಾ ಕೇಂದ್ರಗಳೂ ನಿರ್ಮಿತವಾದುವು. ಒಂದು ಗ್ರಾಮದ ಪ್ರಗತಿ ಆಯಾಯಾ ಗ್ರಾಮಸ್ಥರ ಸಹಕಾರದಿಂದ ನಡೆಯಬೇಕೆಂದು ಉದ್ದೇಶಿಸಿ, ಗ್ರಾಮಪಂಚಾಯಿತಿಗಳು ಸ್ಥಾಪಿತವಾದುವು. ಇವುಗಳಿಂದ ಆಗಾಗ್ಗೆ ಗ್ರಾಮದ ನೈರ್ಮಲ್ಯ ಮತ್ತು ರಸ್ತೆಗಳ ರಿಪೇರಿಯ ಕಡೆ ಗಮನಕೊಡಲು ಅನುಕೂಲವಾಯಿತು.

ರೈತರಲ್ಲಿ ಸೋಮಾರಿತನ ಹೆಚ್ಚು. ನಿಯಮಿತಕಾಲದಲ್ಲಿ ಮಾಡುವ ವ್ಯವಸಾಯವನ್ನು ಬಿಟ್ಟರೆ, ಮಿಕ್ಕ ಕಾಲವನ್ನು ವೃಥಾ ವ್ಯರ್ಥಮಾಡುತ್ತಾರೆ. ಜೊತೆಗೆ ವ್ಯವಸಾಯ ಒಂದರಿಂದಲೇ ಬರುವ ಉತ್ಪತ್ತಿಯು ಸಾಲದು.

ಇದನ್ನು ನಿವಾರಣೆಮಾಡುವ ಉದ್ದೇಶದಿಂದ ಗ್ರಾಮಾಂತರಗಳಲ್ಲಿ ಉಪ ಕೈಗಾರಿಕೆಗಳನ್ನು ಉಪಕ್ರಮಿಸುವಂತೆ ಪ್ರಚಾರವಾಗುತ್ತಿದೆ. ಈಗಿನ ಸರ್ಕಾರ ದಲ್ಲಿ ಈ ಬಗೆಯ ಯೋಜನೆಗೆ ಪೂರ್ಣವಾದ ಬೆಂಬಲ ದೊರೆತು, ಗ್ರಾಮಾಭಿವೃದ್ಧಿ ಶಾಖೆಯಿದ್ದು, ಗ್ರಾಮಾಂತರ ಕೈಗಾರಿಕೆಯು ವಿಶೇಷವಾದ ಪ್ರಗತಿಯನ್ನು ಗಳಿಸಿದೆ. ಉಪಕೈಗಾರಿಕೆಗಳನ್ನು ಪ್ರಾರಂಭಿಸುವ ರೈತರಿಗೆ ಬೇಕಾದ ಸಲಹೆ ಮತ್ತು ಹಣವನ್ನು ಸರ್ಕಾರ ಕೊಡುತ್ತಿದ್ದಾರೆ. ಇಂತಹ ಯೋಜನೆಯಿಂದ ರೈತನ ನಿರುತ್ಸಾಹ ತೊಲಗಿ, ಹೊಸ ಹುರುಪು ಮೂಡುತ್ತಿದೆ.

ವಿಶ್ವೇಶ್ವರಯ್ಯನವರು ಸಮಾಜದ ರೋಗರುಜಿನಗಳನ್ನು ನಿರ್ಲಕ್ಷಿಸಿದವರಲ್ಲ. ಒಂದು ಉತ್ತಮವಾದ ಸಮಾಜ ಬೆಳೆಯಬೇಕಾದರೆ, ಸರಿಯಾದ ಸುಧಾರಣೆಗಳು ಬೇಕೇಬೇಕು. ಸಮಾಜದ ನ್ಯೂನತೆಗಳನ್ನು ತಿಳಿಸಿ ಇವರು ಅಮೂಲ್ಯವಾದ ಸಲಹೆಗಳನ್ನು ನೀಡಿ ಉಪಕಾರಮಾಡಿದ್ದಾರೆ. ಜಾತಿಪದ್ಧತಿಗಳಲ್ಲಿಯೂ, ವರ್ಣಭೇದಗಳಲ್ಲಿಯೂ ಅವರಿಗೆ ನಂಬಿಕೆಯಿರಲಿಲ್ಲ. ನಮ್ಮಲ್ಲಿರುವ ಈ ಕೀಳು ಮೇಲು ಎಂಬ ಭಾವನೆಯು ನಿರ್ಮೂಲವಾಗುವವರೆಗೂ ದೇಶದ ಪ್ರಗತಿಯಿಲ್ಲವೆಂದು ಸಾರಿದ್ದಾರೆ. ಅಸ್ಪೃಶ್ಯರು ಎಂದು ಸಮಾಜ ನಿರ್ಲಕ್ಷಿಸಿರುವವರ ಉದ್ಧಾರಕ್ಕಾಗಿ ಬೇಕಾದಷ್ಟು ಸಹಾಯಮಾಡಿದ್ದಾರೆ.

ಎಲ್ಲರಲ್ಲೂ ಸಹಕಾರ, ಅನ್ಯೋನ್ಯತೆ, ಪ್ರೀತಿ ಮನೋಭಾವ ಬೆಳೆಯಬೇಕು. ನಮ್ಮಲ್ಲಿ ಬೆಳೆದು ಬಂದಿರುವ ಮದುವೆಯ ಪದ್ಧತಿಗಳಲ್ಲಿ ಮಾರ್ಪಾಟುಗಳಾಗಬೇಕು. ಎಳೆಯ ಅಥವಾ ತೀರ ಇಳಿ ವಯಸ್ಸಿನ ಮದುವೆಗಳನ್ನು ನಿಷೇಧಿಸಬೇಕು. ಮದುವೆ, ಮುಂಜಿ, ತಿಥಿ, ನಾಮಕರಣ ಇತ್ಯಾದಿ ಕಾರ್ಯಗಳಲ್ಲಿ ಶಕ್ತಿಮೀರಿ, ದುಂದುವೆಚ್ಚಮಾಡುವುದನ್ನು ತಪ್ಪಿಸಬೇಕು. ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಬೇಕು. ಬೇರೆಯ ವ್ಯಾಯಾಮ ಪದ್ಧತಿಗಳಿಗೆ ವಿಶೇಷ ಪ್ರೋತ್ಸಾಹ ಕೊಡಬೇಕು. ಹೆಂಡ ಸಾರಾಯಿಗಳ ಸೇವನೆಯನ್ನು ಪೂರ್ಣವಾಗಿ ನಿಷೇಧಿಸಬೇಕು. ಇಂತಹ ಅತ್ಯುತ್ತಮ ಸಲಹೆಗಳನ್ನು ಸಮಾಜದ ಉದ್ಧಾರಕ್ಕಾಗಿ ವಿಶ್ವೇಶ್ವರಯ್ಯನವರು ನೀಡಿದ್ದಾರೆ.

ವಿಶ್ವೇಶ್ವರಯ್ಯನವರಿಂದ ಮೈಸೂರಿನ ರಾಜಕೀಯ ಸುಧಾರಣೆ ಯಾಗಿದೆ. ಮೈಸೂರು ೧೮೮೧ರವರೆಗೆ ಬಹಳ ವರ್ಷ ಬ್ರಿಟಿಷರ ಆಳ್ವಿಕೆ ಯಲ್ಲಿತ್ತು. ಮೈಸೂರಿನಲ್ಲಿ ರಾಜ್ಯಾಡಳಿತ ಸುಸೂತ್ರವಾಗಿ ನಡೆಯುತ್ತಿದ್ದರೂ, ಬ್ರಿಟಿಷರಿಂದ ಮೈಸೂರಿಗೆ ಒಂದು ಗೌರವ ಸ್ಥಾನಮಾನ ದೊರಕಿರಲಿಲ್ಲ. ಆಗ ವಿಶ್ವೇಶ್ವರಯ್ಯನವರು ತಮ್ಮ ದಕ್ಷತೆಯಿಂದಲೂ, ಶ್ರೀಮನ್ಮಹಾರಾಜ ರವರ ಕೀರ್ತಿಯಿಂದಲೂ ಮೈಸೂರು ಮತ್ತು ಬ್ರಿಟಿಷರ ಸರ್ಕಾರಕ್ಕಾಗಿದ್ದ ಹಳೆಯ ಕರಾರನ್ನು ಮಾರ್ಪಡಿಸಿ, ಬೇರೊಂದು ಒಪ್ಪಂದವನ್ನು ಮಾಡಿಸಿ, ಮೈಸೂರಿನ ಗೌರವವನ್ನು ಕಾಪಾಡಿದರು. ಇದರಿಂದ ಬೆಂಗಳೂರಿನ ದಂಡಿನ ಉತ್ಪತ್ತಿಯು ಸಹ ಮೈಸೂರಿಗೆ ಬರುವಂತೆ ತೀರ್ಮಾನವಾಯಿತು.

ದಿವಾನ್ ರಂಗಾಚಾರ್ಲು ಅವರ ಕಾಲದಲ್ಲಿ ಪ್ರಾರಂಭವಾದ ಪ್ರಜಾ ಪ್ರತಿನಿಧಿ ಸಭೆಗೆ ಪೂರ್ಣವಾದ ಸ್ವಾತಂತ್ರ್ಯವಿರದೆ, ಅದು ಬರಿಯ ಸರ್ಕಾರದ ಬೆಂಬಲಿಗರ ಕೂಟವಾಗಿತ್ತು. ಇದನ್ನು ಸುಧಾರಿಸಿ, ಪ್ರತಿನಿಧಿಗಳನ್ನು ಚುನಾಯಿಸುವ ಹಕ್ಕನ್ನು ಪ್ರಜೆಗಳಿಗೆ ಕೊಟ್ಟು, ಚುನಾಯಿತ ಪ್ರತಿನಿಧಿಗಳು ತಮ್ಮ ಅಭಿಪ್ರಾಯಗಳನ್ನು ಮಂಡಿಸಲು ಅವಕಾಶ ಕಲ್ಪಿಸಿಕೊಟ್ಟರು. ಮೊಟ್ಟಮೊದಲಿಗೆ ಆಯವ್ಯಯದ ಪಟ್ಟಿಯು ಕನ್ನಡದಲ್ಲಿ ಮುದ್ರಿತವಾಯಿತು. ವಿಶ್ವೇಶ್ವರಯ್ಯನವರು ಅರ್ಹರಾದ, ದಕ್ಷರಾದ ತರುಣ ಪದವೀಧರರಿಗೆ ಅವಕಾಶ ಕೊಡಲು ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಯ ನಿಯಮ ಗಳನ್ನು ಮಾರ್ಪಾಡು ಮಾಡಿದರು. ಇವರ ಅಧಿಕಾರದ ಅವಧಿಯಲ್ಲಿ ಮೈಸೂರು ದೇಶದ ಆದಾಯ ಸುಮಾರು ೨೫೦ ಲಕ್ಷ ರೂಪಾಯಿಗಳಿಂದ, ೩೧೦ ಲಕ್ಷ ರೂಪಾಯಿಗಳಿಗೆ ಹೆಚ್ಚಿತು. ಇದಲ್ಲದೆ ಇವರು ನಿಯೋಜಿಸಿದ್ದ ಯೋಜನೆಗಳೆಲ್ಲವೂ ಕಾರ್ಯರೂಪಕ್ಕೆ ಬಂದಮೇಲೆ ದೇಶದ ಆದಾಯ ಸುಮಾರು ೧೨ ಕೋಟಿ ರೂಪಾಯಿಗಳಾಯಿತು.

ವಿಶ್ವೇಶ್ವರಯ್ಯನವರು ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಭಾರತದಲ್ಲಿ ಶಾಂತಿ ವಾತಾವರಣ ಸ್ಥಾಪಿಸಲು ಸಮ್ಮೇಳನಗಳಲ್ಲೂ, ಸಮಿತಿ ಗಳಲ್ಲೂ ದುಡಿದು ಸೇವೆ ಸಲ್ಲಿಸಿದ್ದಾರೆ. ರಾಜಕೀಯದಲ್ಲಿ ಅಂತಹ ಉಗ್ರವಾದಿಗಳ ಗುಂಪಿಗೆ ಸೇರಿದವರಲ್ಲ. ನಿಧಾನಿಗಳ ಗುಂಪಿಗೆ ಸೇರಿದವರು. ದೇಶದ ನಾಯಕ ಮಣಿಗಳಾದ ಗೋಪಾಲಕೃಷ್ಣ ಗೋಖಲೆ, ರಾನಡೆ, ಜಯಕರ್,

ತಿಲಕ್, ಮಹಾತ್ಮಗಾಂಧಿಜೀ, ಪಂಡಿತನೆಹರೂ, ಸರದಾರ್ ವಲ್ಲಭಾಯಿ ಪಟೇಲ್, ಅನಿಬೆಸಂಟ್ ಇವೆರೆಲ್ಲರೂ ಇವರಿಗೆ ಚಿರಪರಿಚಿತರು.

ಭಾರತದ ಪ್ರಗತಿಯ ವಿಚಾರವಾಗಿ ೧೯೨೦ ರಲ್ಲಿ ಭಾರತದ ಪುನರುದ್ಧಾರ (Reconstructing India) ಎಂಬ ಪುಸ್ತಕವನ್ನೂ, ೧೯೩೪ ರಲ್ಲಿ "ಭಾರತಕ್ಕೊಂದು ಆರ್ಥಿಕ ಯೋಜನೆ" ಎಂಬ ಪುಸ್ತಕವನ್ನೂ ಪ್ರಕಟಿಸಿದ್ದಾರೆ. ಇದಲ್ಲದೆ ವಿಜ್ಞಾನ ಪ್ರಪಂಚದಲ್ಲಿಯೂ ತಮ್ಮ ಕೈಲಾದ ಸೇವೆಯನ್ನು ಸಲ್ಲಿಸಿದ್ದಾರೆ. ೧೯೨೩ ರಲ್ಲಿ ಭಾರತ ವಿಜ್ಞಾನ ಗೋಷ್ಠಿಯ ಅಧ್ಯಕ್ಷರಾಗಿಯೂ, ೧೯೨೪ ರಲ್ಲಿ ಭಾರತ ಆರ್ಥಿಕ ಗೋಷ್ಠಿಯ ಅಧ್ಯಕ್ಷರಾಗಿಯೂ, ೧೯೩೮ ರಿಂದ ೧೯೪೭ ರವರೆಗೆ ಬೆಂಗಳೂರಿನಲ್ಲಿರುವ ತಾತ ವಿಜ್ಞಾನ ಮಂದಿರದ ವ್ಯವಸ್ಥಾಪಕ ಸಮಿತಿಯ ಅಧ್ಯಕ್ಷರಾಗಿಯೂ ದುಡಿದಿದ್ದಾರೆ.

ಇಂತಹ ಮಹಾವ್ಯಕ್ತಿ ನಮ್ಮ ಮೈಸೂರಿನವರೆಂದು ಹೇಳಿಕೊಳ್ಳುವುದು ನಮಗೊಂದು ಹೆಮ್ಮೆ. ಇವರ ನಡೆನುಡಿಗಳು, ಕಾರ್ಯಾಚರಣೆಗಳು ಎಲ್ಲ ತರುಣರಿಗೂ ಮಾರ್ಗದರ್ಶಕವಾಗಲಿ. ದೇವರು ಇವರಿಗೆ ಇನ್ನೂ ದೀರ್ಘಾಯಸ್ಸು ಆರೋಗ್ಯ ಭಾಗ್ಯಗಳನ್ನೂ ಕರುಣಿಸಲಿ. ದೇಶಕ್ಕೆ ಇನ್ನೂ ಬಹಳ ಕಾಲ ಇವರ ಸಹಾಯ ಸಲಹೆಗಳು ದೊರೆಯಲಿ.

---

# ಒಪ್ಪೋಲೆ

| ಪುಟ | ಪಂಗ್ತಿ | ತಪ್ಪು | ಒಪ್ಪು |
|---|---|---|---|
| iii | ೧೨ | ಮುಂದುವರಿದೆಲ್ಲವೆಂದೇ | ಮುಂದುವರಿದಿಲ್ಲವೆಂದೇ |
| iii | ೧೯ | ಆಳಲು | ಅಳಿಲು |
| iii | ೨೨ | –ದಂತಿರುವ | –ರಂತಿರುವ |
| ೧೮ | ೨೨ | ನ್ಯೂಟನ್ನನ್ನೇ | ನ್ಯೂಟನ್ನನೇ |
| ೩೦ | ೨೦ | ಸುಪಾನ | ಸುಸಾನ |
| ೪೬ | ೨೦ | ಜಾರ್ಜ್ | ಜೀನ್ಸ್ |
| ೪೭ | ೨ | ಜಾರ್ಜ್ | ಜೀನ್ಸ್ |
| ೬೪ | ೧ | ಇದರಲ್ಲೆಲ್ಲಾ | ಇವರಲ್ಲೆಲ್ಲಾ |
| ೬೫ | ೧೮ | ಕಷ್ಟಗಳಲ್ಲಿ | ಕಷ್ಟಗಳೆಲ್ಲಾ |
| ೮೩ | ೮ | ಫ್ರಾನ್ಸ್ | ಪ್ಯಾರಿಸ್ |
| ೯೦ | ೧೭ | ಅವನ್ನೆಲ್ಲಾ | ಅವೆಲ್ಲಾ |
| ೯೫ | ೩ | ಪ್ರಶಂಶಿಸಿದರು | ಪ್ರಶಂಸಿಸಿದರು |
| ೯೮ | ೮ | ಕಂಡು ಕೂಡ | ಕಂಡುಕೊಂಡ |
| ೧೦೪ | ೨೩ | ಧಾರ್ಮೀಯರಾದರೂ | ಧರ್ಮೀಯರಾದರೂ |
| ೧೦೫ | ೧ | ಆಂಘೋಳನ | ಆಂದೋಳನ |
| ೧೦೬ | ೭ | ಹೊರಾಟ | ಹೋರಾಟ |
| ೧೦೬ | ೨೦ | ಭಾವಿಸುತ್ತಿಡ್ಡ | ಭಾವಿಸುತ್ತಿದ್ದ |
| ೧೦೭ | ೮ | ಸಹ | ಸಹನಿ |
| ೧೦೭ | ೧೬ | ಕಾಲಡಲ್ಲಿ | ಕಾಲದಲ್ಲಿ |
| ೧೦೮ | ೨ | ಹೊಕ್ಕನು | ಹೊಕ್ಕರು |
| ೧೦೮ | ೨೨–೨೩ | ನೇತ್ರತ್ವದಲ್ಲಿ | ನೇತೃತ್ವದಲ್ಲಿ |
| ೧೧೨ | ೫ | ಕೋಣೆಗಳನ್ನು | ಕೋಣೆಗಳಲ್ಲಿ |
| ೧೧೪ | ೨೦ | ಪ್ರಶ್ನೆ ಪತ್ರಿಕೆ | ಪ್ರಶ್ನಪತ್ರಿಕೆ |
| ೧೧೪ | ೨೧ | ,, | ,, |
| ೧೧೫ | ೬ | ,, | ,, |
| ೧೧೭ | ೧೫ | ಅಧ್ಯಯನದ | ಅಧ್ಯಯನದಿಂದ |
| ೧೧೮ | ೩ | ಜೀವನ | ವಿಜ್ಞಾನ |
| ೧೧೯ | ೧೧ | ಬೆಟಾನಿಕಲ್ | ಬೊಟಾನಿಕಲ್ |
| ೧೨೨ | ೮–೯ | ಖಾಸ್‌ದೇಶ | ಖಾನ್‌ದೇಶ್ |
| ೧೨೨ | ೧೬ | ಇಂಜನಿಯರ್ | ಇಂಜನಿಯರಿಂಗ್ |
| ೧೨೫ | ೧೬ | ಇಚ್ಛಿಸಲ್ಲಿಲ್ಲ | ಇಚ್ಛಿಸಲಿಲ್ಲ |
| ೧೨೭ | ೨೨ | ಗ್ಯಾಲಿಯರ್ | ಗ್ವಾಲಿಯರ್ |
| ೧೨೭ | ೨೩ | ಮೇರ್ವಿ | ಮೋರ್ವಿ |
| ೧೨೮ | ೨೦ | ಕನ್ನಡದ | ಕನ್ನಡಕದ |
| ೧೨೯ | ೧೭ | ರಾಜಿನಾಮೆಯನ್ನು | ರಾಜೀನಾಮೆಯನ್ನು |
| ೧೨೯ | ೨೩ | ಶಿಕ್ಷಣಾ | ಶಿಕ್ಷಣ |
| ೧೩೨ | ೭ | ಹೆದರಲ್ಲಿಲ್ಲ | ಹೆದರಲಿಲ್ಲ |